ಯುಕರ್ನಾಟಕ ಗ್ರಂಥಮಾಲೆಯ ೩೩ನೆಯ ಹಾಗು ೩೪ನೆಯ ಸಂಯುಕ್ತ ಪುಷ್ಪ

# ಸಾಲುದೀಪ

( ಕಥಾಸಂಗ್ರಹ )

---

ಮೂಲಲೇಖಕರು

**ಶ್ರೀಮಾನ್ ಜೈನೇಂದ್ರ ಕುಮಾರರು**

( ಪ್ರಖ್ಯಾತ ಹಿಂದೀ ಸಾಹಿತಿಗಳು )

---

ಅನುವಾದಕರು

**ಶ್ರೀ. ಗುರುನಾಥ ಜೋಶಿ,**

ಹಿಂದೀ ಜ್ಞಾನಯಾತ್ರಿ ಮಂಡಲ

---

ಮೊದಲ ಮುದ್ರಣ ] ೧೯೩೮ [ ಬೆಲೆ ೧-೦-೦

ಮುದ್ರಕರು
ಮಾಧವ ನಾರಾಯಣ ಮಂಗಳವೇಢೇಕರ,
ಕಲಾಸಿಂಧು ಮುದ್ರಣಾಲಯ,
ರೈಟರ ಓಣಿ, ಧಾರವಾಡ

ಪ್ರಕಾಶಕರು
ರಾಮಚಂದ್ರ ಪಾಂಡುರಂಗ ಬಳಗಾಂವಕರ,
ಜಯಕರ್ನಾಟಕ ಕಾರ್ಯಾಲಯ,
ರೈಟರ ಓಣಿ, ಧಾರವಾಡ

# ಮುನ್ನುಡಿ

ಪ್ರತಿಯೊಂದು ದೇಶದಲ್ಲಿಯೂ ಕಥಾಸಾಹಿತ್ಯವು ಹೆಚ್ಚಾಗಿ ಬೆಳೆಯುತ್ತಿರುವುದು ಭಾರತೀಯ ಭಾಷೆಗಳಲ್ಲಿಯೂ ಅದು ಕೊನರುತ್ತಿರುವುದು ಹಿಂದೀಸಾಹಿತ್ಯದಲ್ಲಿಯೂ ಕಥಾಸಾಹಿತ್ಯವೇ ಹೆಚ್ಚು ಮುಂದರಿದಿರುವುದು ಪ್ರೇಮಚಂದರ ಬಳಿಕ ಕತೆಗಾರರಲ್ಲಿ ಹೆಚ್ಚು ಬೆಳಕಿಗೆ ಬಂದವರೆಂದರೆ ಶ್ರೀ ಜೈನೇಂದ್ರ ಕುಮಾರರು ಹಿಂದೀ ಕತೆಗಾರರಲ್ಲಿ ಜೈನೇಂದ್ರರು ಅತ್ಯಂತ ಬೆಲೆಯುಳ್ಳ ಸುಂದರ ಶಿವಲಿಂಗದಂತೆ ಶೋಭಿಸುತ್ತಿರುವರು ಕಾರಣವಿಷ್ಟೆ ಜೈನೇಂದ್ರಕುಮಾರರು ಮನೋವಿಜ್ಞಾನವನ್ನು ಚೆನ್ನಾಗಿ ಅರಿತವರು ಅವರ ಸಂಸಾರವು ದೊಡ್ಡದು ಅದರ ಜೀವನವನ್ನು ನೋಡುವ, ಪರಿಶೀಲಿಸುವ, ಅಳೆಯುವ ಕಣ್ಣುಗಳೂ ತಕ್ಕಡಿಯೂ ಅವರ ಬಳಿಯಲ್ಲಿವೆ ಅವರಿಗೆ ನೀರತೆಯಿಂದೊಡಗೂಡಿದ ಮನನವಿದೆ, ತೀಕ್ಷ್ಣವಾದ ಸ್ಥಿರವಾದ ವಿದಗ್ಧವಾದ ಅನುಭೂತಿಯಿದೆ ಜೀವನದ ಅನುಭೂತಿಯೆ ಕಲಾಕಾರನ ಸೊತ್ತೆಂಬುದನ್ನು ಅವರು ಚೆನ್ನಾಗಿ ತಿಳಿದವರಾದುದರಿಂದ ಅವರ ಕತೆಗಳು ಹೆಜ್ಜೆಹೆಜ್ಜೆಗೂ ವಾಚಕರ ಮನದಲ್ಲಿ ವಿಚಾರದ ಸುಳಿಗಳನ್ನು ಹುಟ್ಟಿಸುತ್ತ ಅವರನ್ನು ಕೊನೆಯವರೆಗೆ ತಮ್ಮೊಡನೆ ಸೆಳೆದೊಯ್ಯುವವು ಈ ದೃಷ್ಟಿಯಿಂದ ಅವರು ಆಧುನಿಕ ತರುಣ ಕತೆಗಾರರಲ್ಲಿ ಶ್ರೇಷ್ಠಸ್ಥಾನವನ್ನು ಪಡೆದಿರುವರು ಕತೆ ಹೇಳುವ ಅವರ ರೀತಿಯು ಮೋಹಕವಾಗಿದೆ ಅವರ ಕತೆಗಳಲ್ಲಿ ಹೆಚ್ಚಾಗಿ ಮಹಾತ್ಮಾ ಗಾಂಧಿಯವರ ವಿಚಾರಧಾರೆಯು ಅವರ ತೀಕ್ಷ್ಣ ಮನೋವಿಜ್ಞಾನದ ಒರೆಗಲ್ಲಿಗೆ ತಿಕ್ಕಿ ಹರಿದಂತೆ ಕಾಣುವುದು ಸಾಮಾಜಿಕ ಕ್ರಾಂತಿಯು ಒಡಮೂಡಿ ನಿಂತಂತಿರುವುದು ಅವರು ಗಾಂಧೀಜಿಯವರ ಸಂಸಾರಶ್ರೇಷ್ಠ ವ್ಯಕ್ತಿತ್ವದ ಒಂದಂಗವಾಗಿರುವುದೇ ಇದಕ್ಕೆ ಕಾರಣವಾಗಿರಬಹುದು.

ಇವರ ಕತೆಗಳನ್ನು ಕನ್ನಡಿಗರೆದುರು ಇಟ್ಟಿರುವೆನು ಇವನ್ನು ಅವರು ಸಕ್ರಿಯ ಸಹಾನುಭೂತಿಯಿಂದ ಸ್ವಾಗತಿಸುವರೆಂದು ನಂಬಿರುವೆನು.

ಈ ಕಥಾಸಂಗ್ರಹಕ್ಕೆ ' ಸಾಲುದೀಪ 'ವೆಂದು ನಾಮಕರಣಮಾಡಿ, ನನ್ನ ಭಾಷೆಗೆ ಕನ್ನಡದ ಮೆರುಗನ್ನು ಕೊಟ್ಟುದಕ್ಕಾಗಿ ಶ್ರೀ|| ಆನಂದಕಂದರಿಗೂ ಜ ಕ ಗ್ರಂಥಮಾಲೆಯ ಪರವಾಗಿ ಸುಂದರವಾಗಿ ಇದನ್ನು ಬೆಳಕಿಗೆ ತಂದುದಕ್ಕಾಗಿ ಶ್ರೀ|| ಬೇಗಾವಿ ರಾಮಚಂದ್ರರಾಯರಿಗೂ ನಾನು ಕೃತಜ್ಞನು

ತಾ ೧—೨—೩೮ **ಗುರುನಾಥ ಜೋಶಿ**



# ಪರಿವಿಡಿ





(P.T.O.

## ಒಂದು ರಾತ್ರಿ ❀ ❀ ❀ ❀

ಜಯರಾಜನಿಗೆ ಮೂವತ್ತು ವರುಷಗಳಾಗಿರಬಹುದು. ಯಾವಾಗಲೂ ಯೋಚಸಯಲ್ಲಿಯೊ— ಕೆಲಸಬೊಗಸೆಯಲ್ಲಿಯೊ ಇರುತ್ತಾನೆ ತನ್ನ ಪ್ರಾಂತೀಯ ಕಾಂಗ್ರೆಸ್ಸಿನ ಜೀವಾಳವೆಂದರೆ ಆತನೆ ಆಗಿದ್ದಾನೆ ಜನಗಳೂ ಆತನನ್ನು ಅತ್ಯಂತ ಆದರದಿಂದ ಕಾಣುತ್ತಾರೆ ಅವರನ್ನುಳಿದು ಅವನು ಜೀವಿಸಲಾರ ಅವನು ಬದುಕುವುದಾದರೂ ಯಾರಿಗೋಸ್ಕರ ? ಅವನಿಗಿನ್ನೂ ವಿವಾಹವಾಗಿಲ್ಲ 'ಮದುವೆ ಮಾಡಿಕೊಳ್ಳಿ' ಎಂದು ಅವನಿಗೆ ಹೇಳುವ ಧೈರ್ಯವು ಯಾರಿಗೂ ಆಗುವುದಿಲ್ಲ ಅವನಿಗೆ ವಿವಾಹಕ್ಕಷ್ಟೆ ಅಲ್ಲ, ಸಾಯುವುದಕ್ಕೂ ಬಿಡುವುದಕ್ಕೂ ಬಿಡುವಿಲ್ಲವೆಂದೋ ಏನೊ !

ಬೆಳಗಿನ ಜಾವ, ಒಂಬತ್ತು ಗಂಟೆಯಾಗಿರಬಹುದು ಅರ್ಧ ತೋಳಿನದೊಂದು ಷರ್ಟು, ಒಂದು ನಿಕ್ಕರು ತೊಟ್ಟುಕೊಂಡು ಜಯರಾಜ—ಒಂದು ಪರಿಷತ್ತಿನ ಅಧ್ಯಕ್ಷೀಯ ಭಾಷಣವನ್ನು ಅನುಗೊಳಿಸುತ್ತಲಿದ್ದ.

"ತಮ್ಮನ್ನು ಕಾಣಲಿಕ್ಕೆ ಒಂದು ಡೆಪ್ಯುಟೇಶನ್ನು ಬಂದಿದೆ ಜಯರಾಜರು ಅದನ್ನು ಕಾಣುವರೋ ಡೆಪ್ಯುಟೇಶನ್ನು ಒಳಕ್ಕೆ ಬರಬಹುದೋ ?"

"ಅವಶ್ಯವಾಗಿ !"

ಜಯರಾಜ ಕಾಗದಗಳನ್ನು ಅಲ್ಲಿಯೇ ಬಿಟ್ಟು, ಡೆಪ್ಯುಟೇಶನ್ನಿನ ದಾರಿ ಕಾಯಲಾರಂಭಿಸಿದ

ಪ್ರತಿನಿಧಿಗಳು ಬಂದರು ಅವರನ್ನು ಸ್ವಾಗತಿಸಿ "ಅಪ್ಪಣೆ ಕೊಡಿಸಬೇಕು" ಎಂದ ಜಯರಾಜ.

"ತಮ್ಮನ್ನು ಹರಿಪುರಕ್ಕೆ ಕರೆದೊಯ್ಯಬೇಕೆಂದು ಬಂದಿದ್ದೇವೆ."

"ಹರಿಪುರ.. !"

"ತಾವು ಒಂದು ಸಲವೂ ಅಲ್ಲಿಗೆ ದಯಮಾಡಿಸಿಲ್ಲ. ನಮ್ಮೂರಲ್ಲಿ ಇಸವಿ ಸನ್ ೧೯೩೦ರಲ್ಲಿ ಎಷ್ಟೋ ಸಲ ಲಾಠೀ ಚಾರ್ಜುಗಳಾದುವು ನಮ್ಮ ತಾಲೂಕಿನಿಂದ ಇನ್ನೂರಿಗಿಂತ ಹೆಚ್ಚು ಜನ ಸ್ವಯಂಸೇವಕರು ಸೆರೆಮನೆಯನ್ನು ಸೇರಿದರು ಅವರಲ್ಲಿ ೨೦ ಜನರು ಹೆಂಗಸುರು ಇದ್ದರು ನಮ್ಮಲ್ಲಿಗೆ ದಯಮಾಡಿಸಬೇಕೆಂದು ತಮ್ಮನ್ನು ಅನೇಕ ಸಲ ಬಿನ್ನವಿಸಿಕೊಂಡುದಾಯಿತು ಮುಂದಾಳಿನ ನಿರ್ದೇಶವಿಲ್ಲದೆ ನಾವೆಲ್ಲಿಯ ವರೆಗೆ ಕಾರ್ಯ ಮಾಡಬಲ್ಲೆವು ?.. ....."

ಜಯರಾಜ ಆಲಿಸುತ್ತಿದ್ದ ಆಲಿಸುತ್ತ ಆಲಿಸುತ್ತ ಎದ್ದು ಅಲ್ಲಿಯೇ ಎಡೆಯಾಡಲಾರಂಭಿಸಿದ ಎಡೆಯಾಡುತ್ತಿರುವಾಗಲೆ "ಹರಿಪುರ. !! ಇಲ್ಲಿಂದ ಎಷ್ಟು ದೂರದಲ್ಲಿದೆ ಹರಿಪುರ..?" ಎಂದು ಕೇಳಿದ

"... ೩ ಸ್ಟೇಶನುಗಳು ಮಾತ್ರ ಈ ಸಲ ತಾವು ಅವಶ್ಯವಾಗಿ ಬರಲೇಬೇಕು ಜನರಲ್ಲಿ ಉತ್ಸಾಹವು ಉಕ್ಕೇರುವುದು ತಾಲೂಕಿನ ಪರಿಷತ್ತು ನಾಳೆಗೇ ಸೇರುವುದಿದೆಯೆಂದು ತಮಗೆ ಗೊತ್ತಿರಲೂ ಸಾಕು ಜನತೆಯು ತಮ್ಮ ಸಂದರ್ಶನಕ್ಕಾಗಿ ಕಾತರಿ-ಸುತ್ತಲಿದೆ ತಾವು ಪ್ರಾಂತ್ಯದ ತುಂಬೆಲ್ಲ ಹೋದರೂ, ನಮ್ಮ ಹಳ್ಳಿಗೆ ಬರುವುದಿಲ್ಲ ಈ ಸಲ ಬರುವ ಕೃಪೆ ಮಾಡಬೇಕು ನಮ್ಮನ್ನು ನಿರಾಶರನ್ನಾಗಿ—ಹತಾಶರನ್ನಾಗಿ—ಮಾಡಬೇಡಿ .. "

ಜಯರಾಜನ ಹೆಜ್ಜೆಗಳು ಭರದಿಂದ ಬೀಳಲಾರಂಭಿಸಿದುವು, ಆದರೂ ಅವನು ಅವರು ಹೇಳುವ ಮಾತುಗಳನ್ನು ಕೇಳುತ್ತಲಿದ್ದ.

"... ಮಹಾತ್ಮಾಜಿಯವರೂ ಈಗ ಹಳ್ಳಿಗಳ ಸಮಸ್ಯೆಯ ಕಡೆಗೆ ಹೆಚ್ಚು ಗಮನವನ್ನು ಕೊಡುತ್ತಿದ್ದಾರೆ ತಾವು ನಮ್ಮಲ್ಲಿಗೆ ಬಂದೇಬರುವಿರೆಂದು ಪೂರ್ಣ ಭರವಸೆಯನ್ನಿಟ್ಟುಕೊಂಡೇ ತಮ್ಮ ಕಡೆಗೆ ಬಂದಿದ್ದೇವೆ ಈ ಸಲ ನಾವು ನಿರಾಶರಾಗಿ ಹಿಂತಿರುಗುವುದೇ ಇಲ್ಲ ......"

ಜಯರಾಜ ಎಡೆಯಾಡುತ್ತಲೇ ಇದ್ದ "ಹರೀಪುರ! ನಾಳೆ . ? ಎಷ್ಟು ಸ್ಟೇಶನ್ನು ಎಂದಿರಿ? ಮೂರು ಸ್ಟೇಶನ್ನು ವೆಚ್ಚವೆಷ್ಟು ತಗಲುವುದು?" ಕೇಳಿದ ಜಯರಾಜ

"ಏಳಾಣೆಗಳು" ಎಂದರು ಪ್ರತಿನಿಧಿಗಳೆಲ್ಲರು.

"ಏಳಾಣೆ . ಪರಿಷತ್ತು ಎಷ್ಟೊತ್ತಿಗೆ ?"

"ಸಾಯಂಕಾಲ ನಾಲ್ಕು ಗಂಟೆಗೆ!"

"ಸಾಯಂಕಾಲ ನಾಲ್ಕು ಗಂಟೆಗೆ! ಅಲ್ಲಿಂದ ಪುನಃ ಹಿಂತಿರುಗಲು ಗಾಡಿಗಳು ಯಾವಾಗ ಇವೆ? ನನಗೆ ರಾತ್ರಿಯಲ್ಲಿ ಅಲ್ಲಿ ನಿಲ್ಲಲಿಕ್ಕೆ ಆಗುವುದಿಲ್ಲ ಆಂ—ಆಂ ಅಹುದು! ರಾತ್ರಿಯಲ್ಲಿ ನಿಲ್ಲಲಿಕ್ಕೆ ಆಗುವುದೇ ಇಲ್ಲ ಹರೀಪುರ!" ಏನು ನೆನಪಿಗೆ ತಂದುಕೊಳ್ಳಲು ಬಯಸುತ್ತಿದ್ದನೋ ಶೆಲ್ಫಿನಿಂದ ರೇಲ್ವೆ 'ಟಾಯಿಂಟೇಬಲ್ಲು' ತೆಗೆದುಕೊಂಡು ಎಡೆಯಾಡುತ್ತಲೇ ನೋಡಲಾರಂಭಿಸಿದ

ಕೆಲವರು ಪ್ರತಿನಿಧಿಗಳು "ಮೊದಲನೆಯದು ೬—೩೦ಕ್ಕೆ ಬರುತ್ತದೆ, ಎರಡನೆಯದು ೧೧॥ ಬರುತ್ತದೆ ತಾವು ರಾತ್ರಿಯ ಗಾಡಿಗೆ ಮರಳಿ ಬರಬಹುದು ಯಾವ ತೊಂದರೆಯೂ ಆಗದಂತೆ ವ್ಯವಸ್ಥೆ ಮಾಡಲಾಗುವುದು" ಎಂದರು

"೬॥ಗೆ! ಆದರೆ ನಾನು ೧೧॥ಯ ಗಾಡಿಯಿಂದ ಬರಲಾರೆ ಅಷ್ಟು ರಾತ್ರಿಯ ವರೆಗೆ ನನಗೆ ಅಲ್ಲಿ ನಿಲ್ಲಲಿಕ್ಕಾಗುವುದಿಲ್ಲ ನಿಲ್ಲುವುದು ಸಾಧ್ಯವೇ ಇಲ್ಲ ಮಾಡಬೇಕಾದ ಕಾರ್ಯಗಳು ತುಂಬ ಇವೆ"

"ಅಷ್ಟು ಮಹತ್ತ್ವದ ಕಾರ್ಯಗಳಿದ್ದರೆ ೬॥ ನ ಗಾಡಿಯಿಂದ ಹಿಂತಿರುಗಬಹುದು" ಪ್ರತಿನಿಧಿಗಳೆಂದರು

"ಅಹುದು ೬॥ಗೂ ಒಂದು ಗಾಡಿಯಿದೆ.. ನಾನು ೮ಕ್ಕೆ ಇಲ್ಲಿಗೆ ಬರಬಹುದು ಸರಿ! ಸ್ವಲ್ಪ ತಡೆಯಿರಿ, ನೋಡುವಾ!" ಎಂದು ಅಡಿಯಾಡುತ್ತಲೇ ಮೇಜಿನ ಮೇಲಿಂದ ಡೈರಿಯನ್ನೆತ್ತಿಕೊಂಡು ನೋಡಿ, ಪುನಃ ಅದನ್ನು ಅಲ್ಲಿಯೇ ಇಟ್ಟ

"ಇಲ್ಲ, ಇಲ್ಲ ನನಗೆ ಬರಲಿಕ್ಕಾಗದು, ಕ್ಷಮಿಸಿ! ನೀವೇ ವಿಚಾರಿಸಿ ನೋಡಿರಿ, ಹಳ್ಳಿಗಳು ಧುರೀಣರನ್ನು ಅವಲಂಬಿಸಿಕೊಂಡು

ಇರಕೂಡದು ತಮ್ಮ ಕಾಲುಗಳ ಮೇಲೆ ತಾವೇ ನಿಲ್ಲಬೇಕು. ನೀವು ಮುಖಂಡರನ್ನೇತಕ್ಕೆ ಅವಲಂಬಿಸುತ್ತೀರಿ? ಅವರನ್ನೇ ಅವಲಂಬಿಸಿ ಬಿಟ್ಟಲ್ಲಿ ಸರಕಾರವು ನಮ್ಮನ್ನು ಸೋಲಿಸಿಬಿಡಬಹುದು ಆರಿಸಿ ಆರಿಸಿ ಧುರೀಣರನ್ನು ಸೆರೆಮನೆಗೆ ಕಳಿಸಿಬಿಟ್ಟರೆ ತೀರಿತು, ರಾಷ್ಟ್ರದ ಬೆನ್ನೆಲುಬೇ ಮುರಿದು ಹೋಯಿತು! ಇಲ್ಲ, ಇಲ್ಲ, ಪ್ರತಿಯೊಬ್ಬನೂ ಮುಂದಾಳಾಗಬೇಕು! ಪ್ರತಿಯೊಬ್ಬನೂ ದೃಢನಿಶ್ಚಯಿಯಾಗಬೇಕು! ಆಗಲೇ ಸ್ವರಾಜ್ಯವು ಸಿಕ್ಕೀತು ನಮಗೆ! ಇಲ್ಲವೆ ಹೋದರೆ, ಸ್ವರಾಜ್ಯವು ದೊರೆತರೂ ಅದು ಜನತೆಯ ಸ್ವರಾಜ್ಯವು ಹೇಗಾದೀತು? ನಮ್ಮನ್ನು ಇನ್ನು ಅವಲಂಬಿಸಿರಬೇಡಿರಿ ನಾನೂ ನಿಮ್ಮಂತೆಯೆ ಎರಡು ಕಾಲುಗಳ, ಎರಡು ಕೈಗಳ ಮನುಷ್ಯನು ಒಂದು ಸಲ ನೀವು ದೃಢನಿಶ್ಚಯ ಮಾಡಿಕೊಳ್ಳಿರಿ ಮತ್ತು 'ದೇಶಕ್ಕೋಸ್ಕರ ಜೀವನ' ಎಂಬ ಸತ್ಯವನ್ನು ಅರಿತುಕೊಳ್ಳಿರಿ! ಆ ಮೇಲೆ ನೀವು ನೋಡಿರಿ— ನನ್ನಲ್ಲಿ ಮತ್ತು ನಿಮ್ಮಲ್ಲಿ ಅಂತರವೇನಿದೆಯೆಂದು ಯಾವ ಅಂತರವೂ ಇಲ್ಲವೆಂದು ನಿಮಗೆ ಕಂಡು ಬಂದೀತು ನೀವು ನನ್ನನ್ನು ಬಿಟ್ಟು ಬಿಡಿರಿ ಇನ್ನುಳಿದ ಹೊರಗಿನ ಆಡಂಬರದ ಮುಖಂಡರ ಆಸೆಯನ್ನು ತೊರೆದು ಬಿಡಿರಿ ಸ್ವತಃ ಮುಂದಾಳುಗಳಾಗಿರಿ ನಿಮ್ಮ ತಾಲೂಕಿನ ಪ್ರಾತಿನಿಧ್ಯವನ್ನು ನಾನು ನಿಮ್ಮಂತೆ ಮಾಡಬಲ್ಲೆನೊ ಇರಲಿ! ನಾನು ಖಂಡಿತವಾಗಿ ನಿಮ್ಮಲ್ಲಿಗೆ ಬರುತ್ತಿದ್ದೆ, ಆದರೆ ನೋಡಿರಿ, ಅಪರಿಹಾರ್ಯ ಕೆಲಸವೊಂದು ಮೈಮೇಲೆ ಬಂದು ಬಿದ್ದಿದೆ"

ಪ್ರತಿನಿಧಿಗಳಿಗೆ ಅತ್ಯಂತ ಖೇದವೆನಿಸಿತು ಜಯರಾಜನನ್ನು ಕರೆದು ತರಲೇಬೇಕೆಂದು ಜನತೆಯ ಆಗ್ರಹವಿದ್ದಿತು ಜಯರಾಜನು ತಮ್ಮನ್ನು ನಿರಾಶರನ್ನಾಗಿ ಮಾಡಲಾರನೆಂದು ಅವರು ನಂಬಿದ್ದರು ಕೊನೆಗವರು ಕೇಳಿದರು "ಹಾಗಾದರೆ ನಾವು ಹೊರಡೋಣವೆ?"

ಜಯರಾಜ ಅಡಿಯಾಡುತ್ತಲೇ ಇದ್ದು "ಸರಿ, ನನ್ನನ್ನು ಕ್ಷಮಿಸಿ! ಮೂರು ಸ್ಟೇಶನ್ನುಗಳು ಇವೆ, ೬||| ಗಂಟೆಗೆ ಒಂದು ರೈಲು ಮರಳಿ ಬರುತ್ತದೆಂದು ಹೇಳಿದಿರಿ ಅಲ್ಲವೆ? ನಾನು ಪ್ರಯತ್ನ ಮಾಡುತ್ತೇನೆ ಕಾರು ಅಲ್ಲಿಯವರೆಗೆ ಹೋಗಲಾರದು!. ....

ಅಲ್ಲವೆ? ಪರವಾ ಇಲ್ಲ! ತೊಂದರೆ ಪಡಬೇಡಿ ಬರಲಿಕ್ಕಾದರೆ ಒಬ್ಬನೇ ಬರುವೆ ಊರಿಂದ ಸ್ಟೇಶನ್ನು ಎಷ್ಟು ದೂರದಲ್ಲಿದೆ? ಮೂರು ಮೈಲಿಗಳೇ? ಸರಿ ನಾನು ಸಾಧ್ಯವಿದ್ದಷ್ಟೂ ಪ್ರಯತ್ನಿಸುತ್ತೇನೆ ವಿಶ್ವಾಸವಿರಲಿ!" ಎಂದ

"ಸ್ಟೇಶನಿನಲ್ಲಿ ತಮಗಾಗಿ ಗಾಡಿಯನ್ನು ಇಡಲಾಗುವುದು."

"ಸರಿ, ಸರಿ . ನಿಮಗೆ ತೊಂದರೆಯಾದೀತು! ನಾನು ಬರುತ್ತೇನೆ, ಆದರೆ ವಚನಕೊಡಲಾರೆ ಇಲ್ಲಿಂದ ಎರಡು ಗಂಟೆಗೆ ರೈಲು ಇದೆಯಲ್ಲವೆ? . ಮನುಷ್ಯನನ್ನು ಕಳುಹುವುದೇನೂ ಅಗತ್ಯವಿಲ್ಲ ನೀವು ಕಳುಹಿದಿರಿ, ನಾನು ಬರಲಿಲ್ಲ, ಹೀಗಾದರೆ ಸುಮ್ಮಗೆ ಶ್ರಮದ ಅಪವ್ಯಯವಾದಂತಾಗುವುದು ಆಹುದು! ಆದರೆ ಹೆಣ್ಣಿಗರು ಸ್ವಾವಲಂಬಿಗಳಾಗಿರಬೇಕು. ಒಳ್ಳೇದು ವಂದೇ"

ಡೆಪ್ಯುಟೇಶನ್ನಿನ ಜನರು ಹೊರಟುಹೋದರು ಜಯರಾಜ ಇನ್ನೂ ಅಡಿಯಾಡುತ್ತಲೇ ಇದ್ದ ಬರೆಯಲಿಕ್ಕೆ ಪ್ರಾರಂಭಿಸಿದ್ದ ಭಾಷಣವನ್ನು ಮುಗಿಸಲಿಕ್ಕೆಂದು ಆತನು ಪ್ರಯತ್ನಿಸಲೇ ಇಲ್ಲ ಕೊನೆಗೆ ಅಡಿಯಾಡುತ್ತಿರುವಾಗಲೆ ತಟ್ಟನೆ ಮೇಜಿನಬಳಿ ಬಂದು ಕುಳಿತು, ಬ್ಲಾಟಿಂಗ್‌ಪೇಪರಿನ ಮೇಲೆ ಬರೆಯತೊಡಗಿದ—ಏನೇನೋ ಗೀಚ-ತೊಡಗಿದ— ಎಂದರೂ ಸರಿಯೆ!

Swaraj is our birthright—as indisputable elsewhere as in politics

**SWARAJ**
**LOVE**
**INDEPENDENCE**
**MARRIAGE ?**

But there is marriage too Marriage gives man a foothold, society a unit It gives a home.

Alright Perfectly alright But— ? And there is Love in the human breast Love gives us glow, gives us bliss. Love makes us transcend the physical and touch

the spiritual That makes us reach out beyond the here and the now, reach out with the eternal unity of life

God made love Did God make marriage also ? No, man did the making of it And I say, Love is not chaos It is never that Never Never !

Ah, how slavish of me thus unwittingly to use English Must write Hindi ! ಹಿಂದೀ — ಹಿಂದೀ ಹಿಂದುಸ್ತಾನವು ನಮ್ಮ ದೇಶವು, ನಾವು ಹಿಂದುಸ್ತಾನದವರು, ನಮ್ಮ ಭಾಷೆಯು ಹಿಂದಿ, ನಮ್ಮ ವಾಣಿಯು ಹಿಂದಿ—ಬಂಧುಗಳೇ ! ”

“ಹರಿಪುರ—೨೩ ಮೈಲು, ಬೆಳಗಿನ ರೈಲು ನಾನು ಹೋಗಲಾರೆ Oh Damn it all ! why make a misery of it—Jairaj, Dear, mind lest—”

ಇಷ್ಟೆಂದು ಅವನು ತನ್ನ ಎರಡೂ ಕೈಗಳಿಂದ ತಲೆಯನ್ನು ಹಿಡಿದುಕೊಂಡು ಎದ್ದುನಿಂತ ತನ್ನ ಅಧ್ಯಕ್ಷೀಯ ಭಾಷಣವನ್ನು ಜಿಲ್ಲಾ ಪರಿಷತ್ತಿನ ಸ್ವಾಗತಸಮಿತಿಯ ಕಾರ್ಯದರ್ಶಿಗಳ ಕಡೆಗೆ, ಮುದ್ರಣಕ್ಕಾಗಿ ಒಂದು ವಾರದಲ್ಲಿಯ ಕಳುಹಬೇಕಾಗಿದಯೆಂಬುದನ್ನು ಮರೆತುಬಿಟ್ಟ

ಜಯರಾಜ ಸರ್ವಜನರ ಸೊತ್ತು, ಆದರೆ ಅವನು ಒಂಟಿಗ—ಒಬ್ಬನೇ ಒಬ್ಬ ಇಲ್ಲಿಯ ವರೆಗೆ ಅವನ ಜೀವನದ ೨೫ ವರ್ಷಗಳು ಸರಮನೆಯಲ್ಲ ಸಂದಿಹೋಗಿವೆ ಅವನಿಗೆ ಬಿಡುವು ಸಿಕ್ಕುವುದೇ ಇಲ್ಲ ಯಾವಾಗಲೂ ಒಂದಿಲ್ಲೊಂದು ಕೆಲಸದಲ್ಲ ತೊಡಕಿಕೊಂಡೇ ಇರುತ್ತಾನೆ ಬಿ ಎ ತರಗತಿಯಲ್ಲಿರುವಾಗಲೆ ಕಾಲೇಜು ಬಿಟ್ಟ ಅಂದಿನಿಂದಲೇ ಮದುವೆಯ ವಿಚಾರಕ್ಕೂ ತಿಲಾಂಜಲಿಯನ್ನು ಬಿಟ್ಟ ಮದುವೆಯ ವಿಚಾರವನ್ನು ಅವನೇ ಬಿಟ್ಟುಬಿಟ್ಟಿದ್ದನೆಂದು ಹೇಳಬಹುದು, ಏಕೆಂದರೆ ಅನ್ಯರು ಬಿಡಿಸಿದರೆಂಬುದನ್ನು ಈ ವರೆಗೂ ನಾವು ಕೇಳಿಲ್ಲ. ‘ ಪ್ರಪಂಚದಲ್ಲಿರುವ ರಾಜಮಾರ್ಗವನ್ನು ಬಿಟ್ಟು ತಾನು ಸ್ವಲ್ಪ ಅಡ್ಡದಾರಿಯನ್ನು ತುಳಿಯುತ್ತಿರುವೆನೆ ? ಸಾಕಷ್ಟು ಗಳಿಸಿ ಹೊಟ್ಟೆಗೆ ಹಾಕುವ ಪತ್ನೀವ್ರತಸ್ಥ ಪತಿಯಾಗುವುದು ತನ್ನ ಹಣೆಯಲ್ಲಿ

ಬರೆದಿದೆಯೆ ? ' ಎಂಬ ಸಂಶಯವು ಅವನ ತಲೆಯಲ್ಲಿ ಸುಳಿದಾಡ-ಲಾರಂಭಿಸಿತು. 'ಯಾವುದಾದರೂ ಸಂಕಟವು, ಆಪತ್ತು ಕತ್ತಲಲ್ಲಿ ನಿಂತು ತನ್ನನ್ನು ಎಂದಾದರೂ ಕೂಗಲಾರದೆ ? ಆ ಸಂಕಟ ಸಮಯದಲ್ಲಿ, ಮಕ್ಕಳು ಮರಿಗಳ ಮಧ್ಯದಲ್ಲಿ ಮನೆಯೊಳಗೆ ತನ್ನಿಂದ ಕುಳಿತುಕೊಳ್ಳುವುದಕ್ಕಾದೀತೇ ತನ್ನಿಂದ ? ' ಇವೆಲ್ಲ ವಿಚಾರಗಳನ್ನು ತನ್ನ ತರ್ಕದ ಒರೆಗಲ್ಲಿಗೆ ಹಚ್ಚಿನೋಡಿದ—" ಬಾಲಿಕೆಯೊಬ್ಬಳನ್ನು ನನ್ನೊಡನೆ ಕಟ್ಟಿಕೊಂಡುಬಿಟ್ಟರೆ ಏನಾದಂತಾಯಿತು ? ಲೋಕದ ಸಂಕಟಗಳ ಕಡೆಗೆ ನಾನು ಧಾವಿಸಬೇಕಾಗಿದೆ ಅವುಗಳ ಭಯಂಕರ-ವಾದ ತೆರೆದ ಬಾಯಿಗಳನ್ನು ಮುಚ್ಚಲಿಕ್ಕೆಂದು — ಜಗತ್ತನ್ನು ಅವುಗಳಿಂದ ಸಂರಕ್ಷಿಸಲೆಂದು—ಆಶೆಯನ್ನಿಟ್ಟುಕೊಂಡ ನಾನು, ಒಂದು ಹೆಣ್ಣಿನೊಂದಿಗೆ ಮದುವೆಯ ಬಂಧನಲ್ಲಿ ಬಿಗಿದುಕೊಳ್ಳಲು ಯತ್ನಿ-ಸಬೇಕೇ ನಾನು ? ನನ್ನ ಗುರಿ ದೂರದಲ್ಲಿದೆ ಮಧ್ಯದಾರಿಯಲ್ಲಿ ಪಾಪ ! ಒಬ್ಬ ಹುಡುಗಿಗೆ ಮನಸೋತು, ಅವಳೊಡನೆ ಕಟ್ಟುವಡೆದು ಬೇರೆ ಮನೆಮಾಡಿಕೊಂಡು ಅಷ್ಟಕ್ಕೇ ನಿಲ್ಲಬೇಕೇ ನಾನು ' "

" ಪ್ರಪಂಚದಲ್ಲಿ ನನಗೆ ನಿಲ್ಲುವುದಕ್ಕಾದರೂ ಬಿಡುವು ಎಲ್ಲದೆ? ಒಂದು ಆಸೆಯ ಬಲೆಯಲ್ಲಿ ಸಿಕ್ಕು, ಒಂದು ಮಾರ್ಗದ ದಡದಲ್ಲಿ ನಾನೆಲ್ಲಿ ವಿಶ್ರಮಿಸಬೇಕಾಗಿದೆ ? ಒಂಟಿಗನಾಗಿ ಹೋಗುವುದಿದೆ, ಅಹುದು ಒಂಟಿಗನಾಗಿಯೆ ಹೋಗುವುದಿದೆ. ಏಕೆಂದರೆ ನಾನು ಹೋಗುವ ಕಡೆಯೆಲ್ಲ ಕಗ್ಗತ್ತಲು ಸರಿ! ಕಗತ್ತಲು ಮಾತ್ರ ಇದೆ—ಅಲ್ಲಿ ಅಕಿಂಚನತೆ ಇದೆ ಕತ್ತಲಲ್ಲಿಯ ಒಂದೊಂದೆ ಪರದೆಗಳನ್ನು ಹರಿಯುತ್ತ, ಬಳಿಕ ಬೆಳಕಿನ ಸಂಬಂಧ ಬೆಳಸಿದ ಪರದೆಯನ್ನು ಹರಿಯಬೇಕಾಗಿದೆ "

ಜಯರಾಜ ಮತ್ತೆ ಯೋಚಿಸಿದ —" ಯಾವಳು ತನ್ನವಳೇ ಆಗುವವಳಿದ್ದಳೋ ಅವಳೇ ಈಗ ಯಾವನವಳೊ ಆಗಿಹೋಗಿದ್ದಾಳೆ ವಿಲಾಸ ವೈಭವಗಳಲ್ಲಿ ತೇಲಾಡಿಸುವ ಆತನವಳು ಆನಂದದಿಂದ ಆಗಲಿ! ಅಭಾವದಲ್ಲಿಯೂ ವಿಪತ್ತಿನಲ್ಲಿಯೂ ಅವಳನ್ನು ತೆಗೆದುಕೊಂಡು ನಾನೆಂದೂ ಹೋಗಲಾರೆ!....ಹೋಗಲಾರೆ.... ! "

ಆದುದರಿಂದ ಅವನು ವಿವಾಹಸಂಬಂಧವನ್ನು ಮುರಿದುಬಿಟ್ಟು ಶರೀರಸಂಬಂಧದ ಕಟ್ಟು ತಾನಾಗಿ ಹರಿದುಹೋಯಿತೆಂದಾದರೂ ಹೇಳಿ ಕನ್ಯೆಯ ತಂದೆ ಬೇರೆಡೆಯಲ್ಲಿ ಧನಕನಕವೈಭವವನ್ನು ನೋಡಿ,ಅತ್ತ ಒಲೆಯಲು ಬಯಸುತ್ತಾನೆಂದು ಆತನು ನಿಜವಾಗಿಯೂ ಕೇಳಿದ್ದನೊ ಏನೋ! ಜಯರಾಜನ ಮನದಲ್ಲಿದ್ದುದು ಹೊರಬೀಳು-ವಂತಿರಲಿಲ್ಲ ಆದರೆ ಅವನು ಅವಿವಾಹಿತನಾಗಿಯೆ ಇದ್ದಾನೆ, ಸಂಕಟಗಳನ್ನು ಸ್ವಾಗತಿಸಲು ಹಿಂಜರಿದಿಲ್ಲ, ಹರಿಪುರಕ್ಕೆ ಈ ವರೆಗೂ ಹೋಗಿಲ್ಲವೆನ್ನುವುದು ಮಾತ್ರ ಸಂಪೂರ್ಣವಾಗಿ ಗೊತ್ತಾಗಿದೆ

ಬೆಳಗಿನ ಒಂಬತ್ತು ಗಂಟೆಗೆ ಮಾರುತ್ತರದ ತಂತಿ ಬಂದಿತು ಹರಿಪುರದವರ ತಂತಿ ಅದರಲ್ಲಿ ಬರೆದುದು ಇಷ್ಟು "ತಾವು ಅಗತ್ಯವಾಗಿ ಬರಲೇ ಬೇಕು ಸಹಸ್ರಾರು ಜನರನ್ನು ನಿರಾಶರನ್ನಾಗಿ ಮಾಡುತ್ತೀರಾ?"

ತಂತಿಯನ್ನು ಕೈಯಲ್ಲಿ ತೆಗೆದುಕೊಂಡು, ಸ್ವಲ್ಪ ಸಮಯ ಹಾಗೆಯೆ ಅಲೆದಾಡುತ್ತಿದ್ದ. ಬಳಿಕ ಮೇಜಿನ ಬಳಿ ಬಂದು ಉತ್ತರವನ್ನು ಬರೆದ "ಬರುವುದಕ್ಕೆ ಆಗುವುದಿಲ್ಲವೆಂದು ತಿಳಿಸಲು ಅತ್ಯಂತ ವಿಷಾದವೆನಿಸುತ್ತದೆ ಸ್ವಾವಲಂಬನೆಯೆ ಸ್ವರಾಜ್ಯವು ತಮ್ಮ ಪರಿಷತ್ತು ಯಶಸ್ವಿಯಾಗಲೆಂದು ಹೃದಯದ ಹಾರೈಕೆ"

ಬರೆದಾದ ಮೇಲೆ ಅವನ ಚಿತ್ತಕ್ಕೆ ಸ್ವಲ್ಪ ಶಾಂತಿಯು ದೊರೆ-ಯಿತು ಒಂದು ನೀಳವಾದ ಉಸಿರನ್ನು ಬಿಟ್ಟು ಮನದಲ್ಲಿಯೆ ತುಸು ನಕ್ಕ, ಬರೆದು ಅರ್ಧಕ್ಕೆ ನಿಲ್ಲಿಸಿದ ಕಾಗದಗಳನ್ನು ಎದುರಿಗೆ ಎಳೆದು-ಕೊಂಡ ಬರೆದಿದ್ದುದನ್ನೆಲ್ಲ ಓದಿದ, ಸಂತೋಷಪಟ್ಟ ಅತ್ಯಂತ ಉತ್ಸಾಹದಿಂದ ಮುಂದುವರಿಸಲು ಲೆಕ್ಕಣಿಕೆಯನ್ನೆತ್ತಿಕೊಂಡ ಆ ಲೆಕ್ಕಣಿಕೆ ಕಾಗದದ ಮೇಲೆ ನಿಂತಿತು . ನಿಂತೇಬಿಟ್ಟಿತು ಮುಂದು-ವರಿಯಲಿಲ್ಲ ಲೆಕ್ಕಣಿಕೆಯನ್ನು ಮೇಲಕ್ಕೆತ್ತಿದಾಗ ಅಲ್ಲೊಂದು ಮಸಿಯ ಗೊಣ್ಣೆಯು ಕುಳಿತುಬಿಟ್ಟಿದ್ದಿತು ಕೆಲವು ನಿಮಿಷ ಹಾಗೆಯೆ ಕುರ್ಚಿಯ ಮೇಲೆ ಕುಳಿತುಕೊಂಡು, ಆ ಮಸಿಯ ಗೊಣ್ಣೆಯನ್ನೇ

ನೋಡುತ್ತಿದ್ದ. ಬಳಿಕ ಎದ್ದು ತಲೆಗೂದಲುಗಳಲ್ಲಿ ಬೆರಳನ್ನಾಡಿಸುತ್ತ ಅಲೆದಾಡಲಾರಂಭಿಸಿದ.

“ ತಾಳಿ, ಸ್ವಲ್ಪ ನನ್ನನ್ನು ಪರೀಕ್ಷಿಸಲು ಕೊಡಿ! ನಾನಾರು? ನಾನು ಉದ್ದೇಶಕ್ಕಾಗಿ ಮುಡಿಪಾಗಿಟ್ಟ ವ್ಯಕ್ತಿ. ಯು ನನ್ನದೆನ್ನುವುದು ನನ್ನಲ್ಲಿ ಏನಿದೆ? ಏನೂ ಇಲ್ಲ! ನನಗೆ ಸ್ವಾರ್ಥವೆಂಬುದೇನಿದೆ? ಏನೂ ಇಲ್ಲ! ಪರಮಾರ್ಥವಾದರೂ ಇದೆಯೆ ನನ್ನದೆನ್ನುವುದು? ಅದೂ ಇಲ್ಲ! ನನ್ನದೆನ್ನುವ ವಸ್ತುವು ಒಂದೇ ಒಂದಿದೆ, ಅದೇ ನನ್ನ ಸ್ವಾರ್ಥ, ಅದೇ ನನ್ನ ಪರಮಾರ್ಥ! ಅದೇ ನನ್ನ ಸ್ವತ್ವ! ಅದೇ ನನ್ನ ಗುರಿ! ಒಂದು ಸಲ ಅರ್ಪಿತವಾದ ಮೇಲೆ ನನ್ನೆದುರು ಅನ್ಯವಿಚಾರಗಳಿಗೆ ಸ್ಥಾನವಿಲ್ಲ! ಬೇರೆ ವಿಚಾರಗಳಿಗಾಗಿ ನಾನು ಉಳಿದಿಲ್ಲ, ಜೀವಿಸಿಲ್ಲ! ಅರ್ಪಿತವಾದ ನನ್ನ ಉದ್ದೇಶಕ್ಕಲ್ಲದ ಮತ್ತಾವುದಕ್ಕೂ ನನ್ನ ದೇಹ, ನನ್ನ ಮನಸ್ಸು, ನನ್ನ ಬುದ್ಧಿ ಇವುಗಳ ಉಪಯೋಗವಾಗಲಾರದು. ಉಪಯೋಗವಾಗುವುದಾದರೂ ಹೇಗೆ? ನಾನು ಅರ್ಪಿತನಾದುದು ಯಾವುದಕ್ಕೆ? ರಾಷ್ಟ್ರಕ್ಕೆ! ರಾಷ್ಟ್ರದ ಸ್ವರಾಜ್ಯಕ್ಕೆ! ರಾಷ್ಟ್ರವೆಂದರೇನು? ಆ ರಾಷ್ಟ್ರವೆಲ್ಲಿ ಇದೆ? ನನ್ನ ಹೃದಯದಲ್ಲಿ ಆ ರಾಷ್ಟ್ರವೆಲ್ಲಿದೆ? ಈ ಮೇರೆಯಿಂದ ಸುತ್ತುವರಿದ ಭಾರತವೆಂಬ ಭೂಖಂಡದ ಚಿತ್ರವು ನನ್ನ ಹೃದಯದ ಅಂತರಾಳದಲ್ಲಿ ಇಳಿದು ಸದಾ ಜಾಗೃತವಾಗಿರುತ್ತದೆಯೆ? ಅದು ನನ್ನ ಜೀವನದ ಸ್ಪಂದನದೊಡನೆ ಹಾರುತ್ತಿರುತ್ತದೆಯೆ? ಇಲ್ಲ, ಹೃದಯವು ಹಾರುತ್ತದೆ, ರಾಷ್ಟ್ರೀಯ ಭಾವನೆಯು ಇಲ್ಲದಿದ್ದರೂ ಅದು ಹಾರುತ್ತಿರುತ್ತದೆ. ವಿಶ್ವಾತ್ಮನ ವಿಧಿಯಂತೆ ಜೀವವಿರುವ ವರೆಗೂ ಅದು ಹಾರುತ್ತಿರುತ್ತದೆ! ನಿಲ್ಲಲಾರದು! ಹಾರುತ್ತಲೆ ಇರುವುದು! ಹಾಗಾದರೆ ರಾಷ್ಟ್ರವೆಂದರೇನು? ತಾಳಿರಿ, ನಾನು ಶಂಕಿತ ಚಿತ್ತವೃತ್ತಿಯುವನು ಆಗಲಾರೆ. ‘ಸಂಶಯಾತ್ಮಾ ವಿನಶ್ಯತಿ’ ‘ರಾಷ್ಟ್ರವಿದೆ’ ಇದು ಪ್ರಶ್ನಾತೀತವಾಗಿರಲಿ. ನಾನು ರಾಷ್ಟ್ರಸೇವಕನು. ನಾನು ಇನ್ನೇನೂ ಇಲ್ಲ. ನನ್ನ ಹೆಸರು ಮಾತ್ರ ಜಯರಾಜನೆಂದು. ಜಯರಾಜನಲ್ಲಿ ಪೃಥಕ್‌ತನವಿಲ್ಲ, ಯಾವ ವ್ಯಕ್ತಿತ್ವವೂ ಇಲ್ಲ!

ಜಯರಾಜನು ರಾಷ್ಟ್ರಸೇವಕನು, ಶುದ್ಧ ರಾಷ್ಟ್ರಸೇವಕನು! ಅಷ್ಟೇ .

" .ಹರಿಪುರದಿಂದ ಜನರು ಬಂದರು ಹರಿಪುರವು ನನ್ನನ್ನು ಬಯಸುತ್ತದೆ ನಾನು ರಾಷ್ಟ್ರದವನು, ಪ್ರಾಂತ್ಯದವನು, ಜಿಲ್ಲೆಯವನು, ಹಳ್ಳಿಯವನು, ಎಲ್ಲರವನು ನನ್ನ ಉದ್ದೇಶದ ಮಾರ್ಗದಲ್ಲ ಯಾವ ಔತನವೂ ಹೆಚ್ಚು ಹಾರ್ದಿಕವಾದುದೂ ಹೆಚ್ಚು ಆವಶ್ಯಕವಾದುದೂ ಇಲ್ಲವೆಂದ ಮೇಲೆ, ನಾನು ಯಾರ ಬೇಡಿಕೆಯನ್ನೂ ಅಲ್ಲಗಳೆಯಲಾರೆ ಜಯರಾಜ! ಹರಿಪುರವಾದರೇನು, ರಾಮಪುರವಾದರೇನು, ಜನಕಪುರವಾದರೇನು ? ತನ್ನದು ಪರರದು ಎನ್ನುವುದರಲ್ಲಿ ನಿನ್ನದೇನಿದೆ ? ಒಂದರಿಂದ ಉಳಿದುಕೊಂಡು ಇನ್ನೊಂದರ ಕಡೆಗೆ ಹೇಗೆ ಆಕರ್ಷಿತನಾಗಬಲ್ಲೆ ? ಹರಿಪುರದ ಪ್ರತಿನಿಧಿಗಳ ಹೃದಯವನ್ನು ನೋಯಿಸಿ ನೀನು ಮಹಾಪರಾಧವನ್ನು ಮಾಡಿರುತ್ತೀಯಲ್ಲವೇ ? ತಂತಿಗೆ ಉತ್ತರಕೊಡುವುದರಲ್ಲಿಯೂ ನೀನು ಭೀರುವಾಗಿರುವೆ! ಹರಿಪುರದವರ ಬೇಡಿಕೆಯನ್ನು ಅಲ್ಲಗಳೆಯಲು ಒತ್ತಾಯಪಡಿಸುವಂತಹ ರಾಷ್ಟ್ರದ ಕಾರ್ಯವು ನಿನ್ನ ಕಡೆಗೇನಿದೆಯೀಗ?

" ನೋಡು ಜಯರಾಜ, ನೀನು ಎಳ್ಳಷ್ಟೂ ನಿನ್ನವನಿರುವುದಿಲ್ಲ ನೀನು ನಿನ್ನ ಸೇವಾಕಾರ್ಯದೊಂದಿಗೆ ಅಶೇಷರೂಪದಲ್ಲಿ ಲೀನನಾಗಿರಬೇಕಾಗುವುದು ಹಾಗೆಯೆ ಆಗಿರು! ನೀನಿರಬೇಡ! ರಾಷ್ಟ್ರವಿರಲಿ! ರಾಷ್ಟ್ರಸೇವಕನ ಹೊರತು ನೀನು ಇನ್ನೇನೂ ಆಗಿರಕೂಡದು "

ಕಿಕ್ಕಿರಿದು ನೆರೆದ ಸಭೆಯಲ್ಲಿ ಜಯರಾಜ ಅಕಸ್ಮಾತ್ ಪ್ರವೇಶಿಸಿದ ಅವನನ್ನು ಆದರದಿಂದ ಬರಮಾಡಿಕೊಂಡು ಅಧ್ಯಕ್ಷರ ಬಳಿಯಲ್ಲಿಯೆ ಕುಳ್ಳಿರಿಸಿ ಆಯಿತು ಅವನು ಕುಳಿತುಕೊಂಡ ಕೂಡಲೆ ಅವನ ಜಯಜಯಕಾರದಿಂದ ಸಭಾಗೃಹವು ಪ್ರತಿಧ್ವನಿತವಾಯಿತು. ಜಯರಾಜ ಸಭೆಗೆ ದಯಮಾಡಿಸಿದ ನರನಾರಿಯರ ಸಮೂಹವನ್ನು ನಿರಪೇಕ್ಷಭಾವದಿಂದ ನೋಡಿದ ಅವನ ಹೃದಯವು ಭಾರತದ ಗೌರವವನ್ನು ಕಂಡು ತುಂಬಿ ಬಂದಿತು.

ಸಭೆಯು ಪ್ರಾರಂಭವಾಯಿತು. ಸ್ವಲ್ಪ ಸಮಯದ ಬಳಿಕ ಅಧ್ಯಕ್ಷರು ಸಭಿಕರಿಗೆ ತಿಳಿಸಿದರು "ಶ್ರೀಮತಿ ಸುದರ್ಶನಾದೇವಿಯವರು ಸ್ವಾಗತಗೀತೆಯನ್ನು ಹೇಳುವರು "

ಮಹಿಳೆಯರ ಮಧ್ಯದಲ್ಲಿಂದ ಸುದರ್ಶನಾದೇವಿಯು ಎದ್ದು ಬಂದು, ಮೊದಲು ಜಯರಾಜನ ಕೊರಳಲ್ಲಿ ಕೈನೂಲಿನ ಹೂಗಳ ಮಾಲೆಯನ್ನು ಹಾಕಿ ವಂದಿಸಿ, ವ್ಯಾಸಪೀಠದ ಬಳಿಯಲ್ಲಿ ನಿಂತು ಸ್ವಾಗತಗೀತೆಯನ್ನು ಹಾಡಲಾರಂಭಿಸಿದಳು

ಜಯರಾಜನು ಸ್ವಾಗತಗೀತೆಯನ್ನು ಹಾಡುವವಳ ಮುಂದಿನ ಶ್ರೋತೃವೃಂದದ ಕಡೆಗೆ ನೋಡದೆ ನಿರ್ನಿಮೇಷನಾಗಿ ಶೂನ್ಯವನ್ನು ನೋಡುತ್ತಿದ್ದ

' ಅವನು ಬರೀ ರಾಷ್ಟ್ರಸೇವಕನು. ಸಭೆಗೆ ಬಂದ ಜನತೆಯು ಅವನ ಸನ್ಮಾನಕ್ಕಾಗಿ ಬಂದಿದ್ದರೆ ಅದು ರಾಷ್ಟ್ರವನ್ನು ಸನ್ಮಾನಿಸಲಿಕ್ಕೆ ಬಂದಂತೆ ' ತನ್ನ ಮೇಲೆಯೇ ಸ್ವಾಗತಗೀತೆಯನ್ನು ರಚಿಸಿ, ವ್ಯಾಸಪೀಠದ ಬಳಿಯಲ್ಲಿ ನಿಂತು ಹಾಡುತ್ತಿರುವಾಕೆಯ ಕಡೆಗೆ ಜಯರಾಜನು ಕಣ್ಣು ಹಾಕದೆ ತನ್ನ ಮನದಲ್ಲಿಯೆ ಎಂದುಕೊಂಡ. " ಈಗ ಈ ಭಾರತದ ನಾರೀಶಕ್ತಿಯು ನನ್ನಲ್ಲಿರುವ ರಾಷ್ಟ್ರ ಸಂಕಲ್ಪನೆಯನ್ನೇ ಸ್ವಾಗತಿಸುತ್ತಿದೆ ನಾನೀ ಸ್ವಾಗತವನ್ನು ಸ್ವೀಕರಿಸಿ, ಅದನ್ನು ಮತ್ತೆ ರಾಷ್ಟ್ರದ ಚರಣಗಳಲ್ಲಿಯೆ ಸಮರ್ಪಿಸಬೇಕು ! ಅದು ನನ್ನ ಸ್ವಾಗತವಲ್ಲ, ನನ್ನದಲ್ಲ ಈ ಸ್ವಾಗತಗೀತೆಯನ್ನು ಹೇಳುತ್ತಿರುವವಳು ನಾರೀಶಕ್ತಿಯ ಪ್ರತಿನಿಧಿಯಾಗಿ ಮಾತ್ರ ಬಂದು ನನ್ನ ಕಂಠದಲ್ಲ ಮಾಲೆಯನ್ನು ಹಾಕಿ ಹೋಗಿರುವಳು ಈ ಮಾಲೆಯು ನನಗಾಗಿಯೂ ಇಲ್ಲ, ಅವಳಿಗಾಗಿಯೂ — ಅವಳದೂ — ಅಲ್ಲ ! ಅವಳಾರು ? ಅವಳ ಹೆಸರು ಸುದರ್ಶನೆಯೆಂಬು ! ಆದರೆ 'ಸುದರ್ಶನಾ' ಎಂಬ ಹೆಸರು ಮಾತ್ರ ಇದೆ ! ಅವಳೀಗ ಭಾರತೀಯ ನಾರಿಯರ ಗೌರವವನ್ನು ತನ್ನ ಮಧುರವಾದ ಧ್ವನಿಯಲ್ಲಿ ಹಾಡುತ್ತ, ನನ್ನನ್ನು ನಿಮಿತ್ತಮಾಡಿ ಭಾರತಾಂಬೆಯ ಚರಣಾರವಿಂದಗಳಲ್ಲಿ ಕಾಣಿಕೆ-ಯನ್ನರ್ಪಿಸುವುದಕ್ಕೆ ಸಿದ್ಧಳಾದ ಒಬ್ಬ ಸೇವಿಕೆಯು . . "

ಜಯರಾಜ ಹಾರವನ್ನು ತೆಗೆದು ಮುಂದೆ ಇಟ್ಟುಕೊಂಡ—

" ಸೇವಿಕೆಯು! ಅಹುದು, ಆ ಸೇವಿಕೆಗೆ ಹೆಸರು ಸುದರ್ಶನೆ-ಯೆಂದು ಸುದರ್ಶನೆಯೆಂದಿರದಿದ್ದಲ್ಲಿ ಸುನಯನೆಯೆಂದು ಇರಬಹು-ದಾಗಿತ್ತು! ಜಯರಾಜ, ಈ ಭಾರತೀಯ ನಾರೀತ್ವದ ಕಾಣಿಕೆಯು ಭಾರತೀಯ ವೀರತ್ವದ ಸಂಕಲ್ಪಕ್ಕಾಗಿ ಇದೆ ನಿನ್ನದೆನ್ನುವುದೇನೂ ಇಲ್ಲ ಇದರಲ್ಲಿ! ಏನೂ ಇಲ್ಲ! ನೀನು ಸುದರ್ಶನೆಯನ್ನು ಸುನಯನೆಯೆಂದಾದರೂ ತಿಳಿ, ಸುಲೋಚನೆಯೆಂದಾದರೂ ತಿಳಿ, ಅವಳು ಭಾರತರಾಷ್ಟ್ರದ ಒಬ್ಬ ಆದರಣೀಯ ಸ್ತ್ರೀಯಳು ಮಾತ್ರ .."

ಸುನಯನೆಯೊ ಸುಲೋಚನೆಯೊ ಆದವಳನ್ನು—ಸುದರ್ಶನೆ-ಯನ್ನು ಮೊದಲ ಸಲ ಅವನು ನೋಡಿದನು ಆಕೆ ತನ್ನೆದುರಿನಲ್ಲಿದ್ದ ಜನಸಮೂಹವನ್ನು ನೋಡುತ್ತ ಸ್ವಾಗತಗೀತೆಯನ್ನು ಹಾಡುತ್ತಿದ್ದಳು ಅವಳ ಸ್ವರದಲ್ಲಿ ರಾಷ್ಟ್ರಪ್ರೇಮದ ಕಳಕಳವು ಇದ್ದೀತೇನು? ಸಂಪೂರ್ಣ ವ್ಯಕ್ತಿಗತವಾದುದು—ಹೃದ್ಗತವಾದುದು— ಮರ್ಮಗತವಾದುದು— ದೇಶಭಾವನೆಗಿಂತಲೂ ಹೆಚ್ಚಿನದೆನ್ನುವುದು ಆಕೆಯ ಹೃತ್ತಲದಲ್ಲಿ ಇರಲಿಲ್ಲವೇನು? ಹಾಡಿನಲ್ಲಿ ರಾಷ್ಟ್ರಸ್ನೇಹದ ಸವಿಯು ಇದ್ದಿತೇನು? ದನಿಯ ನಡುಗಿನಲ್ಲಿ ಸ್ವರಾಜ್ಯಯುದ್ಧದ ಆನಂದವಿದ್ದಿತೇನು? ರಾಷ್ಟ್ರದ ಒಬ್ಬವೀರನಿಗೆ ಪೂಜೆಯನ್ನರ್ಪಿಸುವ ಉಲ್ಲಾಸವು ಆಕೆಯ ಗೀತದಲ್ಲಿದ್ದಿತೇನು? ತನ್ನದೆನ್ನುವುದು ಸುದರ್ಶನೆಯಲ್ಲಿ ಏನೂ ಇರಲಿಲ್ಲವೇನು ?ರಾಷ್ಟ್ರದೇವಿಗಿಂತಲೂ ಹೆಚ್ಚು ಮೂರ್ತಸ್ವರೂಪ ನಾದ, ಹೆಚ್ಚು ಜೀವಂತನಾದ, ಹೆಚ್ಚು ತನ್ನವನಾದ ದೇವತೆಗೆ ಅರ್ಪಿಸಲು ಬರುವಂತಹದು ?

ಜಯರಾಜ ಕತ್ತನ್ನು ಸ್ವಲ್ಪ ಕೊಡಹಿ ನೇರವಾಗಿ ನಿಲ್ಲಿಸಿ, ಪುನಃ ಕಡಿವಾಣವನ್ನು ಎಳೆದು ನಿಲ್ಲಿಸಿದಂತೆ ತನ್ನ ಎದುರಲ್ಲಿಯೆ ದೃಷ್ಟಿ ಯನ್ನು ನಿಲ್ಲಿಸಿದ

' ಜಯರಾಜ! ರಾಷ್ಟ್ರಕಾಗಿ ಅರ್ಪಿತವಾಗುತ್ತಿರುವ ಅರ್ಘ್ಯದಲ್ಲಿ ನಿನ್ನ ಸ್ವಾರ್ಥವನ್ನು ಸೇರಿಸಿ ಅದನ್ನು ಅಪವಿತ್ರಮಾಡಬೇಡ!

ಕಳ್ಳನಾಗಬೇಡ! ಯಜ್ಞವನ್ನು ಅಪವಿತ್ರಮಾಡಬೇಡ! ಆದರಲ್ಲಿ ನಿನ್ನದೇನೂ ಇಲ್ಲ—ಏನೂ ಇಲ್ಲ! ನಿನಗಾಗಿ ಏನೂ ಇಲ್ಲ—ನೀನು ಸ್ವೀಕರಿಸಲು ಬರುವಂತಹದೇನೂ ಆದರಲ್ಲಿ ಇಲ್ಲ! ಸುದರ್ಶನೆಯು ಸುನಯನೆಯೊ ಸುಲೋಚನೆಯೊ ಆಗಿರಬಹುದು ಭಾರತೀಯ ಸ್ತ್ರೀತ್ವದ ಕೈಗಳಿಂದ ಭಾರತೀಯ ಪೌರುಷದ ಕೊರಳಲ್ಲ ಹಾರವು ಬಿದ್ದಿದೆ ನಾರೀಶಕ್ತಿಯು ಉತ್ಸಾಹ—ಪೌರುಷವನ್ನು ಸ್ವಾಗತಿಸುವ ಗೀತೆಯನ್ನು ಹಾಡಿದ್ದಾಳೆ, ಜಯರಾಜ! ”

ಜಯರಾಜ ಸ್ವಾಗತಗೀತೆಯನ್ನು ಹಾಡುತ್ತಿರುವ ಸುದರ್ಶನೆಯ ಕಡೆಗೆ ಹೋಗು-ಹೋಗುತ್ತಿರುವ ತನ್ನ ದೃಷ್ಟಿಯನ್ನು ಹೊರಳಿಸಿ, ಸಮ್ಮುಖದಲ್ಲರಿಸುತ್ತ ಮನದಲ್ಲಿಯೆ ಯೋಚಿಸಿದ

“ ಜಯರಾಜ, ನೇರವಾಗಿ ನೋಡು, ರಾಷ್ಟ್ರದ ನೈವೇದ್ಯವು ಪವಿತ್ರವಾಗಿರಲಿ! ಈ ಎಡೆಯು ಸಲ್ಲುತ್ತಿದ್ದುದು ನಿನಗಲ್ಲ ನಿನ್ನಲ್ಲಿದ್ದ ಜಾಗೃತ ರಾಷ್ಟ್ರೀಯಭಾವನೆಗೆ! ರಾಷ್ಟ್ರದ ಭವಿಷ್ಯದ ಅಭಿನಂದನೆಗಾಗಿ ಈ ಸ್ವಾಗತವು ಆಗುತ್ತಿದೆ ಜೋಕೆ, ಈ ನೈವೇದ್ಯದೆಡೆಯನ್ನು ಸ್ವಾರ್ಥದ ಸ್ನಿಗ್ಧದೃಷ್ಟಿಯಿಂದ ನೋಡೀ! ಮುಟ್ಟೀ! ಈ ಅಭಿನಂದನೆಯು ರಾಷ್ಟ್ರದ ಭವಿಷ್ಯಜ್ಯೋತಿಯ ಚರಣಗಳಲ್ಲಿ ಅರ್ಪಿತವಾಗಲಿ ನೀನು ಇದಕ್ಕೆ ನಿಮಿತ್ತಮಾತ್ರನಾಗಿರು, ಇದರಲ್ಲಿ ನಿನ್ನ ಸ್ವಾರ್ಥವನ್ನು ಭಾವಿಸಬೇಡ! ”

ಆಕಸ್ಮಾತ್ ನೋಟವು, ಗಡಿಯಾರದ ಕಡೆಗೆ ಹೋಯಿತು. ನಾಲ್ಕುವರೆ ಗಂಟೆಯಾಗಿತ್ತು! ಅವನು ಬಾಗಿ ಅಧ್ಯಕ್ಷರನ್ನು ವಿಚಾರಿಸಿದ “ ಗಾಡಿಯು ಎಷ್ಟು ಗಂಟೆಗೆ ಹೋಗುತ್ತದೆ! ”

“ ಇಂದೆಯೇ ಹೋಗಬೇಕೇನು? ”

“ ಏಳುವರೆ ಗಂಟೆಗೆ ಗಾಡಿ ಹೋಗುತ್ತಿದೆಯಲ್ಲವೆ? ನಾನು ನಿಲ್ಲಲಾರೆ! ”

ಈ ಸಮಯದಲ್ಲಿ ಅವನು ಅತ್ಯಂತ ಉದ್ವಿಗ್ನನಾಗಿದ್ದ, ಅತಿಶಯ ವ್ಯಸ್ತಚಿತ್ತನಾಗಿದ್ದ “ ನಾನು ನಿಲ್ಲಲಾರೆ ಇಲ್ಲ, ನಾನು ನಿಲ್ಲಲಾರೆ ನೋಡಿರಿ—”

ಸುದರ್ಶನಾದೇವಿಯು ಮೆಲ್ಲಮೆಲ್ಲನೆ ಅವನ ಬಳಿ ಬಂದು, ಎದುರಿನಲ್ಲಿ ನಿಂತು, ತನ್ನ ಕೈಯಿಂದಲೇ ಸುಂದರವಾದ ಅಕ್ಷರಗಳಲ್ಲಿ ಬರೆದು ಕಟ್ಟು ಹಾಕಿಸಿದ ಸ್ವಾಗತಗೀತೆಯನ್ನು ಅವನ ಚರಣಗಳಲ್ಲಿ ಅರ್ಸಿಸಿದಳು, ತಲೆಬಾಗಿಸಿ ವಂದಿಸಿದಳು

ಜಯರಾಜ ಸುದರ್ಶನೆಯ ಕಡೆಗೆ ನೋಡದೆ ಆ ಸ್ವಾಗತ-ಗೀತೆಯ ಕಟ್ಟನ್ನು ಕೈಗೆ ತೆಗೆದುಕೊಂಡ, ಎದುರಿನಲ್ಲಿಟ್ಟ ಮಾಲೆ-ಯನ್ನು ಕೂಡಲೆ ಎತ್ತಿಕೊಂಡ!

"ನೋಡಿರಿ, ನಾನು ನಿಲ್ಲಲಾರೆ—ನಿಲ್ಲಲಾರೆ ಬಹಳ ಅಗತ್ಯ-ವಾದ ಕೆಲಸವಿದೆ—"

"ಬೆಳಗಿನಲ್ಲಿ ಸುಖವಾಗಿ ಹೋಗಬಹುದು ತಾಲೂಕಿನ ಕಾಂಗ್ರೆಸ್ ಕಾರ್ಯಕರ್ತರೆಲ್ಲ ಸೇರಿದ್ದಾರೆ ಕಾಂಗ್ರೆಸ್ಸಿನ ಕಾರ್ಯ-ಕ್ರಮವನ್ನು ಕುರಿತು ತಮ್ಮೊಡನೆ ಚರ್ಚಿಸಬೇಕೆನ್ನುತ್ತಾರೆ ಇಂದೇ ರಾತ್ರಿ ಒಂಬತ್ತು ಗಂಟೆಗೆ ಅವರ ಸಭೆಯನ್ನು ಕರೆದಿದ್ದೇನೆ" ಅಧ್ಯಕ್ಷರೆಂದರು

"ಸರಿ, ತಾವೇನೋ ಹೇಳುತ್ತಿದ್ದೀರಿ, ಆದರೆ ನಾನು ಹೋಗಲೇಬೇಕು, ತಾವು ಸಭೆಯನ್ನು ನಡೆಯಿಸುತ್ತೀರಿ ಸ್ವಾವಲಂಬಿ-ಗಳಾದ ವಿನಾ ಗತ್ಯಂತರವಿಲ್ಲವೆಂದು ನಾನು ಹೇಳಿಬಿಟ್ಟಿದ್ದೇನೆ ನಾನು ಇಂದು ಇಲ್ಲಿ ನಿಲ್ಲಲಾರೆ" ಸ್ವಲ್ಪ ವ್ಯಸ್ತಭಾವದಲ್ಲಿಯೆ ನುಡಿದ ಜಯ-ರಾಜ.

"ಬೆಳಗಿನಲ್ಲಿ ೬ ಗಂಟೆಗೊಂದು ಗಾಡಿ ಹೋಗುವುದು ತಾವು ಸುಖವಾಗಿ ಅದರಿಂದ ಹೋಗಬಹುದು ೭ ಗಂಟೆ ಆಗು-ಆಗುವುದ-ರೊಳಗಾಗಿ ತಾವು ಮನೆಯನ್ನು ತಲ್ಪುತ್ತೀರಿ" ಅಧ್ಯಕ್ಷರು ವಿನಯ-ದಿಂದ ನುಡಿದರು

ಜಯರಾಜ ಅಧೀರನಾಗಿ "ಬೇಡ—ಬೇಡ, ರಾಯರೆ"ಎಂದನು, ತನ್ನನ್ನು ಎಚ್ಚರಿಸಿಕೊಳ್ಳುತ್ತಲೊ ಅಧ್ಯಕರನ್ನು ಎಚ್ಚರಿಸುತ್ತಲೊ ಮುಂದೆ ನುಡಿದ, "ಆದರೆ, ನಿಮ್ಮ ಮಂಟಪದ ಕಡೆಗಾದರೂ

ನೋಡಿರಿ, ಅದು ಬರಿಯದಾಗುತ್ತಿದೆ " ಅಧ್ಯಕ್ಷರು ಎದ್ದು ನಿಂತು "ಬಂಧುಗಳೇ—" ಎಂದರು

ಜಯರಾಜ ಪುನಃ ಕತ್ತನ್ನು ನೇರವಾಗಿಸಿ ಅನಿಮೇಷನಾಗಿ ಎದುರನ್ನು ನೋಡತೊಡಗಿದ ಅಧ್ಯಕ್ಷರು ಅವನ ಸ್ತುತಿಗೀತೆಯನ್ನು ಪ್ರಾರಂಭಿಸಿದ್ದರು ಜಯರಾಜ ಒಂದೊಂದು ಸಲ ಭಾರತದ ಭಾಗ್ಯವನ್ನು ಕಂಡು ಹೆಮ್ಮೆಪಡುತ್ತಿದ್ದ ಒಂದೊಂದು ಸಲ ಅಳಲು ಬಯಸುತ್ತಿದ್ದ ಅವನು ಆಗಾಗ ಗಡಿಯಾರದ ಕಡೆಗೆ ನೋಡುತ್ತಿದ್ದ ಗಡಿಯಾರದ ಸೂಜಿಯು ನಿಮಿಷನಿಮಿಷಕ್ಕೂ ಮುಂದೋಡುತ್ತಿದ್ದಿತು ಅವನು ಮಂಟಪದಲ್ಲಿ ನೆರೆದ ಜನಗಳನ್ನೂ ನೋಡುತ್ತಿದ್ದ ನಾನಾ ಬಣ್ಣದಿಂದ ಅಲಂಕೃತವಾದ ಸಭೆಯ ಭಾಗಗಳು ಕಂಗೊಳಿಸುತ್ತಿದ್ದುವು ಸ್ತ್ರೀಯರು ಕುಳಿತ ವಿಭಾಗವನ್ನು ನೋಡುವಾಗ ಅವನು ಪ್ರತಿಯೊಬ್ಬ ಸ್ತ್ರೀಯನ್ನು-ಪ್ರತ್ಯೇಕವಾಗಿ ನೋಡುತ್ತಿರಲಿಲ್ಲ ಭಾರತೀಯ ಸ್ತ್ರೀತ್ವದ ಗೌರವದಿಂದ ವಿಭೂಷಿತವಾದ ಅಖಂಡ ರೂಪವನ್ನು ನೋಡುತ್ತಿದ್ದ ನಾರಿಯರೆಲ್ಲರ ಉಡಿಗೆತೊಡಿಗೆಗಳು ಒಂದೆಡೆಯಲ್ಲಿ ಒಟ್ಟು ಸೇರಿ ಆ ಗೌರವವಿಭೂಷಿತ ರೂಪಕ್ಕೆ ಒಂದು ಬಗೆಯ ಅದ್ಭುತವಾದ ಮೆರುಗನ್ನು ಕೊಟ್ಟಿದ್ದುವೇನೊ! ಈ ಚಿತ್ರದಲ್ಲಿ ಸುದರ್ಶನೆಯೆಲ್ಲಿ? ಸುಲೋಚನೆಯೆಲ್ಲಿ? ಸುನಯನೆಯಲ್ಲಿ?—ಯಾವುದೂ ತಿಳಿಯದು ಎಲ್ಲವೂ ಸೇರಿ ಚಿತ್ರಕ್ಕೆ ಜೀವನ್ನೀಯುತ್ತಿವೆ, ವೈಭವವನ್ನು ದಾನಮಾಡು-ತ್ತಿವೆ ಆ ಜೀವನವು, ಆ ಪ್ರಕಾಶವು ನಮ್ಮೆಲ್ಲರ ಧ್ಯಾನವನ್ನು ಆಕರ್ಷಿಸಲು ಯೋಗ್ಯವಾದುದು ಭಾರತೀಯ ಲಾಲಿತ್ಯದ ಪ್ರಾಣವೇ ಅಲ್ಲಿ ಅರಳಿ ಅವಿರಲವಾಗಿ ಬಿದ್ದಿದೆ ಅದೆಲ್ಲವೂ ಸಮಷ್ಟಿರೂಪದಲ್ಲಿ ಭಾರತೀಯ ನಾರಿಯರ ಗೌರವದ ಉಪಮೆಗಾಗಿರದೆ ಜಯರಾಜನನ್ನು ಆಕರ್ಷಿಸುವುದಕ್ಕಾಗಿ ಇದೆ ಈ ರೀತಿ ಸುದರ್ಶನೆಯು ಸುನಯನೆಯೂ ಆಗಬಹುದು, ಸುಲೋಚನೆಯೂ ಆಗಬಹುದು

ಅಧ್ಯಕ್ಷರು ತಮ್ಮ ಮಾತುಗಳನ್ನು ಮುಗಿಸಿ ತಮ್ಮ ಆಸನದಲ್ಲಿ ಬಂದು ವಿರಾಜಿಸಿದರು ಐದು ಗಂಟೆಯ ಮೇಲಾಗಿತ್ತು ಈಗ ಜಯರಾಜ ಸಹಸ್ರಾರು ದೃಷ್ಟಿಗಳ ಮಧ್ಯಬಿಂದುವಾಗಿ ನಿಂತು

ಮಾತನಾಡಬೇಕಾಗಿದೆ ಅವನು ಎದ್ದ ಕರತಲದ ಘೋರ-ಮಧುರ ಧ್ವನಿಯು ಮಂಟಪದಲ್ಲಿ ಹರಡಿ, ಅವನನ್ನು ಮುಳುಗಿಸಿತು ಆತನು ವ್ಯಾಸಪೀಠದ ಬಳಿ ಬಂದು ಮಾತನಾಡಲಾರಂಭಿಸಿದ

ಹಿಂದಿರುಗಿ ನೋಡಿದಾಗ ಗಡಿಯಾರದಲ್ಲಿ ಗಂಟೆಯ ಮುಳ್ಳು ೬ರ ಅಂಕೆಯನ್ನು ದಾಟಿ ಮುಂದಡಿಯನ್ನಿಟ್ಟಿದ್ದಿತು! "ವಾಹನದ ವ್ಯವಸ್ಥೆಯಿದೆಯೆ? ಈಗ ನಾನು ಹೊರಡಬೇಕು" ಎಂದು ಜಯರಾಜ ವ್ಯಗ್ರನಾಗಿಯೆ ಸಭಾಪತಿಗಳನ್ನು ಕೇಳಿದ

ಉತ್ತರಿಸಲು ಅಧ್ಯಕ್ಷರು ಗಡಿಯಾರದ ಕಡೆಗೆ ನೋಡಿದರು— ಗಡಿಯಾರದ ಎದುರಿನಲ್ಲಿ ತಾವು ಅಸಮರ್ಥರೆಂಬುದನ್ನು ಉಸುರಲೆಂದೇನೋ!

"ನೋಡಬೇಡಿರಿ, ವಾಹನವನ್ನು ತರಿಸಿರಿ ನೀವು ನಾನು ಮಾತನಾಡುವಾಗ ಮಧ್ಯದಲ್ಲಿಯೆ ಸಮಯದ ಸೂಚನೆಯನ್ನೇಕೆ ಕೊಡಲಿಲ್ಲ?"

"ಈಗ ಗಾಡಿ ಸಿಕ್ಕುವುದು ಎಂತಹ ಮಾತೊ!"

"ಸರಿ, ತಾವು ಪರಿಷತ್ತನ್ನು ಮುಂದುವರಿಸಿರಿ! ಒಂದೊಂದು ಸಲ ಗಾಡಿ ಲೇಟಾಗುವ ಸಂಭವವೂ ಇರುತ್ತದೆ ನನಗೆ ಹೊರಡಲು ಅಪ್ಪಣೆಕೊಡಿರಿ!"

"ತಾವು ಈಗ ಎಲ್ಲಿಗೆ ಹೋಗುತ್ತೀರಿ? ನಡೆದೇ ಹೋಗುತ್ತೀರಾ?" ಅಧ್ಯಕ್ಷರು ಆಶ್ಚರ್ಯದಿಂದ ಕೇಳಿದರು

ಜಯರಾಜ ಆ ಮಾಲೆಯನ್ನೂ ಸ್ವಾಗತಗೀತೆಯನ್ನೂ ತೆಗೆದುಕೊಂಡು ಸ್ವಲ್ಪ ನಿಂತ ಬಳಿಕ ಅವುಗಳನ್ನು ಸಭಾಪತಿಗಳಿಗೆ ಒಪ್ಪಿಸುತ್ತ 'ಅಹುದು, ನಡೆದೇ ಹೋಗುತ್ತೇನೆ ಸ್ಟೇಶನ್ನು ಬಹಳ ದೂರವೇನೂ ಇಲ್ಲ, ೨॥ ಮೈಲು ಮಾತ್ರ ಇದೆಯಲ್ಲವೆ! ಇದು ನೋಡಿರಿ, ಈ ವಸ್ತುಗಳನ್ನು ಕಾಂಗ್ರೆಸ್ ಕಚೇರಿಯ ಸಂಗ್ರಹದಲ್ಲಿ ಇರಿಸಿಬಿಡಿರಿ!" ಎಂದ

ಅಧ್ಯಕ್ಷರು ಎದ್ದು ನಿಂತರು. ಜಯರಾಜ ಬೀಳ್ಕೊಂಡು ಹೊರಟ, ಅವನ ಜತೆಗೆ ಇನ್ನು ಕೆಲವರೂ ನಡೆದರು

ಅವರೆಲ್ಲರಿಗೂ "ತಾವು ಕುಳಿತುಕೊಳ್ಳಿರಿ—ಕುಳಿತುಕೊಳ್ಳಿರಿ" ಎಂದ ಜಯರಾಜ

ಆದರೂ ಜನರು ಜತೆಯಲ್ಲಿ ಹೊರಟರು ಜಯರಾಜನು ಏನನ್ನೂ ಮಾತನಾಡದಲೆ ಭರದಿಂದ ಮುಂದುವರಿಯಲಾರಂಭಿಸಿದ ಮೆಲ್ಲ-ಮೆಲ್ಲನೆ ಜನರೂ ಹಿಂದುಳಿಯತೊಡಗಿದರು ಒಂದೇ ಒಂದು ಉಸಿರಿನಲ್ಲಿ ಸ್ಟೇಶನ್ನು ತಲ್ಪಿದ, ಆದರೇನು? ಗಾಡಿಯು ಹೊರಟುಹೋಗಿತ್ತು ಅವನು ಪ್ಲ್ಯಾಟ್‌ಫಾರ್ಮಿನ ಮೇಲಿದ್ದ ಬೆಂಚಿನ ಮೇಲೆ ಕುಳಿತ ಕುಳಿತುಕೊಂಡಿದ್ದ, ಕುಳಿತುಕೊಂಡಿದ್ದ—

ಅಲ್ಪಾವಧಿಯಲ್ಲಿ ರಾತ್ರಿಯಾಗಿಬಿಡುವುದು' ಎಂದು ಯೋಚಿಸಿದ 'ನಾನು ರಾತ್ರಿಯಲ್ಲಿ ನನ್ನ ಸ್ಥಾನದಿಂದ ಅದೇತಕ್ಕೆ ದೂರದಲ್ಲಿರಬೇಕು? ಇನ್ನೊಂದು ಗಾಡಿಯು ರಾತ್ರಿ ಹನ್ನೊಂದೂವರೆಗೆ ಇದೆ ಭಾಷಣಮಾಡುವಾಗ ನಾನೇಕೆ ಸಮಯದ ಕಡೆಗೆ ಗಮನ-ಕೊಡಲಿಲ್ಲ? ಭಾಷಣದ ಹುಚ್ಚು ಏಕಿದೆ ನನಗೆ? ಮಾಲೆಯನ್ನೂ ಸ್ವಾಗತಗೀತೆಯನ್ನೂ ಕಾಂಗ್ರೆಸ್ ಕಚೇರಿಯಲ್ಲಿಯೆ ಇಡಲು ಹೇಳಿ-ಬಿಟ್ಟು ಬಂದುದು ಒಳಿತೇ ಆಯಿತು ಆ ಗೀತೆಯ ಕೊನೆಯಲ್ಲಿ ಹಸ್ತಾ-ಕ್ಷರಗಳಿದ್ದುವೆ ? ಅವು ಅಲ್ಲಿ ಇರಬೇಕಾದ ಆವಶ್ಯಕತೆಯೇನೂ ಇಲ್ಲ ರಾಷ್ಟ್ರಕ್ಕರ್ಪಿಸಿದ ಕಾಣಿಕೆಯಲ್ಲಿ ಹೆಸರನ್ನು ಕಾಣಿಸಬೇಕಾದುದೇನೂ ಅಗತ್ಯವಿಲ್ಲ ಅದನ್ನು ನಾನು ನೋಡಲಿಲ್ಲವೇಕೋ! ಸುದರ್ಶನೆಯು—ಸುಲೋಚನೆಯೂ ಆಗಬಹುದು, ಸುನಯನೆಯೂ ಆಗಬಹುದು—ಗೀತೆಯ ಕೊನೆಯಲ್ಲಿ ತನ್ನ ಹೆಸರನ್ನು ಕಾಣಿಸುವಷ್ಟು ಅವಳು ಮುಗ್ಧೆಯು ಇರಲಾರಳೆಂದು ಭಾವಿಸುತ್ತೇನೆ ಅವಳ ಹಸ್ತಾಕ್ಷರವು ಆದರಲ್ಲಿರುವುದಾದರೆ ಕಾಂಗ್ರೆಸ್ಸಿನ ಕಚೇರಿಯಲ್ಲಿ ಇಡಲು ಅದು ಯೋಗ್ಯವಾದುದಲ್ಲ, ನನ್ನ ಬಳಿಯಲ್ಲಾಗಲಿ, ಇಸ್ನಾರಲ್ಲಿಯೆ ಆಗಲಿ ಇರಬಹುದು

' . ಹಾಂ, ಆ ಜನಗಳು ೯ ಗಂಟೆಗೆ ಕಾಂಗ್ರೆಸ್ ಕಾರ್ಯ-ಕರ್ತರ ಸಭೆಯನ್ನು ಕರೆದಿದ್ದಾರೆ ಇಲ್ಲ—ಸ್ಟೇಶನ್ನಿನಲ್ಲಿ ಇನ್ನೂ ೫ಗಂಟೆಗಳ ಕಾಲ ಕುಳಿತುಕೊಂಡು ನಾನು ಮಾಡುವುದಾದರೂ ಏನು?

ಆದರೆ ನನ್ನನ್ನು ವಿಚಾರಿಸದೆ ನನ್ನಲ್ಲಿ ಭರವಸೆಯಿಟ್ಟುಕೊಂಡು, ಈ ಜನಗಳು ಸಭೆಕರೆಯುವುದು ಶುದ್ಧ ತಪ್ಪು ಸರಿ, ೯ ಗಂಟೆಯಾ-ಯಿತೋ! ''

ಜಯರಾಜನು ತಟ್ಟನೆ ಎದ್ದು, ಪ್ಲ್ಯಾಟಫಾರ್ಮಿನ ಮೇಲೆ ಅಡಿ-ಯಾಡಲಾರಂಭಿಸಿದ ಅಡಿಯಾಡುತ್ತಲೆ ಇದ್ದ, ಇದ್ದುದಿದ್ದಹಾಗೆಯೇ ಮರಳಿ ಊರಕಡೆಗೆ ನಡೆದ

ಅವನು ಹೋಗು-ಹೋಗುವಾಗ ಕಾತರಭಾವದವನಾಗಿ ಯೋಚಿಸುತ್ತಿದ್ದ -

" ಊರಲ್ಲಿ ಸಾವಿರಾರು ಮನೆಗಳಿವೆ ಸಾವಿರಾರು ಜೀವಿಗಳು ಅವುಗಳಲ್ಲಿ ವಾಸಿಸುತ್ತಾರೆ ಅಣುರೇಣು-ತೃಣಕಾಷ್ಠಗಳಲ್ಲಿಯೂ ಘಟಘಟದಲ್ಲಿಯೂ ವಾಸಿಸುವ ನನ್ನ ರಾಮ! ನಿನ್ನಂತೆಯೆ ನನ್ನನ್ನು ಘಟಘಟದಲ್ಲಿಯೂ ಬೆರೆಯಗೊಡು! ಪ್ರತಿಯೊಬ್ಬರ ಹೃದಯದಲ್ಲಿಯೂ ವಾಸಿಸಗೊಡು! ನಾನು ಯಾರೇ ಒಬ್ಬರವನಾಗಿ ವಾಸಿಸಲು ಬಯಸು-ವುದಿಲ್ಲ ಯಾವುದೇ ಒಂದು ವಿಶಿಷ್ಟವಾದ ರೂಪದಲ್ಲಿ ಯಾರೂ ನನ್ನವರಿಲ್ಲ ನಾನು ಈಗ ಹರಿಪುರ ನಗರಕ್ಕೆ ಹೋಗುತ್ತಿದ್ದೇನೆ, ಈ ಹರಿಪುರ ನಿವಾಸಿಗಳ ಜೀವನಕ್ಕಾಗಿಯೆ ನನ್ನ ಜೀವನವಿರಲಿ! ಬಡವರಲ್ಲಿಯ ಬಡವರಿಗಾಗಿ, ಕೀಳರಲ್ಲಿಯ ಕೀಳರಿಗಾಗಿ, ಹೀನರಲ್ಲಿಯ ಹೀನರಿಗಾಗಿ ನನ್ನ ಸರ್ವಸ್ವವೂ ಸಮರ್ಪಿತವಾಗಲಿ. ಈ ನಗರದಲ್ಲಿ ನನಗೆ ಯಾರೂ ಶ್ರೇಷ್ಠರಲ್ಲ, ಯಾರೂ ಬೇಕಾದವರಲ್ಲ! ನನ್ನ ರಾಮ, ಯಾರೂ ಇಲ್ಲ! ''

" ನನಗೆ ಯಾರೂ ಶ್ರೇಷ್ಠರಲ್ಲ, ಬೇಕಾದವರಲ್ಲ, ಯಾರೂ ಅಲ್ಲ '' ಎಂದು ಪ್ರತಿಜ್ಞೆಮಾಡುತ್ತಿರುವನೋ ಎಂಬಂತೆ ಯೋಚಿಸುತ್ತ ಹೊರಟ ಜಯರಾಜ.

ಸಂಜೆಯ ಸವಿಸಮಯದಲ್ಲಿ ಕಾರ್ಮೋಡಗಳು ಸುಳಿದಾಡುತ್ತಿ-ದ್ದುವು, ನೈರುತ್ಯದಿಂದ ತಂಗಾಳಿಯು ಮೋಡಗಳನ್ನು ತೂರುತ್ತ ಬರುತ್ತಿದ್ದಿತು. ಕರಿಯ ಮೋಡಗಳು ಕ್ಷಿತಿಜದಿಂದ ಮೆಲ್ಲಮೆಲ್ಲನೆ ಮೇಲಕ್ಕೆರುತ್ತ ಸಾಗಿದ್ದುವು

ಕಾಂಗ್ರೆಸ್ ಕಾರ್ಯಕರ್ತರೆಲ್ಲರೂ ಕಾಂಗ್ರೆಸ್ ಕಚೇರಿಯಲ್ಲಿ ಒಟ್ಟು ಸೇರಿದ್ದರು ಜಯರಾಜನು ಅಲ್ಲಿಗೆ ಹೋಗಿ "ಸರಿ! ಬಂದೇ ಬಿಟ್ಟೆ ನೋಡಿ! ಗಾಡಿಯೂ ಸಿಕ್ಕಲಿಲ್ಲ, ತಮ್ಮ ಸೇವೆಗೆ ಸಿದ್ಧನಾಗಿದ್ದೇನೆ! " ಎಂದು ಅಧ್ಯಕ್ಷರಿಗೆ ಹೇಳಿದ

ಅಧ್ಯಕ್ಷರು ಅತ್ಯಂತ ಆನಂದಿತರಾದರು ಅವರು " ಬನ್ನಿರಿ, ಬನ್ನಿರಿ! " ಎಂದರು

" ಸಭೆಯನ್ನು ಸ್ವಲ್ಪ ಬೇಗನೇ ಪ್ರಾರಂಭಿಸಿರಿ ಮತ್ತಾರಾದರೂ ಬರುವವರಿದ್ದರೆ ಅವರನ್ನೂ ಬೇಗನೆ ಬರಮಾಡಿಕೊಳ್ಳಿರಿ ಇನ್ನೊಂದು ಗಾಡಿಯು ೧೧|| ಗೆ ಹೊರಡುತ್ತಿದೆಯಲ್ಲವೆ? ೧೦ ಗಂಟೆಯ ವರೆಗೆ ನಾನು ಸಭೆಯಲ್ಲಿ ಭಾಗವಹಿಸಬಲ್ಲೆ ಅಷ್ಟರಲ್ಲಿಯೆ ತಮ್ಮ ಸಭೆಯು ಮುಗಿಯಲೂ ಬಹುದಲ್ಲ! "

" ಅಹುದು ನಾನು ಈಗಲೇ ಸಭಯನ್ನು ಕರೆಯುತ್ತೇನೆ ಆದರೆ ತಾವು ರಾತ್ರಿ ಇಲ್ಲಿಯೆ ಇದ್ದುಬಿಟ್ಟರೆ ತುಂಬ ಚೆನ್ನಾಗುವುದು! "

"ಆಗುವುದಿಲ್ಲ! ನಾನು ರಾತ್ರಿ ಇಲ್ಲಿ ನಿಲ್ಲುವುದು ಶಕ್ಯವೇ ಇಲ್ಲ!" ಮುಂದೆ ಜಯರಾಜನೆಂದ "ಆದರೆ ತಾವು ಸಭೆಯನ್ನು ಪ್ರಾರಂಭಿಸಿರಿ; ನನ್ನಷ್ಟಕ್ಕೆ ನನ್ನನ್ನು ಬಿಟ್ಟುಬಿಡಿರಿ! "

ಸುಮಾರು ಒಂಬತ್ತು ಗಂಟೆಗೆ ಸಭೆಯು ಪ್ರಾರಂಭವಾಯಿತು ಅಷ್ಟು ಹೊತ್ತಿನೊಳಗಾಗಿ ತಂಗಾಳಿಯು ಬಿರುಗಾಳಿಯ ರೂಪವನ್ನು ಧಾರಣಮಾಡಿದ್ದಿತು. ಆಕಾಶದ ತುಂಬೆಲ್ಲ ಮೋಡಗಳು ಮುಸುಕಿದ್ದುವು ಆಗಾಗ ಮಿಂಚೂ ಹೊಳೆಯುತ್ತಿದ್ದಿತು ಸಿಡಿಲುಗಳು ಗರ್ಜಿಸುತ್ತಿ-ದ್ದುವು. ಸಭೆಯು ಸಾಗಿದ್ದಿತು ಜಯರಾಜನ ಪ್ರವಚನವು ಧಾರಾವಾಹಿ-ಯಾಗಿ ನಡೆದಿದ್ದರೂ ಅನೇಕರ ಲಕ್ಷ್ಯವು ಅತ್ತಕಡೆಗಿರದೆ, ಪ್ರಕೃತಿಯ ಹುಂಕಾರದ ಕಡೆಗೆ ಹೋಗುತ್ತಿದ್ದಿತು ಜಯರಾಜನು ಮಾತ್ರ ತನ್ನ ವಿಷಯನಿರೂಪಣೆಯಲ್ಲಿ ತದೇಕಚಿತ್ತನಾಗಿದ್ದ

ಕಾಂಗ್ರೆಸ್ ಭವನದ ದಿವಾನ್‌ಖಾನೆಯ ಕಿಟಕಿಗಳು ಕಂಪಿಸ-ತೊಡಗಿದುವು ಗರ್ಜನೆಯು ಇಮ್ಮಡಿಸಿತು. ಆ ಸಮಯದಲ್ಲಿ ಜಯರಾಜ ಹೇಳುತ್ತಿದ್ದ.—

"ರಚನಾತ್ಮಕ ಕಾರ್ಯವೇ ಕಾರ್ಯವು, ರಾಜನೀತಿಜ್ಞರು ನಮಗೆ ಬೇಕಾಗಿಲ್ಲ ನಮಗೆ ಬೇಕಾಗಿದ್ದಾರೆ ಸೇವಕರು—ಸೇವೆಯಲ್ಲಿಯೇ ತಲ್ಲೀನರಾಗುವ ಸೇವಕರು ತಲ್ಲೀನರಾಗುವುದೆಂದರೆ ತಮ್ಮ ಜೀವನರಸವನ್ನು ಜನತೆಯ ಸುಖದ ಬೇರಿಗೆ ಸುರಿಯುವುದು ಹೊಟ್ಟೆಗಿಲ್ಲದವರೊಡನೆ, ನಿರುದ್ಯೋಗಿಗಳೊಡನೆ ನಾವಿಂದು ಬೆರೆಯುವ ಯತ್ನವನ್ನು ಮಾಡಬೇಕಾಗಿದೆ ಹಸಿದವರಿಗೆ ಅನ್ನ, ಕೆಲಸವಿಲ್ಲದವರಿಗೆ ಕೆಲಸ, ಸಂಶಯ ಮನದವರಿಗೆ ಧೈರ್ಯ-ಸಾಹಸ ಮೊದಲಾದುವನ್ನು ನಾವು ನೀಡಬೇಕಾಗಿದೆ ಇದೆಲ್ಲವನ್ನೂ ಚರಕವು—ರಾಟೆಯು ಪೂರೈಸಬಲ್ಲುದು "

ಮೇಘಗಳು—ಸಿಡಿಲುಗಳು ಘುಡುಘುಡಿಸುತ್ತಿದ್ದುವು ಕೋಲ್ಮಿಂಚುಗಳು ಝಳಪಿಸುತ್ತಿದ್ದುವು ಸಮಯವೂ ಮುಂದುವರಿಯುತ್ತಿತ್ತು ಮಧ್ಯೆ ಮಧ್ಯೆ ಮಳೆಯ ದೊಡ್ಡ ದೊಡ್ಡ ಹನಿಗಳು 'ಟಪ್ ಟಪ್' ಎಂದು ಬೀಳುತ್ತಿದ್ದುವು ಇಂತಹ ಸಮಯದಲ್ಲ ಅಕಸ್ಮಾತ್ ಜಯರಾಜ ಗಡಿಯಾರದ ಕಡೆಗೆ ನೋಡಿದ "ವಾಹನವು ಸಿಕ್ಕುತ್ತದೆಯೆ ಹೇಗೆ ನೋಡಿರಿ ಸ್ವಲ್ಪ!" ಎಂದು ಅಧ್ಯಕ್ಷರಿಗೆ ಹೇಳಿದ

"ಮೇಘಗಳು ಒತ್ತರಿಸಿ ಬಂದಿವೆ ಸೇವಕರನ್ನು ಕಳುಹುತ್ತೇನೆ" ಮೆಲ್ಲಗೆ ನುಡಿದರು ಅಧ್ಯಕ್ಷರು

ಸಭೆಯು ನಡೆದಿತ್ತು ಹೋದ ಸೇವಕನು ಹಿಂತಿರುಗಿ ಬಂದು "ಮೋಡಗಳು ಮಿತಿಮೀರಿ ಓಡಾಡುತ್ತಿವೆ, ವಾಹನವು ಸಿಕ್ಕಬಹುದು, ಆದರೆ ವಾಹಕರು ಎರಡು ರೂಪಾಯಿ ಬೇಡುತ್ತಾರೆ " ಎಂದು ಅರುಹಿದ ಅಧ್ಯಕ್ಷರು ಸೇವಕನನ್ನು ತಡೆದು 'ಸರಿ, ಸರಿ, ರೂಪಾಯಿಯದೇನು ದೊಡ್ಡ ವಿಷಯ!' ಎಂದು "ವಾಹನವು ಸಿಕ್ಕುವುದು ತರಿಸಲೊ ?" ಎಂದು ಜಯರಾಜನನ್ನು ವಿಚಾರಿಸಿದರು

"ಹುಂ, ತರಿಸಿರಿ! ೧೦ ಗಂಟೆಯಾಗಿ ಹೋಯಿತು!"

ವಾಹನವನ್ನು ತರಲು ಪುನಃ ಸೇವಕನನ್ನು ಕಳಿಸಲಾಯಿತು ಸಭೆಯು ಹಾಗೆಯೆ ಮುಂದುವರಿಯಿತು

ಬಾಗಿಲುಗಳ ತಾಕಲಾಟದಿಂದ, ಕಟ್‌ಕಟ್ ಶಬ್ದವು ಕೇಳಿಬರುತ್ತಿದ್ದಿತು ಗಾಳಿಯು ಭರಭರ ಬೀಸುತ್ತಿದ್ದಿತು, ಬಾಗಿಲುಗಳನ್ನು ಹಾರಿಸಿ ಒಳಕ್ಕೆ ನುಗ್ಗಿಬರಬೇಕೆನ್ನುತ್ತಿದ್ದಿತು ಭೀಕರವಾದ ಕತ್ತಲೆಯು ಮುಸುಕಿದ್ದಿತು ಮಿಂಚುಗಳು ಅದನ್ನು ಇನ್ನಿಷ್ಟು ಭಿಕರಗೊಳಿಸುತ್ತಿದ್ದುವು ಇಡಿ ಊರೆಲ್ಲವೂ ಮನೆಗಳಲ್ಲಿದ್ದಿತು

ಜಯರಾಜನು ಗಡಿಯಾರದ ಕಡೆಗೆ ನೋಡಿದ, ಹತ್ತು ಬಾರಿಸಿ ಐದು ನಿಮಿಷಗಳಾಗಿದ್ದುವು ಹತ್ತು ನಿಮಿಷಗಳೂ ಆದುವು ಹನ್ನೆರಡೂ ಆಗಬಹುದಾಗಿದ್ದಿತು "ವಾಹನವು ಬಂದಿತೆ?" ಅಧ್ಯಕ್ಷರನ್ನು ವಿಚಾರಿಸಿದ

"ಸೇವಕನು ಇನ್ನೂ ಮರಳಿಬಂದಿಲ್ಲ"

"ಹಾಗಿದ್ದರೆ ಕ್ಷಮಿಸಿ! ನಾನು ಹೊರಡಲೇಬೇಕು" ವ್ಯಸ್ತಭಾವದಿಂದ ಹೇಳಿ ಜಯರಾಜನು ಎದ್ದುನಿಂತ.

"ಹೊರಗೆ ನೋಡಿರಿ, ಸ್ವಲ್ಪ ಏನಾಗುತ್ತಿದೆ? ಇಂದು ಇಲ್ಲಿಯೆ ಇದ್ದು ಬಿಡಿರಿ, ಬೆಳಗಿನಲ್ಲಿ ಹೋಗುವಿರಂತೆ" ಎಂದರು ಕಾರ್ಯಕರ್ತರು

ಜಯರಾಜನು ನಸುನಕ್ಕು ಹೇಳಿದ "ಮಳೆ ಮತ್ತು ಗಾಳಿ ನಮ್ಮನ್ನು ತಡೆದರೆ ನಾವು ದೃಢಸಂಕಲ್ಪದವರು ಹೇಗೆ ಎನಿಸಿಕೊಳ್ಳುವೆವು? ರಾಷ್ಟ್ರಸೇವಕರು ಹೇಗೆ ಆಗುವೆವು!"

ವಾಹನ ತರಲು ಹೋದ ಸೇವಕನು ಅಷ್ಟರಲ್ಲಿಯೆ ಹಿಂತಿರುಗಿ ಬಂದು ಹೇಳಿದ "ಮೋಡಗಳ ಆರ್ಭಟವನ್ನು ನೋಡಿ ವಾಹಕನು ಹೊರಡಲು ಸಿದ್ಧನಿಲ್ಲ ಅವನು ೫ ರೂಪಾಯಿ ಬಾಡಿಗೆ ಬೇಡುತ್ತಾನೆ

"ಏನು?" ಆಶ್ಚರ್ಯದಿಂದ ಜಯರಾಜ ಕೇಳಿ "ವಾಹನದ ವೆಚ್ಚವನ್ನು ಕಾಂಗ್ರೆಸ್ಸು ಕೊಡಬೇಕಾಗುವುದಲ್ಲವೇ? ಬೇಡ, ಬೇಡ! ಹಾಗಿದ್ದಲ್ಲಿ ನಾನು ನಡೆದುಕೊಂಡೇ ಹೋಗುತ್ತೇನೆ" ಎಂದ

ಮಾತು ಮುಗಿದಿರಲಿಲ್ಲ ಆಣೆಕಲ್ಲುಗಳು ಪಟಪಟ ಬೀಳಲಾರಂಭಿಸಿದುವು

ಕಾರ್ಯಕರ್ತರು ಜಯರಾಜನ ಕಡೆಗೆ ನೋಡಿದರು ಜಯರಾಜನು ಪ್ರಸನ್ನವದನನಾಗಿಯೆ ತೋರುತ್ತಿದ್ದ ಅವನೆಂದ:

"ಓಹೊ, ಆಣೆಕಲ್ಲುಗಳು ಸುರಿಯುತ್ತಿವೆ! (ಅಧ್ಯಕ್ಷರ ಕಡೆಗೆ ಹೊರಳಿ) ನನಗೆ ಎರಡು ಕಂಬಳಿಗಳನ್ನೂ ಒಂದು ಕೊಡೆಯನ್ನೂ ಕೊಡಲಿಕ್ಕಾಗಬಹುದಲ್ಲವೇ ಈಗ?"

ಅಧ್ಯಕ್ಷರು ವಯಸ್ಸಾದವರು, ಮನಸ್ಸಿನ ಪರಿಪಕ್ವಸ್ಥಿತಿಯಲ್ಲಿ ಇದ್ದವರು. ಜಯರಾಜನು ಇನ್ನೂ ಯುವಕ "ತಾನು ತಂದೆಯಂತೆ ಮುಂದುವರಿದು, ಈ ಹಟವಾದಿ ಹುಡುಗನನ್ನು ತಡೆಯಲಾರೆನೆ?" ಎಂದುಕೊಂಡರು ಅಧ್ಯಕ್ಷರು ಆದರೆ ಜಯರಾಜನನ್ನು ನೋಡಿದ ಕೂಡಲೆ ಆತ್ಮವಿಶ್ವಾಸವು ಹಾರಿಹೋಗುತ್ತಿದ್ದಿತು, ಅವರು ಅವನೆದುರಿಗೆ ನಮ್ರಭಾವದವರಾಗಿಯೆ ಇರುತ್ತಿದ್ದರು "ತಾವು ನಾಳೆ ಮುಂಜಾವದಲ್ಲಿ ಹೋದರೆ ?" ಎಂದು ಕೇಳಿದರು ಅಧ್ಯಕ್ಷರು

'ಎರಡು ಕಂಬಳಿಗಳನ್ನು ಕೊಡಲು ಸಾಧ್ಯವಿದ್ದರೆ ಕೊಟ್ಟು-ಬಿಡಿ! ತುಂಬ ಉಪಕಾರಮಾಡಿದಂತಾಗುವುದು"

ಕಂಬಳಿಗಳನ್ನು ತೆಗೆದುಕೊಂಡ ಒಂದನ್ನು ಮೈಗೆ ಸುತ್ತಿಕೊಂಡ, ಇನ್ನೊಂದನ್ನು ಹೊದ್ದುಕೊಂಡ ಕೊಡೆಯನ್ನು ಏರಿಸಿ ಸಿದ್ಧನಾಗಿ "ಇನ್ನು ನನಗೆ ಅಪ್ಪಣೆಕೊಡಿರಿ" ಎಂದ

ಜಯರಾಜನು ಹೀಗೆ ಮಾತನಾಡುತ್ತಿರುವಾಗಲೆ ಒಂದು ತೀವ್ರವಾದ ಗಾಳಿಯು ಭರದಿಂದ ಬೀಸಿ, ಯಾವುದೊ ಒಂದು—ಮನೆಯ ಎದುರು,ಸಂರಕ್ಷಣೆಗಾಗಿ ಹಾಕಿದ—ತಗಡನ್ನು ಹಾರಿಸಿಕೊಂಡು ಹೋಯಿತು!

ಜಯರಾಜನು ಒಮ್ಮೆದೊಮ್ಮೆ ಬೆಚ್ಚಿದ ಮನದಲ್ಲಿಯೆ ಎಂದು ಕೊಂಡ

" ಹರಿಪುರದಲ್ಲಿ ಇದೊಂದೇ ಒಂದು ರಾತ್ರಿಯನ್ನು ಏಕೆ ಕಳೆಯಲಾಗದು! ಬೆಳಗಾಗುತ್ತಲೆ ಇಲ್ಲಿಂದ ಹೊರಟರಾಯಿತು.."

ಆದರೂ ಎಲ್ಲರ ಕಡೆಗೂ ದೃಷ್ಟಿಯನ್ನು ಹಾಕಿ, ಮತ್ತೊಂದು ಸಲ "ನಮಸ್ಕಾರ" ಎಂದು ಹೇಳಿ, ಸ್ಥಿರವಾಗಿ ಹೆಜ್ಜೆಯನ್ನಿಕ್ಕುತ್ತ ಅವನು ಮುಂದುವರಿದ, ಬಾಗಿಲನ್ನು ದಾಟಿ ಹೊರಟ.

* * *

ಅದೇ ಹರಿಪುರದ ಒಂದು ಮನೆಯ ಮಾಳಿಗೆಯ ಕೆಳಭಾಗದಲ್ಲಿ ಇನ್ನೊಂದು ಸಂಗತಿಯು ಜರುಗುತ್ತಲಿದ್ದಿತು.

ಸುದರ್ಶನಾದೇವಿಯು ಸಭೆಯಲ್ಲಿ ಜಯರಾಜನ ಕೊರಳಲ್ಲಿ ಮಾಲೆಯನ್ನು ಹಾಕಿದಳು, ಸ್ವಾಗತಗೀತೆಯನ್ನು ಹೇಳಿದಳು; ಅದನ್ನು ಅವನ ಅಡಿಗಳಿಗೆ ಅರ್ಪಿಸಿದಳು, ಅವನ ಅಡಿಗಳೆರಡನ್ನೂ ವಂದಿಸಿ ತನ್ನ ಸ್ಥಳದಲ್ಲಿ ಕುಳಿತು, ಅವನ ಭಾಷಣವನ್ನು ಆಲಿಸಿದಳು. ಜಯರಾಜನು ದಪ್ಪಗಿನ ಖಾದಿಯ ಅಂಗಿಯನ್ನು ತೊಟ್ಟಿದ್ದ; ಖಾದಿಯ ಪಂಚೆಯನ್ನುಟ್ಟಿದ್ದ ವಿಶಾಲವಾದ ಹಣೆಯ ಅಂದದಿಂದ— ನಿರ್ಧಯವೂ ಸಂಕಲ್ಪಯುಕ್ತವೂ ಆದ ವಾಣಿಯಿಂದ ಜಯರಾಜನು ಭಾಷಣಮಾಡುತ್ತಿದ್ದ ಸುದರ್ಶನೆಯು ಕೇಳುತ್ತಿದ್ದಳು, ಕೇಳುತ್ತಲೂ ಇರಲಿಲ್ಲ ನೋಡುತ್ತಿದ್ದಳು, ನೋಡುತ್ತಲೂ ಇರಲಿಲ್ಲ

ಜಯರಾಜನು ಮಧ್ಯದಲ್ಲಿಯೆ ಮಂಟಪದಿಂದ ಹೊರಕ್ಕೆ ಹೊರಟುಹೋದ ಸುದರ್ಶನೆಯು ತನ್ನ ಸ್ಥಳದಲ್ಲಿಯೆ ಕುಳಿತಿದ್ದಳು. ಪಕ್ಕದಲ್ಲಿಯ ಹೆಂಗಳೆಯರು ಒಬ್ಬೊಬ್ಬರಾಗಿ ಹೋಗಲಾರಂಭಿಸಿದರು ಅವಳೂ ಎದ್ದು ಹೊರಟುಹೋದಳು

ಅವಳಿಗೆ ಜಯರಾಜನ ಪರಿಚಯವಿದೆಯೆ? ಪರಿಚಯ-ವಿರುವುದೋ ಇಲ್ಲವೋ ನಮಗಂತೂ ತಿಳಿಯದು ಅವನು ಜನರೆಲ್ಲರ ಮುಂದಾಳು! ಎಲ್ಲರಿಗೂ ಅವನ ಪರಿಚಯವು ಮುಂದಾಳೆಂದು ಇದ್ದೇ ಇದೆ ಎಲ್ಲರಂತೆಯೆ ಸುದರ್ಶನೆಗೂ ಇದೆಯೆನ್ನಬಹುದು. ಇದಕ್ಕೂ ಹೆಚ್ಚಿನ ಪರಿಚಯ ಅವಳಿಗಿದ್ದರೆ ಅದು ನಮಗೆ ಗೊತ್ತಿಲ್ಲ. ಇಂದೆಯೆ ಮೊದಲು ಸಲವೇ ಅವಳು ಜಯರಾಜನನ್ನು ನೋಡಿದ್ದಾಳೆ!

ಎಲ್ಲ ಹೆಂಗಳೆಯರೂ ಸಭೆಯಿಂದ ಎದ್ದುಬಂದರು ಸುದರ್ಶ-ನೆಯೂ ಬಂದಳು. ಮನೆಗೆ ಬಂದು ಬಟ್ಟೆಗಳನ್ನೂ ಬದಲಾಯಿಸದೆ ಒಂದು ಚಾಪೆಯ ಮೇಲೆ ಕುಳಿತಳು. ತನ್ನ ಹಣೆಯನ್ನೊಂದು ಸಲ ಗಟ್ಟಿಸಿಕೊಂಡು ಚಾಪೆಯ ಮೇಲೆ ಬಿದ್ದುಕೊಂಡಳು. ಮನಸ್ಸು ತಳಮಳಗೊಳುತ್ತಿದ್ದಿತು ಆದರೆ ಆ ತಳಮಳವು ಏಕಾಗುತ್ತಿದೆ-ಯೆನ್ನುವುದು ಆಕೆಗೆ ತಿಳಿಯುತ್ತಿರಲಿಲ್ಲ.

ಯಾವ ಮಾತೂ ಸ್ಪಷ್ಟವಾಗುತ್ತಿರಲಿಲ್ಲ ಚಾಪೆಯ ಮೇಲೆ ಹಣೆಯನ್ನು ಒಂದೆರಡು ಸಲ ಎತ್ತೆತ್ತಿ ಬಡಿದಳು ಆದರೆ ಬೇಗೆಯಿಂದ ತುಂಬಿದ ಆ ಮಿದುಳಿಗೆ ಯಾವುದರದೂ ಅರಿವು ಇರಲಿಲ್ಲ

ಹೀಗೆಯೆ ಸ್ವಲ್ಪಹೊತ್ತು ಬಿದ್ದುಕೊಂಡು ಎದ್ದಳು ಮುಖ-ಮಾರ್ಜನ ಮಾಡಿಕೊಂಡಳು ಬಟ್ಟೆಯನ್ನು ಬದಲಾಯಿಸಿ, ಒಂದು ಸಾದಾ ಸೀರೆಯನ್ನುಟ್ಟುಕೊಂಡಳು ತನ್ನ ಪತಿಯ ಛಾಯಾಚಿತ್ರದ ಎದುರಿನಲ್ಲಿ ಬಂದು, ಮೊಣಕಾಲೂರಿ ಭಕ್ತಿಯಿಂದ ತಲೆಬಾಗಿಸಿದಳು ತುಂಬಿಬರುತ್ತಿದ್ದ ಹೃದಯದ ಆವೇಗವನ್ನು ತಡೆಹಿಡಿದುಕೊಂಡು ಗೃಹಕೃತ್ಯದಲ್ಲಿ ತೊಡಗಿದಳು

ಸಾಯಂಕಾಲದ ಊಟವಾದ ಬಳಿಕ ತನ್ನ ಪತಿಯ ಕಿರುಮನೆ-ಯನ್ನು ಸೇರಿದಳು ಪತಿದೇವನು ಆರಾಮಕುರ್ಸಿಯ ಮೇಲೆ ಕುಳಿತು ಸಿಗಾರು ಕುಡಿಯುತ್ತಿದ್ದನು ಸಿಗಾರಿನಿಂದೇಳುವ ಧೂಮವನ್ನು ನಿರೀಕ್ಷಿ-ಸುವುದರಲ್ಲಿ ಮಗ್ನನಾಗಿದ್ದನು ಮಿಾಸೆಯಲ್ಲಿಯೆ ನಸುನಕ್ಕು ಅವನು " ಬಾ! ಯಾವಾಗ ಬಂದೆ "? ಎಂದ

ಅವಳು ಒಂದೊಂದೆ ಹಜ್ಜೆಯನ್ನಿಕ್ಕುತ್ತ ಕವಾಟಿನ ಬಳಿ ಬಂದಳು ಆದನ್ನು ತೆರೆದು ನೋಡಲಾರಂಭಿಸಿದಳು ಯಾವ ಸಾಮಾನನ್ನು ತೆಗೆದುಕೊಂಡುಹೋಗಲು ಬಂದಿದ್ದಳೊ !

" ಏನು ಬೇಕು ? "

ಏನೇನೊ ಕಿತ್ತುಹಾಕುತ್ತಿದ್ದಳು ಪತಿಯ ಪ್ರಶ್ನೆಗೆ ಉತ್ತರ-ವನ್ನೀಯಲಿಲ್ಲ

ಪತಿದೇವರು ಪುನಃ ಕಾಲನ್ನು ಮುಂದಕ್ಕೆ ಚಾಚಿ, ಸಿಗಾರು ಕುಡಿಯುತ್ತ ಅದರ ಹೊಗೆಯನ್ನು ನೋಡಲಾರಂಭಿಸಿದರು ಸ್ವಲ್ಪ ಸಮಯದ ಬಳಿಕ ಸುದರ್ಶನೆಯು ಮೆಲ್ಲಗೆ ಕುರ್ಸಿಯ ಹಿಂಬದಿಗೆ ಬಂದು ಅದಕ್ಕೆ ಹೊಂದಿಕೊಂಡು ನಿಂತಳು. ನಸು ವೇಳೆ—ಅವಳು ನಿಂತುದು—ಪತಿದೇವನಿಗೆ ಗೊತ್ತಾಗಲಿಲ್ಲ " ನಾನು ತಮಗೊಂದು ಮಾತು ತಿಳಿಸಬೇಕಾಗಿದೆ " ಎಂದಳು ಸುದರ್ಶನೆ.

ಕಣ್ದೆರೆದು, ಮುಂದೆ ನಿಂತಿದ್ದ ಸುದರ್ಶನೆಯ ಪೂರ್ಣ ಮೂರ್ತಿಯನ್ನು ಕಂಡು ಪತಿದೇವ " ಏನು ಹೇಳು! " ಎಂದ

" ನನ್ನನ್ನು ತಾವು ಏನೆಂದು ತಿಳಿದುಕೊಂಡಿದ್ದೀರಿ ? "

ಇದಕ್ಕೇನೆಂದು ಉತ್ತರವೀಯಬೇಕೆನ್ನುವುದು ಪತಿದೇವನಿಗೆ ಕೂಡಲೆ ಹೊಳೆಯಲಿಲ್ಲ ಎದುರಿನಲ್ಲಿ ಕುರ್ಸಿಯ ಆರ್ಮು ಹಿಡಿದು-ಕೊಂಡು—ಉರಿಯುವ ಮುಖದಿಂದ—ಹಿಂದುಮುಂದಿನ ಸಂದರ್ಭವಿಲ್ಲದೆ,ಒಮ್ಮೆಲೆ 'ನನ್ನನ್ನು ತಾವು ಏನೆಂದು ತಿಳಿದುಕೊಂಡಿದ್ದೀರಿ" ಎಂದು ಕೇಳುವ ಪತ್ನಿಯ ಪ್ರಶ್ನೆಗೆ ಏನೆಂದು ಉತ್ತರಿಸಬೇಕು ? ಪತಿದೇವ-ನೆಂದನು " ನಿನ್ನನ್ನು ನನ್ನ ಪ್ರೇಮದ ಪ್ರತಿಮೆಯೆಂದೂ, ಜೀವದ ಜೀವಾಳವೆಂದೂ, ಮನೆಯ ಮಹಾರಾಣಿಯೆಂದೂ, ನನ್ನ ಕಣ್ಣಿನ ಮಣಿಯೆಂದೂ ನಾನು ತಿಳಿದುಕೊಂಡಿದ್ದೇನೆ ನನ್ನ ಬದುಕಿನ ರಾಣಿ ! ಇನ್ನೇನೆಂದು ತಿಳಿಯಲಿ ! "

ಮತ್ತೊಂದು ಸಲ ಜೋರಿನಿಂದ ಸಿಗಾರು ಕುಡಿದು, ಆದರ ಹೊಗೆಯನ್ನು ಮಂಡಲಾಕಾರದಲ್ಲಿ ಮೇಲ್‌ಗಡೆಗೆ ಬಿಟ್ಟು ಪತಿದೇವ

" ನಾನು ಪತಿವ್ರತೆಯಲ್ಲ ! "

ಗಟ್ಟಿಯಾಗಿ ನಗುತ್ತ "ನೀನು ನನ್ನ ರಾಣಿ, ಕೊರಳ ಕಟ್ಟಾಣಿ, ಮುದ್ದಿನ ಮಡದಿ ! " ಎಂದ ಪತಿದೇವ

" ಇದಕ್ಕೂ ಮೊದಲು ನನಗೆ ಈ ಮಾತು ತಿಳಿದಿರಲಿಲ್ಲ, ಇಂದು ತಿಳಿಯಿತು, ಅದಕ್ಕೆಂತಲೇ ಹೇಳಲಿಕ್ಕೆ ಬಂದಿದ್ದೇನೆ ! "

ಪತಿದೇವನ ಕೈಯಲ್ಲಿ ಸಿಗಾರು ಇದ್ದೇ ಇದ್ದಿತು ಆತನು ಅದರ ಹೊಗೆಯ ಚಕ್ರದೊಂದಿಗೇ ಸುತ್ತುತ್ತಲಿದ್ದನೇನೋ !

" ನಿಮ್ಮಿಂದ ನಾನು ಸಾಕಷ್ಟು ಪ್ರೇಮವನ್ನೂ ಆದರವನ್ನೂ ಪಡೆದೆ ಅವೆಲ್ಲವನ್ನೂ ನಾನು ಕದ್ದುಕೊಂಡು ಬಿಟ್ಟೆ ನಿಮ್ಮನ್ನು ಸಂಪೂರ್ಣ ಮೋಸಗೊಳಿಸಿದೆ ನಿಮ್ಮ ಪ್ರೇಮದೊಡತಿಯು ನಾನಾಗ-ಬಾರದಿತ್ತು ನಾನು ಅಪಾತ್ರಳಾಗಿದ್ದೆ ನಾನು ನನ್ನ ಸರ್ವಸ್ವವನ್ನು ತಮಗೆ ಸಮರ್ಪಿಸಿರಲಿಲ್ಲವೆಂಬುದು ಇಂದು ನನಗೆ ತಿಳಿದುಬಂದಿತು. ಶರೀರ ಅಂತರಾಳದಲ್ಲಿ ಯಾವುದೋ ಸ್ವಲ್ಪ ಉಳಿದುಕೊಂಡಿದ್ದಿತು.

ನನಗೆ ಆತ್ಮವು ತಿಳಿಯದು, ಧರ್ಮವು ತಿಳಿಯದು, ಸದಾಚರಣೆಯು ತಿಳಿಯದು ಆದರೆ ಪ್ರೀತಿಯೊಂದನ್ನು ಮಾತ್ರ ತಿಳಿದಿದ್ದೇನೆ ಎಂತಲೇ ಸುದರ್ಶನಾ, ನಾನು ನಿನ್ನನ್ನು ಪ್ರೀತಿಸುತ್ತೇನೆ ನೀನು ನನ್ನ ಅರಿವಿನ ಆಳದಿಂದ ದೂರಳಾಗಿರುವೆಯೆಂದೂ ನನ್ನ ಹಿಡಿತದಲ್ಲಿ ಇಲ್ಲವೆಂದೂ ಆದರೂ ನನ್ನನ್ನು ನೀನೆ ಬದುಕಿಸಿರುವೆಯೆಂದೂ ನಾನು ಬಲ್ಲೆನು ಆದರೆ ಸುದರ್ಶನಾ, ನಾನು ನಿನ್ನನ್ನು ಪ್ರೀತಿಸುತ್ತೇನೆ ನಾನು ಹೆಂಡಗುಡಕನು ನಿಜ! ನಾನು ದೋಷಪೂರ್ಣನು, ನಿಜ! ನಾನು ಸಟೆಗಾರನು, ನಿಜ! ಆದರೂ ನಾನು ನಿನ್ನನ್ನು ಪ್ರೀತಿಸುತ್ತೇನೆ ಸುದರ್ಶನಾ, ಇದು ನಿನಗೆ ಗೊತ್ತುಂಟು: ನಾನು ಎಂದಾದರೂ ಪಾತಿವ್ರತ್ಯವನ್ನು ಕುರಿತು ನಿನ್ನನ್ನು ವಿಚಾರಿಸಿರುವೆನೆ? ನಾನು ಎಂದಾದರೂ ಅದಕ್ಕೆ ಬಾಧ್ಯಸ್ಥನೆಂದು ತಿಳಿದುಕೊಂಡಿರುವೆನೆ? ಅದಕ್ಕೆ ಬೇಕಾಗುವ ಯೋಗ್ಯತೆಯನ್ನು ಸಂಪಾದಿಸಿಕೊಂಡಿರುವೆನೆ? ಯಾವು-ಯಾವುವೊ ಬಯಕೆ ತಲೆದೋರುವುವು ಆದರೆ ಬಯಕೆಯ ಪೂರ್ತತೆಯ ಮೊದಲು ನನ್ನನ್ನು ನಾನು ನಿರೀಕ್ಷಿಸಿಕೊಳ್ಳಬೇಕಲ್ಲವೆ? ಸುದರ್ಶನಾ, ನನಗಿನ್ನು ಯಾವುದೂ ಬೇಕಾಗಿಲ್ಲ, ನಿನ್ನ ಪ್ರೇಮವೊಂದು ಬೇಕು, ಅದನ್ನು ನೀಡು! ಬೇಡ, ಪ್ರೇಮವನ್ನೇನೂ ಕೊಡಬೇಡ! ನನ್ನ ಪ್ರೇಮವನ್ನು ಸ್ವೀಕರಿಸುವ ಒಪ್ಪಿಗೆಯನ್ನಷ್ಟು ಸಲ್ಲಿಸು ಎಂದರೆ ನನ್ನ ಹೆಂಡಗುಡುಕತನವು, ದೋಷಗಳು, ಸಟೆಯು ಓಡಿ—ಓಡಿ—ಹೋಗುವುವೆಂಬುದನ್ನು ನೀನೇ ನೋಡುತ್ತೀಯೆ! ಸುದರ್ಶನಾ, ನಾನು ನಿನ್ನೊಡನೆ ಹೆಚ್ಚಾಗಿ ಮಾತನಾಡಲಿಲ್ಲ, ನಿನ್ನಿಂದ ದೂರದಲ್ಲಿರುತ್ತಿದ್ದೆ ನಿನ್ನೆದುರಿನಲ್ಲಿ ನನ್ನ ಬಾಯಿಯಿಂದ ಮಾತುಗಳೇ ಹೊರಡದಾಗುತ್ತಿದ್ದುವು ಇದಕ್ಕೆಲ್ಲ ಕಾರಣವೆಂದರೆ ನನ್ನಲ್ಲಿ ಕುಂದಿದೆಯೆಂಬ ಅರಿವು ನನಗೆ ಇದ್ದುದು ನೀನು ಬಿಡುಗಡೆ ಹೊಂದಲು ಬಯಸುವಾಗ, ಕೊರತೆಯಿಂದ ತುಂಬಿದ ನನ್ನ ಹೃದಯವೂ ನಿನ್ನ ಮೇಲೆ ತನ್ನ ಅಧಿಕಾರವನ್ನು ಸ್ವಲ್ಪ ನಡೆಯಿಸಲು ಬಯಸುವುದು ಇಂದು ಗರ್ಜಿಸುತ್ತಿರುವ ಆಗಸದ ಬುಡದಲ್ಲಿ ನಿಂತು, ನಿನ್ನ ಮೇಲೆ ನನ್ನ ಪತಿತ್ವದ ಅಧಿಕಾರವು ಏನೂ ಇಲ್ಲವೆಂದು ಘೋಷಿಸುತ್ತೇನೆ.

ಆದರೆ ನನ್ನ ಪ್ರೇಮದ ಅಧಿಕಾರವು ಮಾತ್ರ ಇದೆ, ಆ ಪ್ರೇಮವು ನಿನ್ನಿಂದ ಯಾವ ಕೈಫಿಯತ್ತನ್ನೂ ಬೇಡುವುದಿಲ್ಲ ನಾನು ಅಸಭ್ಯನು, ವ್ಯಸನಿಯು, ದುರಾಚಾರಿಯು ಇದನ್ನು ನಾನು ಒಪ್ಪುತ್ತೇನೆ ಆದರೆ ನಾನು ನಿನ್ನನ್ನು ಬಿಡಲಾರೆ! ನೀನು ನನ್ನಿಂದ ಬಿಡುಗಡೆ ಹೊಂದಲು ಬಯಸಿದರೂ ನಾನು ಗಟ್ಟಿಯಾಗಿ ನಿನ್ನ ಪಾಣಿಗ್ರಹಣವನ್ನು ಮಾಡಿ 'ನಾನು ನಿನ್ನನ್ನು ತ್ಯಜಿಸಲಾರೆ' ಎಂದು ಸ್ಪಷ್ಟವಾಗಿ ಹೇಳುತ್ತೇನೆ"

ಸುದರ್ಶನೆಯ ಕಣ್ಣುಗಳಿಂದ ನೀರು ಹನಿಹನಿಯಾಗಿ ಉದುರತೊಡಗಿತು ಪತಿದೇವನ ವಾಣಿಯೂ ಗದ್ಗದಿತವಾಗಿದ್ದಿತು ಕನ್ನಡಕವನ್ನು ಧರಿಸಿದ್ದರೂ ಅವನ ಕಣ್ಣೆವೆಗಳು ಸಜಲವಾಗಿದ್ದುದು ಕಾಣುತ್ತಿದ್ದಿತು

"ನನ್ನ ದೊರೆಯೆ! ಎಲ್ಲವೂ ಒಳ್ಳೆಯದ ಆಗುವುದೆಂದು ನನಗೆ ಭರವಸೆಯಿದ ನಿಮ್ಮ ಪ್ರೇಮವನ್ನು ನಾನು ಸ್ಪರ್ಶಿಸಲಾರೆ ಅದು ನನ್ನ ದುರ್ಭಾಗ್ಯ ಅದಕ್ಕೆ ಪ್ರತಿಯಾಗಿ ಕೊಡುವುದರಲ್ಲ ನಾನು ತಪ್ಪಿತ್ತರಲು, ಅದನ್ನು ಮುಟ್ಟುವ ಧೈರ್ಯವನ್ನು ನಾನು ಹೇಗೆ ಮಾಡಲಿ? ಇಲ್ಲ, ನಾನು ಹಾಗೆ ಮಾಡಲಾರೆ (ಆಣೆಕಲ್ಲುಗಳು ಮಾಳಿಗೆಯ ಮೇಲೆ ಸುರಿಯಲಾರಂಭಿಸಿದುವು) ಒಡೆಯರೆ, ನೀವು ನನ್ನನ್ನು ತಡೆದುದೇಂದು? (ಮೊಣಕಾಲೂರಿ) ನಿಮ್ಮನ್ನು ನಾನು ಅಗಲಿದರೂ ನಿಮ್ಮ ಪ್ರೇಮವು ನನ್ನಿಂದ ಅಗಲಲಾರದೆಂದು ನನಗೆ ಭರವಸೆಯಿದೆ, ನನ್ನ ಅಗಲಿಕೆಯಲ್ಲಿ ನಿಮ್ಮ ಪ್ರೇಮವು ಅಡ್ಡ ಬರಲಾರದೆಂದೂ ನನಗೆ ವಿಶ್ವಾಸವಿದೆ ನಾನು—"

ಸುದರ್ಶನೆಯು ಪತಿಯ ಚರಣಗಳನ್ನು ಹಿಡಿಯಲು ಕರಗಳನ್ನು ಮುಂದೆ ನೀಡಿದಳು ಪತಿಯ ಕಣ್ಣುಗಳು ಶೂನ್ಯವಾಗಿದ್ದುವು ಪತ್ನಿಯ ಕರಗಳ ಕೋಮಲವಾದ ಬೆರಳುಗಳು ಪಾದವನ್ನು ಸ್ಪರ್ಶಿಸಿದುವೊ ಇಲ್ಲವೊ, ಅತ್ಯಂತ ವಿಷಣ್ಣಭಾವದಿಂದ ಪತಿದೇವನು ತನ್ನ ಪಾದಗಳನ್ನು ತ್ವರೆಯಿಂದ ಹಿಂದೆಗೆದನು ಭರದಿಂದ ಕೋಣೆಯ ಕಡೆಗೆ ಸಾಗಿದನು, ಸಾಗಿಯೇ ಸಾಗಿದನು. ಕೋಣೆಯೊಳಕ್ಕೆ ಪ್ರವೇಶಿಸಿ, ಕಪಾಟನೊಳ-

ಗಿಂದ ಬಾಟ್ಲಿಯೊಂದನ್ನು ಹೊರಕ್ಕೆ ತೆಗೆದನು ಎದುರಿನಲ್ಲಿ ಚಿಕ್ಕ ಟೇಬಲ್ಲಿನ ಮೇಲಿಟ್ಟಿದ್ದ ಕಾಜಿನ ಲೋಟವನ್ನು ಕೈಯಲ್ಲಿ ತೆಗೆದು-ಕೊಂಡು, ಲೋಟದ ಮೇಲೆ ಲೋಟ ಕುಡಿಯತೊಡಗಿದನು

ಸುದರ್ಶನೆಯು ನೀರಿನಿಂದ ತುಂಬಿದ ನಯನಗಳಿಂದ ನೋಡಿದಳು ಮೆಲ್ಲಮೆಲ್ಲಗೆ ಎದ್ದು ಮನೆಯಿಂದ ಹೊರಬಿದ್ದಳು

* * * *

ಕತ್ತಲೆಯ ರಾತ್ರಿ ಹನಿಗಳುದುರುತ್ತಲಿವೆ ಕಾರ್ಮೋಡ-ಗಳು ಗರ್ಜಿಸುತ್ತಲಿವೆ ಎಲ್ಲೆಲ್ಲಿಯೂ ಶಾಂತಿಯಿದೆ ಮಿಂಚುಗಳು ಹೊಳೆದು ಕತ್ತಲೆಯನ್ನು ಇನ್ನಿಷ್ಟು ಕಪ್ಪುಮಾಡಿ ಮರೆಯಾಗುತ್ತಲಿವೆ ಜಯರಾಜನು ಕೊಡೆಯನ್ನು ಏರಿಸಿ ಹಿಡಿದುಕೊಂಡು, ಕಂಬಳಿಯನ್ನು ಹೊದ್ದುಕೊಂಡು, ಹಾರುಹೆಜ್ಜೆಗಳನ್ನಿಕ್ಕುತ್ತ ಹೊರಟು ಹೋಗುತ್ತಿ-ದ್ದಾನೆ. ಕೊಡೆಯು ನಿರುಪಯೋಗಿಯಾಗಿದ್ದರೂ ಅದನ್ನು ಏರಿಸಿಯೆ ಹಿಡಿದುಕೊಂಡಿದ್ದಾನೆ ಕಂಬಳಿಯು ತೊಯ್ದು ಭಾರವಾಗುತ್ತಲಿದೆ ಜಯರಾಜನು ಹೋಗುತ್ತಿದ್ದಾನೆ, ಊರಲ್ಲಿಯ ನಾಲ್ಕು ಮಾರ್ಗಗಳ ಕೂಟದಲ್ಲಿ—ಒಂದೆಡೆಗೆ—ಒಬ್ಬ ಹೆಂಗುಸು ತೋಯಿಸಿಕೊಳ್ಳುತ್ತ ನಿಂತಿರುವಳೆಂದು ಮಿಂಚುಗಳು ತೋರಿಸಿದುವು ಜಯರಾಜನು ಅವಳ ಸಮೀಪಕ್ಕೆ ಹೋಗಿ "ನೀನಾರಮ್ಮಾ" ಎಂದು ಕೇಳಿದ.

ಕತ್ತಲೆಯು ಮುಸುಕಿದ್ದಿತು ಕತ್ತಲಲ್ಲಿಯೇ ಸುದರ್ಶನೆಯು ನುಡಿದಳು "ಸ್ಟೇಶನ್ನಿಗೆ ಹೋಗಬೇಕಾಗಿದೆ ಎತ್ತ ಕಡೆಯಿಂದ ಹೋಗಬೇಕು ?"

ಅವಳಾರು ? ಈ ಸಮಯದಲ್ಲಿ ಸ್ಟೇಶನ್ನಿಗೆ ಹೋಗಲೇಕೆ ಬಯಸುತ್ತಾಳೆ ? ಎಂಬುದನ್ನೆಲ್ಲ ಜಯರಾಜ ಕೇಳಲಿಲ್ಲ. "ನಾನೂ ಸ್ಟೇಶನ್ನಿಗೇ ಹೋಗುತ್ತಿದ್ದೇನೆ" ಎಂದ

ಈ ನುಡಿಯನ್ನು ಕೇಳುತ್ತಲೇ ಅವಳು ಮುಂಬರಿದು ಅವನೊ-ಡನೆ ಹೊರಟಳು

ಆಗ ಜಯರಾಜನ ಮನದಲ್ಲಿ ಒಮ್ಮೆಲೆ ಒಂದು ವಿಚಾರವು ಉದಯವಾಯಿತು—ಆಣೆಕಲ್ಲಿನ—ಮಳೆಯಲ್ಲಿ, ಕತ್ತಲಿನ ಏಕಾಂತ-

ರಾತ್ರಿಯಲ್ಲಿ, ವಿಶ್ರಾಂತಿಯಿಂದ ಮನೆಯಲ್ಲಿ ಮಲಗಿದ ಸಂಸಾರವನ್ನು ತೊರೆದು, ತನ್ನ ಸಂಗಡ ಸ್ಟೇಶನ್ನಿಗೆ ಬರುತ್ತಿರುವ ಈ ಹೆಂಗುಸು-ಸುಲೋಚನೆಯೊ ಸುನಯನೆಯೊ ಸುವದನೆಯೊ ಇರುವುದಿಲ್ಲ ಇವಳು ವಿಶಿಷ್ಟ ವ್ಯಕ್ತಿಯೆ ಸರಿ ಈಕೆ ಯಾರ ಪ್ರತಿನಿಧಿಯೂ ಇರುವುದಿಲ್ಲ ಈಕೆ ತಾನೆ ಒಬ್ಬಳೆ ಒಬ್ಬಳು ಜಯರಾಜನಾದರೊ ಭಾರತರಾಷ್ಟ್ರ ಸೇವೆಗಾಗಿ ಸಮರ್ಪಣಮಾಡಿಕೊಂಡ ಅಗಣಿತ ಸೇವಕರಲ್ಲಿ ಅಗ್ರಗಣ್ಯ ಅವನು ಜಯರಾಜನಾಗದೆ ಪ್ರಿಯರಾಜನೊ ಬಲಿರಾಜನೊ ಆಗಲಾರ ಈ ಸಹಸ್ರಾವಧಿ ನರನಾರಿಯರ ನಿವಾಸದ ನಡುವಣ ನಾಲ್ದಾರಿಗಳ ನಿರ್ಜನ ಕೂಟದಲ್ಲಿ ಏನು ನಡೆಯುತ್ತಿದೆಯೆಂಬದನ್ನು ನೋಡದ ಗ್ರಾಮದ ಮಾರ್ಗಗಳ ಮೇಲೆ, ಮಳೆಗರೆಯುವ ಮುಗಿಲಿನ ಕೆಳಗೆ, ಆಪ್ಲಾವಿತ ಪೃಥ್ವಿಯ ವಕ್ಷಸ್ಥಲದ ಮೇಲೆ, ದೇಶ—ರಾಷ್ಟ್ರ—ಸೇವೆ-ಸಾಧನಗಳೆಲ್ಲವನ್ನು ಮೀರಿದ ವಿಶ್ವಾತ್ಮನ ಸಮ್ಮುಖದಲ್ಲ ಈ ಒಬ್ಬ ಹೆಂಗುಸಿನೊಡನೆ—ಒಬ್ಬನೆ ಒಬ್ಬನಾಗಿ—ನಿಜವಾದ ಜಯರಾಜನಾಗಿ ಜಯರಾಜ ನಡೆದಿದ್ದಾನೆ. ಅವನು ಎಲ್ಲ ಕಡೆಯಿಂದಲೂ ಮುಕ್ತನಾಗಿದ್ದಾನೆ ತಾನೆ ತಾನು ಆಗಿದ್ದಾನೆ ಈ ಕತ್ತಲೆಯ ಗರ್ಭದಲ್ಲಿ—ಸರ್ವ ಶಂಕೆಗಳ ಮಧ್ಯದಲ್ಲಿ—ಸಾರವಂತನಾಗಿಯೂ ವ್ಯರ್ಥತೆಗಳ ನಡುವೆ ಅವ್ಯರ್ಥನಾಗಿಯೂ ಅವನು ಹೊರಟಿದ್ದಾನೆ

ಸುದರ್ಶನೆ? ಜಯರಾಜನನ್ನು ಅರಿತುಕೊಳ್ಳಲಿಕ್ಕೆ ಒಂದೆ ಒಂದು ಕ್ಷಣ ಕಾಲವನ್ನಾದರೂ ಆಕೆ ಕಳೆದಿರುವಳೆ?

"ಕೊಡೆಯ ಕೆಳಗೆ ಬನ್ನಿ ಮಳೆಯ ಕಸುವು ಹೆಚ್ಚಾಗಿದೆ" ಎಂದ ಜಯರಾಜ.

ಸುದರ್ಶನೆಯು ಸಮೀಪಕ್ಕೆ ಬಂದು, ಅವನನ್ನು ಹೊಂದಿ-ಹೊಂದಿಕೊಂಡು ನಡೆಯಲು ತೊಡಗಿದಳು "ನೀವಾರು? ಏನು ಕೆಲಸ ಮಾಡುತ್ತಿದ್ದೀರಿ? ಇಂಥ ಸಮಯ—ಪರಿಸ್ಥಿತಿಯಲ್ಲಿ ಏಕೆ ಇದ್ದೀರಿ?—" ಮುಂತಾದ ಪರಸ್ಪರ ಪ್ರಶ್ನೆಗಳು ಮಾತುಕತೆಗಳು ಆಗಬೇಕಲ್ಲವೇ! ಎಂಬುದರ ಯೋಚನೆ ಕೂಡ ಅವರ ಮನದಲ್ಲಿ ಬರಲಿಲ್ಲ ಮಂಡಲಾಕಾರ ವಿಶ್ವದ ಮಧ್ಯದಲ್ಲಿ, ಕತ್ತಲು ಮುಸುಕಿದ

ಅಸ್ಪಷ್ಟ ದಾರಿಯಲ್ಲಿ, ಒಂದೇ ಕೊಡೆಯ ಕೆಳಗೆ ಅವರಿಬ್ಬರೂ ಜೋಡಿ-ಜೋಡಿಯಾಗಿ ನಡೆದಿರುವರು ಅವರಿಬ್ಬರೇ ಇರುವರು ಅವರೇ ಒಬ್ಬರಿಗೊಬ್ಬರು ಸಹಾಯಕರು ಒಬ್ಬರಿಗೊಬ್ಬರಾಗಿ ಇರುವರು ಮಿಕ್ಕ ಯಾರ ಸಂಬಂಧವೂ ಅವರಿಗೆ ಇರುವುದಿಲ್ಲ

ಮೂರನೆಯವರಾರೂ ಅಲ್ಲಿ ಎಲ್ಲಿಯೂ ಇಲ್ಲ, ಇಷ್ಟು ಮಾತ್ರ ಅವರಿಗೆ ಗೊತ್ತು ಇಷ್ಟೆ ಅವರಿಗೆ ಸಾಕಾಗಿದೆ, ಇದಕ್ಕೂ ಅವರಿಗೆ ಹೆಚ್ಚಿಗೇನು ಬೇಕಾಗಿದೆ ?

ಹೋಗು-ಹೋಗುತ್ತ ಜಯರಾಜ "ನೀವು ಪೂರ್ತಿ ತೋಯಿಸಿ-ಕೊಳ್ಳುತ್ತಿದ್ದೀರಿ, ತೆಗೆದುಕೊಳ್ಳಿ ಈ ಕಂಬಳಿಯನ್ನು !" ಎಂದ

ತಾನು ಹೊದ್ದುಕೊಂಡ ಕಂಬಳಿಯನ್ನು ತೆಗೆದು ಜಯರಾಜ ಸುದರ್ಶನೆಗೆ ಹೊಚ್ಚಿದ ಅದನ್ನು ಹೊದ್ದುಕೊಂಡು ಮಾತನಾಡದೆ ಅವಳು ಅವನೊಡನೆ ನಡೆದಳು

ಅಲ್ಪಾವಧಿಯಲ್ಲಿಯೆ ವಿಪರೀತ ಮಳೆಯಾಗಿಬಿಟ್ಟಿದ್ದಿತು ಅಲ್ಲಲ್ಲ ಕೊರಕಲುಗಳು ಬಿದ್ದಿದ್ದುವು ಅವುಗಳಲ್ಲಿಂದ ಚಿಕ್ಕ ಚಿಕ್ಕ ಕಿರುದೊರೆಗಳು ಹರಿಯುತ್ತಿದ್ದುವು ಮಿಂಚಿದಾಗ ಅವು ನಗುತ್ತಿದ್ದುವು ಆ ನಗುವಿಕೆಯನ್ನು ನೋಡಿ ಕತ್ತಲೆಯು ಮೋಹಗೊಂಡು ಮತ್ತೆ ಅವುಗಳನ್ನು ನುಂಗಿಬಿಡುತ್ತಿದ್ದಿತು

ನೀರಿನ ಆಳವಾದ ತಗ್ಗಿನಲ್ಲಿ "ಪಟ್ಟನೆ" ಸುದರ್ಶನೆಯ ಕಾಲು ಒದ್ದಿತು, ಚಿಮ್ಮಿದ ನೀರು ಜಯರಾಜನಿಗೂ ಸಿಡಿಯಿತು ಅವಳ ಬಾಯಿಂದ 'ಅಯ್ಯೋ !' ಎಂಬುದು ಹೊರಬಿದ್ದಿತು

"ಏನಾಯಿತು ?" ಎಂದು ಜಯರಾಜ ತಡೆದು ನಿಂತ

ಸುದರ್ಶನೆಯು ಮಾತನಾಡದೆ ಕಾಲನ್ನು ತಗ್ಗಿನಿಂದ ಮೇಲಕ್ಕೆ ತೆಗೆದುಕೊಂಡು, ಕುಂಟುತ್ತ ಕುಂಟುತ್ತ ನಡೆದಳು

"ಕಾಲು ಒಳೆಯಿತೆ ?"

ಸುದರ್ಶನೆಯು ಮಾತನಾಡದಲೆ ಮುಂದುವರಿದಿದ್ದಳು ಜಯ-ರಾಜನೂ ಕೊಡೆ ಹಿಡಿದುಕೊಂಡು ಅವಳೊಡನೆಯೆ ಸಾಗಿದ್ದನು ಒಮ್ಮೆಲೆ ನಿಂತು "ಕಾಲಲ್ಲಿ ಜೋಡುಗಳೂ ಇಲ್ಲವೆ ?" ಎಂದ.

ಮಿಂಚಿನ ಬೆಳಕಿನಲ್ಲಿ ಸುದರ್ಶನೆಯ ಉದ್ದುದ್ದವಾದ, ತೆಳುವಾದ ಕಾಲ್ಬೆರಳುಗಳನ್ನು ಜಯರಾಜ ನೋಡಿದ, ಪಾದಗಳು ಚಿಕ್ಕವೂ ಕೆಚ್ಚನೆಯವೂ ಆಗಿದ್ದುವಲ್ಲದೆ ಅವುಗಳಿಗೆ ನಡೆಯುವ ಅಭ್ಯಾಸವಿಲ್ಲ-ವೆನ್ನುವುದೂ ಕಂಡಿದ್ದಿತು

ಸುದರ್ಶನೆಯು ಮಾತನೇನೂ ಆಡದೆ ಮುಂದೆ ಮುಂದೆ ನಡೆಯುತ್ತಿದ್ದಳು ಜಯರಾಜನ ನಡಿಗೆಯೂ ತೀವ್ರಗತಿಯುಳ್ಳ-ದಾಯಿತು ಅವನು ಸ್ವಲ್ಪ ಆತುರದ ದನಿಯಲ್ಲಿ ಹೇಳಿದ "ಬೇಗ ಬೇಗ ನಡೆಯಿರಿ! ನಾನು ರೈಲಿಗೆ ಹೋಗಬೇಕಾಗಿದೆ" ಎಂದು

ಸುದರ್ಶನೆಯು ಒತ್ತರದಿಂದ ನಡೆಯತೊಡಗಿದಳು ಅವಳ ನೊಂದಕಾಲು ಕುಂಟುತ್ತಲೆ ಇದ್ದಿತು ಜಯರಾಜನು ಮನಸ್ಸನ್ನು ಬಿಗಿಹಿಡಿದು,ಅವಳ ಕಾಲನೋವಿನ ಕಡೆಗೆ ನೋಡದೆ ಲಗುಬಗೆಯಿಂದ ನಡೆದಿದ್ದ. ಅಲ್ಪಾವಧಿಯಲ್ಲಿಯೆ ನಡಿಗೆಯ ಗತಿಯನ್ನು ಸ್ವಲ್ಪ ನಿಧಾನಮಾಡಿ "ಓಹೋ, ನಿಮ್ಮ ಕಾಲು ಒಳೆದಿದೆಯಲ್ಲವೇ? ಕ್ಷಮಿಸಿರಿ! ನಾನು ಮರೆತು ಭರದಿಂದ ನಡೆಯುತ್ತಿದ್ದೆ." ಎಂದ ಜಯರಾಜ.

ಸಾಕಷ್ಟು ದೂರದ ವರೆಗೆ ಅವರು ಮಾತನಾಡದೆ—ಒಂದೇ ಕೊಡೆಯ ಕೆಳಗೆ—ಹತ್ತಿರ ಹತ್ತಿರದಲ್ಲಿ ನಡೆಯುತ್ತ ಹೋದರು. ಮಳೆಯು ಕಡಮೆಯಾಗುತ್ತಲಿದ್ದಿತು ಮೋಡಗಳು ಬಯಲಾಗುತ್ತ-ಲಿದ್ದುವು ದಾರಿಯ ಮರಗಳ ಮೇಲಿನ ಎಲೆಗಳಿಂದ—ಮೆಲುಗಾಳಿಯ ಮೂಲಕ—ಒಂದೆರಡು ಹನಿಗಳು ಉದುರಿ 'ಟಪ್ ಟಪ್' ಎಂದು ಬೀಳುತ್ತಿದ್ದುವು ಹೊನ್ನೆಯ ಹುಳುಗಳು ಆಗಾಗ ಹೊಳೆದು ತಮ್ಮ ಇರುವಿಕೆಯನ್ನು ತೋರಿಸುತ್ತಿದ್ದುವು ರಾತ್ರಿಯಾಗಿದ್ದಿತು, ಶಾಂತ-ತೆಯು ನೆಲೆಗೊಂಡಿದ್ದಿತು. ಅಂಧಕಾರದಲ್ಲಿ ಕಪ್ಪು ಅಷ್ಟೊಂದು ಇರಲಿಲ್ಲ ಒಬ್ಬರೊಬ್ಬರ ಉಸಿರಿನ ದನಿಯನ್ನು ಆಲಿಸುತ್ತ ಅವರಿ-ಬ್ಬರೂ ಮುಂದಡಿಯಿಡುತ್ತಿದ್ದರು. ಸ್ಟೇಶನ್ನಿನ ಸಿಗ್ನಲುಗಳ ಕೆಂಪು-ಕೆಂಪಾದ ಕಣ್ಣುಗಳು ಕಂಡುವು ಅಲ್ಲಲ್ಲಿ ಹಸಿರು ಬಣ್ಣವೂ ಕಾಣುತ್ತಿದ್ದಿತು. ಜಯರಾಜ ಮೆಲ್ಲಗೆ ಕೇಳಿದ

"ಎಲ್ಲಿಗೆ ಹೋಗಬೇಕಾಗಿದೆ ನಿಮಗೆ?"

ಮಾತಿಲ್ಲ

"ನನ್ನ ಗಾಡಿ ಹನ್ನೊಂದುವರೆ ಗಂಟೆಗೆ ಇಲ್ಲಿಂದ ಹೊರಡುತ್ತದೆ"

ಮಾತಿಲ್ಲ

"ಓಹೋ, ಚಳಿಯಾಗುತ್ತಿದೆಯೇ ನಿಮಗೆ? ಇನ್ನೇನು? ಇದೋ ಸ್ಟೇಶನ್ನೇ ಬಂದಿತು ಇಂದು ಚಳಿಯು ವಿಪರೀತವಾಗಿದೆ ಕಂಬಳಿಯನ್ನು ಚೆನ್ನಾಗಿ ಹೊದ್ದುಕೊಳ್ಳಿರಿ! (ಸುದರ್ಶನೆಯ ಮೈಮೇಲಿದ್ದ ಕಂಬಳಿಯನ್ನು ಮುಟ್ಟಿ) ಓಹೋ, ಇದು ಒದ್ದೆಯಾಗಿದೆ ಸರಿ! ಸ್ಟೇಶನ್ನಿನಲ್ಲಿ ನೋಡೋಣ, ಕಾಸಿಕೊಳ್ಳುವುದಕ್ಕೆ ಬೆಂಕಿಯು ಸಿಕ್ಕುತ್ತದೆಯೇನೋ! ಭಾರವಾಗಿದೆಯಲ್ಲವೆ ಕಂಬಳಿ? ಇಲ್ಲಿ ನೋಡಿ, ಕಂಬಳಿಯನ್ನು ಹಾಗೆ ಹೊದ್ದುಕೊಳ್ಳಬಾರದು, ಹೀಗೆ ಹೊದ್ದುಕೊಳ್ಳಬೇಕು" ಎಂದು ಹೇಳಿ ಕಂಬಳಿಯನ್ನು ಸರಿಯಾಗಿ ಹೊದ್ದಿಸಿದ

ಎಲ್ಲ ಕಡೆಗಳಿಂದಲೂ ಮುಕ್ತಳಾಗಿ, ಈ ಸಂಪೂರ್ಣವಾದ ಅಂಧಕಾರದಲ್ಲಿ ಶೂನ್ಯದೊಳಗಿಂದ—ನಿರುದ್ದೇಶದಿಂದ—ಅಪರಿಚಿತ ವ್ಯಕ್ತಿಯೊಡನೆ ಹೋಗುತ್ತಿದ್ದಾಳೆ ಈ ವ್ಯಕ್ತಿಯ ವಿಷಯದಲ್ಲಿ ಸಂಶಯವು ಬರುವುದಾದರೂ ಹೇಗೆ ಸುದರ್ಶನೆಗೆ? ಶಬ್ದಹೀನಳಾಗಿ ಸಂದೇಹರಹಿತಳಾಗಿ ನಡೆಯುತ್ತಿದ್ದಾಳೆ ನಿರ್ಮಮ-ಸಮ್ಯಗ್ಭಾವದಿಂದ ಮುಂದುವರಿಯುತ್ತಿದ್ದಾಳೆ ಆಕೆ ಯಾರನ್ನೂ ಪ್ರಶ್ನಿಸಬೇಕಾಗಿಲ್ಲ, ಉತ್ತರವನ್ನೂ ನಿರೀಕ್ಷಿಸಬೇಕಾಗಿಲ್ಲ ಯಾವ ಜಿಜ್ಞಾಸೆಯೂ ಅವಳಿಗಿಲ್ಲ ಮುಂದಾಗುವುದರ ಕಡೆಗೆ ಸಂಶಯವೃತ್ತಿಯೂ ಇಲ್ಲ ಸಂಪೂರ್ಣವಾಗಿ ನಿಃಸಂದಿಗ್ಧ, ಆಶಾರಹಿತ, ನಿಃಸಂಶಯ ವೃತ್ತಿಯುಳ್ಳವಳಾಗಿ ಹೊರಟುಹೋಗುತ್ತಿದ್ದಾಳೆ ಎಲ್ಲಿಗೆ?— ಗೊತ್ತಿಲ್ಲ ಏಕೆ?— ಗೊತ್ತಿಲ್ಲ ಆದರೆ ಅರಿತುಕೊಳ್ಳಬೇಕೆನ್ನುವ ಬಯಕೆಯ ಅಭಾವವು ಅವಳಲ್ಲಿ ಇರದೆ ಇರಲಿಕ್ಕಿಲ್ಲ

ಸ್ಟೇಶನ್ನಿನ ಬಳಿಗೆ—ತೀರ ಬಳಿಗೆ ಬಂದಾಗ ಕೇಳಿದಳು: "ನಿಮ್ಮ ಗಾಡಿಯು ಹನ್ನೊಂದುವರೆ ಗಂಟೆಗೆ ಹೋಗುತ್ತದೆಯಲ್ಲವೇ?"

ಮಳೆಯು ನಿಂತಿತು, ಗಾಳಿಯೂ ಭರದಿಂದ ಬೀಸುತ್ತಿರಲಿಲ್ಲ ಮೂರನೆಯ ತರಗತಿಯ ಪ್ರಯಾಣಿಕರ ವಿಶ್ರಾಂತಿಯ ಸ್ಥಳದಲ್ಲಿ ಮೂವರು ನಾಲ್ವರು ಪ್ರಯಾಣಿಕರು—ತಮ್ಮ ಗಂಟುಗಳನ್ನೇ ತಲೆದಿಂಬುಗಳನ್ನಾಗಿ ಮಾಡಿಕೊಂಡು—ನಿದ್ರಿಸುತ್ತಿದ್ದರು ಸ್ಟೇಶನ್ನಿನ ಆಫೀಸಿನಲ್ಲಿ ಮಾಸ್ಟರ್ ಮಹಾಶಯರು ಕಾವುಂಟರಿನ ಮೇಲೆ ತಲೆಯನ್ನಿಟ್ಟು ತೂಕಡಿಸುತ್ತಿದ್ದರು ಆಫೀಸಿನ ಹೊರಗೊಂದು ಬೆಂಚು ಇದ್ದಿತು ಮಾಸ್ಟರ್ ಮಹಾಶಯರ ತಲೆಯು ಅಂಗೈ ಮೇಲೆ ಒರಗಿದ್ದಿತು ಬಾಯಿಂದ ಜೊಲ್ಲು ಹಸಿಹನಿಯಾಗಿ ಸುರಿಯುತ್ತಿದ್ದಿತು ಕಂಬಳಿಯನ್ನು ದೇಹದ ತುಂಬ ಸುತ್ತಿಕೊಂಡಿದ್ದರು ಆಫೀಸಿನಲ್ಲ ತಂತಿಯು 'ಕಟ್ ಕಡಕಡ ಕಟ್' ಶಬ್ದಮಾಡುತ್ತಿದ್ದಿತು

ಸುದರ್ಶನೆಯನ್ನು ಬೆಂಚಿನ ಮೇಲೆ ಕುಳ್ಳಿರಿಸಿ ಜಯರಾಜ ಆಫೀಸಿನೊಳಕ್ಕೆ ಬಂದು ಕೂಗಿದ "ಮಾಸ್ಟರ್ ಸಾಹೇಬ್!"

ಮಾಸ್ಟರ್ ಮಹಾಶಯರು ಕನಸು ಕಾಣುತ್ತಿದ್ದರು ಒಮ್ಮಿಂದೊಮ್ಮೆಲೆ ಈ ಕೂಗಿನಿಂದ ಬೆಚ್ಚಿಬಿದ್ದರು ಕಣ್ಣುಗಳನ್ನು ತೆರೆದು ನೋಡಿದರು ಜೊಲ್ಲನ್ನು ಒರಸಿಕೊಂಡರು ಇಷ್ಟರಲ್ಲಿ ಗಾಡಿಯು ಹಿಂದಿನ ಸ್ಟೇಶನ್ನು ಬಿಟ್ಟುದರ ಸುದ್ದಿಯ ಗಂಟೆ ಬಾರಿಸಿತು ಗಂಟೆಯ ಶಬ್ದವೂ ಜಯರಾಜನ ಕೂಗೂ ಏಕಕಾಲಕ್ಕೆ ಕೇಳಿಸಿದುವು

"ಏನು?"

"ಕಂಬಳಿಯೊಂದು ಬೇಕಾಗಿದೆ ಕೊಡುತ್ತೀರಾ?" ಎಂದು ಕೇಳಿದ ಜಯರಾಜ

ಮಾಸ್ಟರ್ ಮಹಾಶಯರು ಮೈಮುರಿದು ಆಕಳಿಸಿದರು ಗಡಿಯಾರದ ಕಡೆಗೆ ನೋಡಿ, ಕಂಬಳಿಯನ್ನು ತೆಗೆದು ಪಕ್ಕದಲ್ಲಿಟ್ಟು "ಕಂಬಳಿಯಿಲ್ಲ! ನಡೆಯಿರಿ ಹೊರಕ್ಕೆ"! ಎಂದರು

"ವಿಪರೀತ ಚಳಿಯಿದೆ ಇನ್ನೂ ಈಗ ಮಳೆ ನಿಂತಿದೆ ಕಂಬಳಿಯನ್ನು ನಿಮಗ ಮರಳಿ ಕೊಡುತ್ತೇನೆ"

ಭಾರವಾದ ನಿದ್ರಾಸ್ವರದಲ್ಲಿಯೆ ಮಾಸ್ಟರರು "ಇಲ್ರೀ ಕಂಬಳಿ! ಹೋಗ್ರಿ ಹೊರಗೆ!" ಎಂದರು,

ಜಯರಾಜನು ಸ್ವಲ್ಪ ಮುಂದಕ್ಕೆ ಹೋಗಿ ಅಲ್ಲಿಯಿಟ್ಟಿದ್ದ ಕಂಬಳಿಯನ್ನು ತೆಗೆದುಕೊಂಡು “ಕಂಬಳಿಯು ಇದೆಯಲ್ಲ! ಇದು ತಮ್ಮದಲ್ಲವೆ? ಇದನ್ನು ಇಲ್ಲಿಯೆ ಮತ್ತೆ ತಂದು ಇಡುತ್ತೇನೆ” ಎಂದು ತೆಗೆದುಕೊಂಡು ಮತ್ತೇನನ್ನೂ ಮಾತನಾಡದೆ ಹೊರಕ್ಕೆ ಹೋದ

ಸುದರ್ಶನೆಯು ಬೆಂಚಿನ ಮೇಲೆ ಕುಳಿತುಕೊಂಡು ಎದುರಿನಲ್ಲಿ ದೃಷ್ಟಿಯನ್ನಿಟ್ಟಿದ್ದಳು ರೈಲಿನ ಸಾಲುಗಳು ಒಂದನ್ನೊಂದು ಕತ್ತರಿಸಿ ಎಲ್ಲೆಲ್ಲಿಗೊ ಹೋಗುತ್ತಿದ್ದುವು ಅವುಗಳ ಮೇಲೆ ನೀರು ಬಿದ್ದು-ದರಿಂದ ಆಗಾಗ ಅವು ಸ್ಟೇಶನ್ನಿನ ಮಂದಮಂದವಾದ ಪ್ರಕಾಶದಲ್ಲಿ ಮಿನುಗುತ್ತಿದ್ದುವು ಸುದರ್ಶನೆಯು ಕಂಬಳಿಯನ್ನು ಹೊದ್ದಿದ್ದಳು. ಆದರೂ ಆಕೆಯ ಉಟ್ಟತೊಟ್ಟ ಬಟ್ಟೆಗಳು ತೊಯ್ದು ತಪ್ಪಡಿ-ಯಾಗಿದ್ದುವು ಚಳಿಯಿಂದ ಗಡಗಡನೆ ನಡುಗುತ್ತಿದ್ದಳು ಹೊದ್ದಿದ್ದ ಕಂಬಳಿಯೊಳಗಿಂದಲೂ ಚಳಿಯು ನುಗ್ಗಿ ನಡುಗಿಸುತ್ತಿದ್ದಿತು

“ಕಂಬಳಿಯೂ ತೊಯ್ದಿದೆಯಲ್ಲವೆ ಇಲ್ಲಿ ಕೊಟ್ಟುಬಿಡಿ! ಹಿಂಡಿ ಹರಡುತ್ತೇನೆ” ಜಯರಾಜನು ಕಂಬಳಿಗೆ ಕೈ ತಗುಲಿಸಿದ ಕೂಡಲೆ ಸುದರ್ಶನೆ ಅದನ್ನು ಕೊಟ್ಟುಬಿಟ್ಟಳು.

ಜಯರಾಜನು ಅದನ್ನು ಬೆಂಚಿನ ಬೆನ್ನಿಗೆ ಹರಡಿ ಒಣಗು-ಹಾಕಿದ ಹೊಸದಾಗಿ ತಂದ ಕಂಬಳಿಯನ್ನು ಆಕೆಯ ಕಡೆಗೆ ಕೊಟ್ಟು, “ಹೊದ್ದುಕೊಳ್ಳಿ ಇದನ್ನು ಕುಪ್ಪಸವೂ ತೊಯ್ದುಹೋಗಿದೆಯೇನೊ! ಅದನ್ನೂ ಕೊಟ್ಟುಬಿಡಿ! ಹಿಂಡಿಹಾಕುತ್ತೇನೆ” ಎಂದ

ಸುದರ್ಶನೆಯು ಕೇಳಿದಳು ಕಂಬಳಿಯನ್ನು ತೆಗೆದುಕೊಂಡು ಬೆಂಚಿನ ಮೇಲಿಟ್ಟಳು, ಹೊದ್ದುಕೊಳ್ಳಲಿಲ್ಲ

ಒಂದು ಷರ್ಟು, ಒಂದು ಪಂಚೆಯನ್ನು ಬಿಟ್ಟು ಉಳಿದ ಬಟ್ಟೆ-ಗಳೆಲ್ಲವನ್ನೂ ಜಯರಾಜನು ಒಂದೊಂದಾಗಿ ಬಿಚ್ಚಿಹಾಕಿದ

ಸುದರ್ಶನೆಯು ಕಂಬಳಿಯನ್ನು ಬೆಂಚಿನ ಮೇಲೆ ಅವನೆದುರಿಗೆ ಇಟ್ಟಳು, ಆದರೆ ಅವನಿಗೆ ‘ಕಂಬಳಿಯನ್ನು ಇಟ್ಟಿದ್ದೇನೆ, ಹೊದ್ದು-ಕೊಳ್ಳಿರಿ’ ಎಂದು ಹೇಳಲಿಲ್ಲ. ಬೆಂಚಿನ ಕೆಳಕ್ಕೆ ತೂಗಾಡುತ್ತಿದ್ದ

ಕಾಲುಗಳನ್ನು ಮೇಲಕ್ಕೆ ತೆಗೆದುಕೊಂಡು, ಎರಡೂ ಮೊಳಕಾಲು—ಎರಡೂ ಕೈಗಳ ನಡುವೆ ತಲೆಯನ್ನಿಟ್ಟುಕೊಂಡು, ಒದ್ದೆಯಾದ ಸೀರೆಯ ಸೆರಗನ್ನೇ ಬಿಗಿಯಾಗಿ ಸುತ್ತಿಕೊಂಡು ಕುಳಿತಳು ಜಯ-ರಾಜನು ವ್ಯಸ್ತಚಿತ್ತನಾಗಿ ಅವಳ ಬಳಿಯಲ್ಲಿಯೆ ಬಂದು ಬೆಂಚಿನ ಮೇಲೆ ಕುಳಿತು, ಅವಳಿಗೆ ಕಂಬಳಿಯನ್ನು ಹೊದ್ದಿಸಲಾರಂಭಿಸಿದನು.

ಕಂಬಳಿಯನ್ನು ಹೊದ್ದಿಸುವುದು ಅವಳಿಗೆ ಗೊತ್ತಾಗಲಿಲ್ಲ ನಿದ್ರೆಯಲ್ಲಿದ್ದಳೊ ಏನೊ!

" ಕುಪ್ಪಸವನ್ನು ಕಳೆದುಕೊಡಿ! ವಿಶ್ರಾಂತಿಯನ್ನು ತೆಗೆದು-ಕೊಳ್ಳಿ! ಸ್ವಲ್ಪಕಾಲ ಮಲಗಿಕೊಂಡು ಬಿಡಿ!" ಎಂದ ಜಯರಾಜ

ಸುದರ್ಶನೆ ನಿದ್ದೆಯಲ್ಲಿದ್ದವಳ ಹಾಗೆ ಏನೆಲ್ಲವನ್ನೂ ಮಾಡ-ತೊಡಗಿದಂತೆ ಕಂಡಿತು ಆಕೆ ಕುಪ್ಪಸವನ್ನು ಕಳೆದೂ ಕೊಡಬಹುದು! ಮಲಗಿಕೊಂಡು ವಿಶ್ರಮಿಸಲೂ ಬಹುದು! ಕುಪ್ಪಸ ಬಿಚ್ಚಿ ಇಡುತ್ತಿದು-ತ್ತಲೇ ಅವಳು ನಿದ್ದೆಯಲ್ಲಿದ್ದವರ ಹಾಗೆ ತೂಕಡಿಸಿ ತೂಕಡಿಸಿ ಬೀಳಲು ತೊಡಗಿದಳು ಜಯರಾಜನು ಅವಳನ್ನು ಗಟ್ಟಿಯಾಗಿ ಹಿಡಿದು ಹೇಳಿದ

" ಸುದರ್ಶನಾ! ಸುದರ್ಶನಾ! ಬಿದ್ದುಬಿಟ್ಟೀಯೆ! ಸರಿಯಾಗಿ ಮಲಗಿಕೊಳ್ಳು!"

ಸುದರ್ಶನೆಯು ಅವನ ತೊಡೆಗಳ ಮೇಲೆಯೆ ಉರುಳಿಬಿಟ್ಟಳು.

ಈಗ ತಾನೇನು ಮಾಡಬೇಕೆಂಬುದು ಜಯರಾಜನಿಗೆ ತಿಳಿಯ ದಾಯಿತು ಇನ್ನು ತಾನು ಏಳಲಾಗದೆಂದು ಬಗೆದು, ಸರಿಯಾಗಿ ಕುಳಿತುಕೊಂಡ. ಅಸಹಾಯಳಾಗಿ ತನ್ನ ತೊಡೆಯಲ್ಲಿ ನಿದ್ರಿಸಿರುವವ-ಳನ್ನು ಎಬ್ಬಿಸಿ, ಅವಳನ್ನು ಬಿಟ್ಟುಹೋಗುವುದಾದರೂ ಹೇಗೆ? ತೊಡೆಯಲ್ಲಿ ಮಲಗಿದವಳಿಗೆ ತೊಂದರೆಯಾಗದಂತೆ—ಸರಿಯಾಗಿ ಕುಳಿತ ಸುದರ್ಶನೆಯು ಅತ್ತಿತ್ತ ಮಗ್ಗಲುಗಳನ್ನು ಹೊರಳಿಸಿ ಸುಖ-ನಿದ್ರೆಗಾಗಿ ಸ್ಥಳವನ್ನು ಸಂಪಾದಿಸಿಕೊಳ್ಳಲಾರಂಭಿಸಿದಳು. ಕಾಲು-ಗಳನ್ನೂ ಕೈಗಳನ್ನೂ ಪಸರಿಸಿ ಕಂಬಳಿಯನ್ನು ಚೆನ್ನಾಗಿ ಬಿಗಿದು ಹೊದ್ದುಕೊಂಡಳು. ಆಗ ಜಯರಾಜನಿಗೂ ಸ್ವಲ್ಪ ಹೊಚ್ಚಿದ ಹಾಗೆ

ಆಯಿತು. ಗೂಡುಮಾಡಿಕೊಂಡು, ಅದರಲ್ಲಿ ಸುಖಾಸನವನ್ನು ನಿರ್ಮಿಸಿಕೊಂಡು ಮಲಗಿದ ಹಕ್ಕಿಯನ್ನು ತಟ್ಟಿತಟ್ಟಿ ಮಲಗಿಸಬೇಕೆಂದು ಬಯಕೆಯಾಯಿತು—ಜಯರಾಜನಿಗೆ ಅವನು ಕೇಳಿದ "ಚಳಿಯಾಗುತ್ತಿದೆಯೆ?" ಎಂದು

ಜಯರಾಜನ ಮಾತಿಗೆ ಉತ್ತರವೆಂಬಂತೆ ಸುದರ್ಶನೆಯು ಮಾತನೇನೂ ಆಡದೆ ಹೊರಳಾಡಿ, ಇನ್ನಿಷ್ಟು ಅವನ ತೊಡೆಗೆ ಅಂಟಿಕೊಂಡಳು

ಜಯರಾಜ ಇನ್ನಿಷ್ಟು ನೇರವಾಗಿ ಕುಳಿತು, ಮುಂಗಡೆಗೆ ನೋಡಲು ತೊಡಗಿದ

ಆತನ ಬತ್ತಲೆಯಿದ್ದ ಅಂಗಗಳಿಗೆ ಆಕೆಯ ತಂಪಾದ ಕೋಮಲವಾದ ದೇಹದ ಸ್ಪರ್ಶವು ಆಗುತ್ತಿದ್ದಿತು ಸುದರ್ಶನೆಯ ದೇಹಲತೆಯು ಜಯರಾಜನ ದೇಹವೃಕ್ಷದ ಆಶ್ರಯಕ್ಕಾಗಿ ಹೋಗುತ್ತಿದ್ದಿತೇನೊ! ಆಕೆಯ ದೇಹದ ಸ್ಪರ್ಶವಾದಾಗ ಅವನ ಶರೀರದಲ್ಲಿ ವಿದ್ಯುಲ್ಲತೆಯು ಹರಿದಂತಾಗುತ್ತಿದ್ದಿತು ಆಗ ಜಯರಾಜ 'ರಾಮ ರಾಮ, ರಾಮ ರಾಮ' ಎಂದು ನಾಮಜಪಕ್ಕೆ ತೊಡಗುತ್ತಿದ್ದ

'ರಾಮ' ಎಂದರೇನು ಅವನಿಗೆ ಗೊತ್ತಿದ್ದಿತೆ? ಇಲ್ಲ, ಗೊತ್ತಾಗುವಂತೆಯೂ ಇರಲಿಲ್ಲ ಆದರೆ ರಾಮನಾಮವು ತನ್ನ ಕೊನೆಯ ಆಧಾರವೆಂದೊ ಏನೋ ಅವನು ಅದನ್ನು ಅತ್ಯಂತ ಕಾತರನಾಗಿ—ದೀನನಾಗಿ ಜಪಿಸುತ್ತಿದ್ದ ರಾಮನಾಮವನ್ನು ಒತ್ತರದಿಂದ ಅವನ ನಾಲಗೆಯು ಮಿಡಿಯುತ್ತಿದ್ದಿತು

ಹಕ್ಕಿಯು ಗೂಡಿನಲ್ಲಿ ಈಗ ಸುಖವಾಗಿ ನಿದ್ರಿಸುತ್ತಿದೆ ಸುಖವಾಗಿ? ಅಹುದು! ಸುಖವು ಕಡಮೆಯಾದಾಗ ಅದು ಮಗ್ಗಿಲಾಗುತ್ತದೆ ಅದರ ಸೀರೆ ಒದ್ದೆಯಾಗಿದ್ದರೂ ಆದಕ್ಕೆ ಕಂಬಳಿಯಿಂದ ಶಾಕವೂ ದೊರೆತಿದೆ

ಈ ದಾರಿತಪ್ಪಿದ ಹಕ್ಕಿಯ ಹೃದಯದ ಹಾರಿಕೆಯು ತನಗೆ ಕೇಳಿಸುತ್ತಿರುವುದೆಂದು ಜಯರಾಜನಿಗೆನಿಸುತ್ತಿದ್ದಿತು ಆ ಹಕ್ಕಿಗೆ ಸುಖವೂ ಸಿಕ್ಕುತ್ತಲಿದೆಯೆಂಬುದೂ ಅವನಿಗೆನಿಸುತ್ತಿದ್ದಿತು. ತನ್ನ

ದೇಹದಲ್ಲಿಯೂ ಕಾವು ಉಂಟಾಗುತ್ತಿದೆಯೆಂದೂ ಎನಿಸುತ್ತಿದ್ದಿತು ತನ್ನ ದೇಹದಲ್ಲಿ ಯಾವುದೊ ಒಂದು ಬಗೆಯ ಉದ್ರೇಕವು ತಲೆಯೆತ್ತುತ್ತಿದೆಯೆನ್ನುವುದು ಗೊತ್ತಾಗುತ್ತಿದ್ದಿತು ಇದು ಗೊತ್ತಾದಾಗಲೆಲ್ಲ ಇನ್ನಿಷ್ಟು ತೀವ್ರಗತಿಯಿಂದ ರಾಮನಾಮವನ್ನು ಉಚ್ಚರಿಸುತ್ತಿದ್ದನು.

ಸುದರ್ಶನೆಯು 'ಅಮ್ಮವ್ಮಾ!' ಎಂದು ತನ್ನ ಮಗ್ಗಲು ಹೊರಳಿಸಿ, ಚೆನ್ನಾಗಿ ಮಲಗಿದಳು ಈಗ ಆಕೆಯ ಕರಗಳೆರಡೂ ಜಯರಾಜನ ಎರಡೂ ಬದಿಗಳಲ್ಲಿ ಬಿದ್ದುವು ಮತ್ತು ಆಕೆಯ ಶರೀರದ ಉತ್ತರಭಾಗವು ಜಯರಾಜನ ತೊಡೆಗಳ ಮೇಲೆ ಸುಖವಾಗಿ ಬಿದ್ದುಕೊಂಡಿತು

ಜಯರಾಜನ ಉಸಿರು ಭರದಿಂದ ಆಡತೊಡಗಿತು ಓಡಿಹೋಗಬೇಕೆಂದು ಬಯಸಿದ್ದರೆ ಅವನು ಓಡಿಹೋಗಲೂ ಬಹುದಾಗಿದ್ದಿತು. ಆದರೆ ಅವನು ಸ್ವಲ್ಪವೂ ಅಲುಗಾಡಲಿಲ್ಲ ತನ್ನ ಶರೀರದ ಮೇಲೆ ಬಿದ್ದ ಕೋಮಲ ಶರೀರವು—ಸಜೀವವಾಗಿದ್ದೊಂದು ಹೆಣ್ಣಿನ ದೇಹವು ಉಸಿರಾಟದ ಮೂಲಕ ಸ್ಪಂದನಗೊಳ್ಳುತ್ತಿದ್ದಿತು ಅದನ್ನು ಜಯರಾಜನು ನಿಷ್ಪಂದನ-ನಿಶ್ಚೇತನಗೊಳಿಸಬೇಕೆನ್ನುತ್ತಿದ್ದ ಆದರೇನು? ಆತನು ಜಪಿಸುತ್ತಿದ್ದನು—ರಾಮ, ರಾಮ, ರಾಮ

ಈ ಭೂತಲದಲ್ಲಿ 'ರಾಮ' ಎಂದರೇನು? ರಾಮ, ರಾಮ, ರಾಮ.

ಇಷ್ಟರಲ್ಲಿ ಪ್ಲ್ಯಾಟ್‌ಫಾರ್ಮನ್ನು ನಡುಗಿಸುತ್ತ ಉಗಿಬಂಡಿಯು ಸ್ಟೇಶನ್ನಿನಲ್ಲಿ ಬಂದು ಜಯರಾಜನ ಎದುರಿನಲ್ಲಿ ನಿಂತಿತು ಜಯರಾಜನ ತೊಡೆಗಳಲ್ಲಿ ಸುಖವಾಗಿ ಮಲಗಿದ್ದ ಹಕ್ಕಿಯು ನಿದ್ರೆಯಲ್ಲಿದ್ದಿತು ಈಗ ಅವನೇನು ಮಾಡಬೇಕು? ಈ ಗಾಡಿಯಿಂದಲೆ ಆತನಿಗೆ ಹೋಗಬೇಕಾಗಿದೆ ಉಗಿಬಂಡಿಯ ಕಿಟಕಿಗಳೊಳಗಿಂದ ಬೆಳಕು ಹೊರಕ್ಕೆ ನುಸುಳಿ ಬರುತ್ತಿದ್ದಿತು ಡಬ್ಬಿಗಳಲ್ಲಿ ಎಲ್ಲ ಜನರೂ ಮಲಗಿದ್ದಾರೆ, ಅವರು ಬೆಳಗಾಗುತ್ತಲೆ ತಮ್ಮ ತಮ್ಮ ಮನೆಯಲ್ಲಿರುವರು ಗಾಡಿಯಲ್ಲಿ

ನುಳಿಯೂ ಬರುವುದಿಲ್ಲ. ಕಿಟಕಿಗಳನ್ನು ಮುಚ್ಚಿದರೆ ಗಾಳಿಯಿಂದ ಸಂರಕ್ಷಿಸಿಕೊಳ್ಳಲೂ ಆಗುತ್ತದೆ

ಜಯರಾಜನು ತನ್ನ ಕಾಲುಗಳನ್ನು ಸ್ವಲ್ಪ ಅಲ್ಲಾಡಿಸಿದ. ಆತನ ವಿಚಾರಪ್ರವಾಹ ಒಂದೆರಡು ಹಜ್ಜೆ ಮುಂದುವರಿದು, ಎರಡನೆಯ ತರಗತಿಯ ಡಬ್ಬಿಯಲ್ಲಿ ಹೋಗಿ ಕುಳಿತುಕೊಳ್ಳಬಹುದೆಂದು ಭಾವಿಸಿತು ಅಲ್ಲಿ ಕಾಸಿರಬಹುದು, ಸ್ಥಳವೂ ಒದ್ದೆಯಾಗಿರಲಿಕ್ಕಿಲ್ಲ, ಎರಡನೆಯ ತರಗತಿಯ ಡಬ್ಬಿಯಲ್ಲಿ ಹಾಸಿದ ಗಾದೆಯ ಮೇಲೆ ಮಲಗಿದರೆ ಇವಳಿಗೆ ವಿಶ್ರಾಂತಿಯು ಹೆಚ್ಚಾಗಿ ದೊರೆಯಲಾರದೇ! ಆಮೇಲೇನು ಕೆಲವು ನಿಮಿಷಗಳಲ್ಲಿ ಈ ಹರಿಪುರವು ಎಲ್ಲುಳಿಯುವುದೊ, ಈ ಸ್ಟೇಶನ್ನು ಎಷ್ಟು ಹಿಂದಾಗುವುದೊ! 'ಆಗೊ ನೋಡು, ರೈಲು ಬಂದಿದೆ, ಏಳು ಹೊರಡೋಣ! ಅನ್ನಲೆ?' ಎಂದು ಮನದಲ್ಲಿಯೆ ಯೋಚಿಸಿದನೊ ಏನೊ! ಆ ಯೋಚನೆಯನ್ನೂ ಅಲ್ಲಿಗೇ ನಿಲ್ಲಿಸಿದ. ತಮ್ಮಿಬ್ಬರಿಗೂ ವಿಶ್ರಾಂತಿಯನ್ನೂ ಬಿಡುಗಡೆಯನ್ನೂ ಕೊಡಬಲ್ಲ ರೈಲುಬಂಡಿಯನ್ನು ನೆಟ್ಟದೃಷ್ಟಿಯಿಂದ ನೋಡತೊಡಗಿದ ಅದು ಇನ್ನು ಸ್ವಲ್ಪ ಸಮಯದಲ್ಲಿ—ಮಾತು ಮಾತಾಡುವದರೊಳಗೆ—ಹರಿಪುರವನ್ನು ದಾಟಿ ಹೋಗುವುದು ತನ್ನ ತೊಡೆಯ ಮೇಲೆ ಮಲಗಿದ್ದ ಹೆಂಗುಸನ್ನು ಜಯರಾಜ ನೋಡಿದ 'ನೀನು ಮಲಗಬೇಕೆನ್ನುವಿಯಾ? ನನ್ನ ತೊಡೆ ನಿನಗೆ ಹೀಗೆಯೆ ದೊರೆಯುತ್ತಿರುವುದೆ? ನೀನೆಲ್ಲಿಗೂ ಹೋಗಬೇಕಾಗಿಲ್ಲವೆ? ರೈಲುಗಾಡಿ ಬಂದಿದೆ, ಏಳು, ಎದ್ದು ನಿಲ್ಲು,' ಎಂದು ಹೇಳುವ ವಿಚಾರ ಮತ್ತೆ ಎಂದಿದ್ದಿತೇನೊ!

ಆದರೆ ಆ ಹಕ್ಕಿಯು ಅವನ ತೊಡೆಗಳ ಮೇಲೆ ಮಧುರವಾಗಿ ಉಸುರಾಡಿಸುತ್ತ ಬಿದ್ದುಕೊಂಡಿದ್ದಿತು

ಜಯರಾಜ ಸ್ವಲ್ಪ ಅಲ್ಲಾಡಿದ. ಉಚ್ಚಸ್ವರದಿಂದ ಒಬ್ಬನನ್ನು ಹತ್ತಿರ ಕರೆದು ಕೇಳಿದ' ವಿಲಾಸಪುರದ ಟಿಕೀಟು ತಂದುಕೊಡುತ್ತೀರಾ?" ಈ ನುಡಿಗಳನ್ನು ಅವನು ಸುದರ್ಶನೆಗೆ ಕೇಳಿಸದಂತೆ ನುಡಿದ ಆದರೆ ಅವು ಅವಳಿಗೆ ಕೇಳಿಸಿದುವೇನೊ, ಮೈಮುರಿಯುತ್ತ ಎದ್ದು ಕುಳಿತಳು.

ಸ್ವಲ್ಪ ಹೊತ್ತಿನ ಮೇಲೆ ಹೊದ್ದಿದ್ದ ಕಂಬಳಿಯನ್ನು ಅವನಿಗೆ ಕೊಡುತ್ತ "ತೆಗೆದುಕೊಳ್ಳಿರಿ" ಎಂದಳು

"ಏಕೆ? ಏಕೆ?"

ಕಂಬಳಿಯನ್ನು ಹಿಡಿದ ಕೈಯನ್ನು ಅವನ ಕಡೆಗೆ ಚಾಚಿ– "ತೆಗೆದುಕೊಳ್ಳಿರಿ, ನೀವು ಹೋಗಿರಿ" ಎಂದಳು.

ಆಗ ಜಯರಾಜನಿಗೆ ಯಾವುದೂ ಹೊಳೆಯದಂತಾಯಿತು ಸುದರ್ಶನೆಯನ್ನು ನೋಡುತ್ತ ನಿಂತುಬಿಟ್ಟ. ಸುದರ್ಶನೆಯ ಕಣ್ಣುಗಳಲ್ಲಿ ಅಭಿಯೋಗವೂ ಇರಲಿಲ್ಲ, ನಿರಾಶೆಯೂ ಇರಲಿಲ್ಲ ಆ ಕಣ್ಣುಗಳು 'ಯಾವ ತೊಂದರೆಯೂ ಇಲ್ಲ, ನೀವು ಬೇಕಾದಲ್ಲಿಗೆ ಹೋಗಿರಿ, ಈ ರಾತ್ರಿನಲ್ಲಿ ಇವಳು ಮನಸ್ಸಿಗೆ ಬಂದಹಾಗೆ ಇರುವಳು ಇವಳಿಗೋಸ್ಕರ ನೀವು ಒಂದು ಕ್ಷಣವನ್ನಾದರೂ ಕಳೆದುಕೊಳ್ಳಬೇಡಿರಿ!' ಎಂದು ಹೇಳುತ್ತಿದ್ದುವು ಅವಳೆಂದಳು "ಉಪಾಯವಿಲ್ಲ—ಅಹುದು ಉಪಾಯವಿಲ್ಲದವಳಾಗಿಯೆ ನಾನು ಜೀವಿಸಬೇಕಾಗಿದೆ ನೀವು ಅವಶ್ಯವಾಗಿ ಹೊರಡಬಹುದು" ಅವಳು ಕಂಬಳಿ ಹಿಡಿದ ಕೈಯನ್ನು ಕೆಳಕ್ಕೆ ಮಾಡಿರಲಿಲ್ಲ ಹಾಗೆಯೇ ಹಿಡಿದುಕೊಂಡಿದ್ದಳು ಅವಳುಟ್ಟ ಸೀರೆಯೂ ಒಣಗಿರಲಿಲ್ಲ, ಇನ್ನೂ ಒದ್ದೆಯಾಗಿಯೆ ಇದ್ದಿತು "ತೆಗೆದುಕೊಳ್ಳಿರಿ ಇದನ್ನು! ಹೊರಡಿರಿ! ಪರಮಾತ್ಮನು ನಿಮ್ಮನ್ನು ಸುಖವಾಗಿಡಲಿ— ಇನ್ನು ನಾನೊ ? ನಾನು ಒಳಿತಾಗಿದ್ದೇನೆ" ಎಂದಳು

"ಏನು? ಏನು ಹೇಳುತ್ತಿದ್ದೀಯೆ?" ಎಂದ ಜಯರಾಜ ಮೆಲುದನಿಯಲ್ಲಿ

"ಈ ಗಾಡಿಯಿಂದ ನೀವು ಹೊರಡಬೇಕಾಗಿದೆ, ತೆಗೆದು-ಕೊಳ್ಳಿರಿ ಇದನ್ನು"

"ಪರವಾ ಇಲ್ಲ ಇನ್ನೊಂದು ಗಾಡಿಯಿಂದ ಹೊರಡುತ್ತೇನೆ"

ಕ್ಷಣಕಾಲ ಸುದರ್ಶನೆಯು ಜಯರಾಜನನ್ನು ನೋಡುತ್ತಿ-ದ್ದಳು ಪುನಃ ಆ ಕಂಬಳಿಯನ್ನು ಬಿಚ್ಚಿ ಹೊದ್ದುಕೊಂಡು, ಅವನ ತೊಡೆಗಳ ಮೇಲೆಯೆ ಮಲಗಿಕೊಂಡಳು.

ರೈಲುಗಾಡಿಯು ಕೂಗಿತು ಮೆಲ್ಲಗೆ ಸರಿಯುತ್ತ ಸರಿಯುತ್ತ ನಡೆಯಿತು ಜಯರಾಜನು ಪರಾಜಿತನಾದವನಂತೆ ರೈಲಿನ ಕಡೆಗೆ ನೋಡತೊಡಗಿದ ಅದು ಅವನ ಎದುರಿನಿಂದ ಹೊರಟುಹೋಯಿತು ಈಗ ಆ ರೈಲುಗಾಡಿಯಿದ್ದ ಸ್ಥಳದಲ್ಲಿ ಮತ್ತೆ ಕತ್ತಲೆಯು ಕವಿದು ಸ್ತಬ್ಧತೆಯು ನೆಲೆಗೊಂಡಿತು

ರೈಲುಗಾಡಿಯು ಹೊರಡುತ್ತಲೆ ಜಯರಾಜನಿಗೆ ಸಹಿಸದಷ್ಟು ಚಳಿಯಾಗತೊಡಗಿತು, ಕೈತಿಕ್ಕಿಕೊಂಡು ಮುಖದ ಮೇಲೆ ಎಳೆದುಕೊಂಡ ತಲೆಯನ್ನು ತುರಿಸಿಕೊಂಡ ಬಳಿಕ ಕಂಬಳಿಯ ಮುಸುಕಿನಲ್ಲಿ ಕೈಹಾಕಿ, ಅವಳ ತಲೆಯನ್ನು ಮೆಲ್ಲಗೆ ತಟ್ಟತೊಡಗಿದ

ಮುಸುಕುಹಾಕಿಕೊಂಡು ಮಲಗಿದ್ದ ಸುದರ್ಶನೆಯು ಮುಸುಕಿನೊಳಗಿಂದಲೆ "ಚಳಿ ವಿಪರೀತ ಬೀಳುತ್ತಿದೆ ಕಂಬಳಿ ಹೊದ್ದುಕೊಳ್ಳಿರಿ!" ಎಂದು ಕಂಬಳಿಯನ್ನು ಸ್ವಲ್ಪ ಮೇಲ್ಮಾಡಿದಳು ಜಯರಾಜನು ಕಂಬಳಿಯನ್ನು ಭುಜಗಳ ವರೆಗೆ ಹೊದ್ದುಕೊಂಡ ಈಗ ಅವನ ಕೈಬೆರಳು ನಿರಾತಂಕವಾಗಿ ಆಕೆಯ ಸೊಂಟದ ವರೆಗೂ ನಡೆದುವು ಹರಡಿದ ಸುದರ್ಶನೆಯ ತಲೆಗೂದಲುಗಳಲ್ಲಿ ಆಡಲಾರಂಭಿಸಿದುವು ಅವ್ಯವಸ್ಥಿತವಾಗಿ ಬಿದ್ದ, ತಣ್ಣಗಾಗಿದ್ದ ಕೂದಲುಗಳನ್ನು ತೀಡುತ್ತ ಅವನ ಬೆರಳುಗಳು ಮಂದಗತಿಯಿಂದ ಸುದರ್ಶನೆಯ ಮಸ್ತಕದಿಂದ ಕಟಿಯ ವರೆಗಿನ ಪ್ರದೇಶದಲ್ಲೆಲ್ಲ ಚಲಿಸುತ್ತಿದ್ದುವು ಬಾಯಿ ಭರದಿಂದ ರಾಮನಾಮವನ್ನು ಜಪಿಸುತ್ತಿದ್ದಿತು.

ಸುದರ್ಶನೆಯ ಶರೀರವು ಅವನ ದೇಹವನ್ನು ಹೆಚ್ಚುಹೆಚ್ಚು ಬಿಗಿಯಾಗಿ ಅಂಟಿಕೊಳ್ಳಲು ತೊಡಗಿತು ಕೂಡಲೆ ಜಯರಾಜನು ತನ್ನ ಬೆರಳುಗಳನ್ನು ಆಕೆಯ ಕೂದಲುಗಳಿಂದ ಹೊರಕ್ಕೆ ತೆಗೆದುಕೊಂಡು, ನೇರವಾಗಿ ಎದುರಿನ ಅಂಧಕಾರವನ್ನು ನೋಡಲು ತೊಡಗಿದ ಪ್ರಪಂಚದಿಂದ ದೂರದಲ್ಲಿ, ವಿಧಿನಿಷೇಧಗಳಿಂದ ಮುಕ್ತನಾಗಿ, ಒಂದೆರಡು ಗಳಿಗೆಯ ಬಳಿಕ ಹೊರಟುಹೋಗಬೇಕೆಂದು ಸ್ಟೇಶನ್ನಿನ ಬೆಂಚಿನ ಮೇಲೆ ಕುಳಿತುಕೊಂಡಿದ್ದಾನೆ ಯಾರ ದೃಷ್ಟಿಯೂ ಅವನ ಕಡೆಗಿಲ್ಲ ಈಗ. ಎಂದ ಮೇಲೆ ಅವನಿಗೆ ಯಾರ

ಸಂಶಯ? ಏತರ ಸಂದೇಹ? ತನ್ನನ್ನು ತಡೆದುಕೊಳ್ಳಬೇಕಾದ ಆವಶ್ಯಕತೆಯಾದರೂ ಏನಿದೆ? ಅವನು ನಿರ್ಭಯನಾಗಿ ಏನೆಲ್ಲವನ್ನೂ ಅನುಭವಿಸಲು ತನ್ನನ್ನು ಬಿಚ್ಚಿಬಿಡಲೊಲ್ಲನೇಕೆ? ದ್ವಂದ್ವವೇತರದು? 'ಒಲ್ಲೆ'ನೆಂದು ಹೇಳುವುದು ಯಾರನ್ನು ಕುರಿತು?

ಆಕೆಯ ದೇಹವು ಈಗ ಬಿಸಿಯಾಗತೊಡಗಿತು ಮತ್ತೆ ಅವನು ರಾಮನಾಮವನ್ನು ಜಪಿಸುತ್ತಿದ್ದನು

ಸುದರ್ಶನೆಯು ಬಯಸುವುದಾದರೂ ಏನು? ಅವಳಿಗೆ ಯಾವುದೂ ಬೇಡವಾಗಿದೆ ಅವಳು ಮಲಗಿದ್ದಾಳೆ, ಏಕೆಂದರೆ ಮಲಗುವ ಹೊತ್ತು ಆಗಿದೆ ಅವಳ ಕಣ್ಣುಗಳಲ್ಲಿ ನಿದ್ರೆಯು ಆಡುತ್ತಿದೆ ಅವಳು ಜಯರಾಜನ ತೊಡೆಯ ಮೇಲೆ ಮಲಗಿದ್ದಾಳೆ, ಏಕೆಂದರೆ ತೊಡೆಯು ಅವಳ ಮತ್ತು ಬೆಂಚಿನ ನಡುವೆ ಬಂದಿವೆ ಒಂದೇ ವಸ್ತ್ರವನ್ನು ಧರಿಸಿ ಮಲಗಿದ್ದಾಳೆ, ಏಕೆಂದರೆ ಅವಳ ಬಟ್ಟೆಗಳು ಒದ್ದೆಯಾದುದರಿಂದ ಅವನ್ನು ಒಣಗಹಾಕಲೆಂದು ಅವಳಿಂದ ಕಿತ್ತುಕೊಳ್ಳಲಾಗಿದೆ ಈ ಅಂಧಕಾರದ ಹೊತ್ತಿನಲ್ಲಿ ಆಕೆಯು ಮಲಗಲು ಬಯಸುತ್ತಾಳೆ, ಏಕೆಂದರೆ ಇದು ಮಲಗುವ ಸಮಯ, ಅವಳ ಕಣ್ಣು-ಗಳಲ್ಲಿ ನಿದ್ರೆಯು ತುಂಬಿನಿಂತಿದೆ

ಇಂದಿನ ರಾತ್ರಿಯಲ್ಲಿ ಎಲ್ಲವನ್ನೂ ತೊರೆದು, ಈ ಭೂಮಿ ಆ ಆಕಾಶ ಇವುಗಳ ನಡುವೆ ಅವಳೊಬ್ಬಳೆ ಒಬ್ಬಳು ಆಗಿದ್ದಾಳೆ ಈ ಅಜ್ಞಾತವಾದ ಬಯಲಿನಲ್ಲಿ ಈ ಮನುಷ್ಯನು ಬಂದು ಅವಳನ್ನು ಕೂಡಿಕೊಂಡಿದ್ದಾನೆ ಈ ಮನುಷ್ಯನು ಜಯರಾಜನೆಂದು ಮಾತ್ರ ಅವಳಿಗೆ ಗೊತ್ತಿದೆ ಇದಕ್ಕಿಂತ ಹೆಚ್ಚಿಗೆ ಗೊತ್ತುಮಾಡಿಕೊಳ್ಳಲು ಅವ-ಳಿಗೆ ಸಮಯ ದೊರೆತಿಲ್ಲ ಜಯರಾಜನು ನಿಷೇಧಿಸುವಂತಹದಾದರೂ ಅವಳಲ್ಲಿ ಏನಿದೆ? ವಿಧಿ-ನಿಷೇಧಗಳಿಂದ ಅವಳು ಮುಕ್ತಳಾಗಿ ಬಂದಿದ್ದಾಳೆ ಈಗ ಅವಳು ತನ್ನವರೆಂದು ತಿಳಿದುಕೊಂಡು ಸಂಬಂಧವನ್ನು ಕಲ್ಪಿಸಿಕೊಳ್ಳಲೂ ಬೇರೆಯವರೆಂದು ಬಿಡಲೂ ಯಾವ ಅಡಚಣೆ-ನಿರ್ಬಂಧವಿದೆ ಅವಳಿಗೆ? ತನಗೆ ಅತ್ಯಾವಶ್ಯಕವಾದುದನ್ನೇನೂ ಅವಳು

ಇಟ್ಟುಕೊಂಡಿಲ್ಲವೆಂದ ಮೇಲೆ ಅವಳಿಗೆ ನಿಷಿದ್ಧವಾದುದಾದರೂ ಏನಿದೆ ?

ಆದುದರಿಂದ ಅವಳು ಚೆನ್ನಾಗಿ ತಗುಲಿಕೊಂಡು ಆಗಾಗ ಮಗ್ಗುಲುಗಳನ್ನು ಹೊರಳಿಸುತ್ತ, ಸರಿಯಾದ ಸ್ಥಳವನ್ನು ಏರ್ಪಡಿಸಿಕೊಂಡು, ಈ ತೊಡೆಗಳ ಮೇಲೆ ಮಲಗಿದ್ದಾಳೆ ಬಾಲಕನು ತಾಯಿಯ ತೊಡೆಯ ಮೇಲೆ ಮಲಗಿ ಹೆಚ್ಚಾಗಿ ಆಕೆಯನ್ನು ತಗುಲಿಕೊಂಡಿರಬಾರದೇ? ಎಂದು ನಾವು ಕೇಳಬಹುದು ಬಾಲಕನು ತಾಯಿಯ ತೊಡೆಯ ಮೇಲೆ ವಿಶ್ರಾಂತಿಯನ್ನು ಹೊಂದುತ್ತಿದ್ದರೆ ಯಾರು ಹೆಸರಿಡುವರು? ಅಲ್ಲಿ ಲಜ್ಜೆಯೆಲ್ಲಿ? ನೀತಿನಿಯಮಗಳ ಉಲ್ಲಂಘನವೆಲ್ಲಿ ? ಆನಂದದ ರಸಾನುಭವದಲ್ಲಿ ಕಸವೆಲ್ಲಿ ?

ಸುದರ್ಶನೆಯು ಜಯರಾಜನ ತೊಡೆಗಳಲ್ಲಿ ಪವಡಿಸಿದ್ದಾಳೆ, ಸಮಾಜವು ಇಲ್ಲಿ ಕಾರಭಾರ ಮಾಡಲಿಕ್ಕೂ ಬಂದಿರುವುದಿಲ್ಲ ಈಗ ನಿದ್ರಿಸುವ ಹೊತ್ತು ಅವಳಿಗೆ ಬಾಧೆಯೇತರದು? ಅವಳಿಗೆ ವಿಶ್ವಾಸವಾರದು? ಅವಳು ಅತ್ಯಂತ ಜತನದಿಂದ ಹೊರಳಾಡಿ, ಮಗ್ಗುಲಾಗಿ, ಆತನ ತೊಡೆಗಳ ಮೇಲೆ ಸುಖವಾಗಿ ನಿದ್ರಿಸಲು ಯೋಗ್ಯವಾದ ವ್ಯವಸ್ಥೆಯನ್ನು ಮಾಡಿಕೊಂಡಿದ್ದಾಳೆ ಮೆತ್ತನ್ನ ಗಾದಿಯೂ ಅಲ್ಲಿ ದೊರೆತಿದೆ, ತಲೆದಿಂಬೂ ಸಿಕ್ಕಿದೆ, ಕಂಬಳಿಯ ಉಷ್ಣತೆಯೂ ದೊರೆಯುತ್ತಲಿದೆ, ಜಗತ್ತಿನ ಬಂಧನವಿಲ್ಲದೆ ಅತೀತದ ಪರೋಕ್ಷದಲ್ಲಿ ಎಲ್ಲವನ್ನೂ ತೊರೆದ ಹಕ್ಕಿಯಾಗಿ ಅವಳಿಲ್ಲಿ ನಿದ್ರಿಸುತ್ತಿದ್ದಾಳೆ ನಿನ್ನೆ ಏನಿದ್ದಿತೊ ರಾಮನೆ ಬಲ್ಲ ನಾಳೆ ಏನಾಗುವುದೆಂಬುದರ ಎಣಿಕೆಯಿಲ್ಲ, ಮುಂದಿನ ಕ್ಷಣದಲ್ಲಿ ಏನಾದೀತೆನ್ನುವುದರ ನಿರೀಕ್ಷಣೆಯಿಲ್ಲ ಎಲ್ಲಿಯೂ ಅವಳು ಕೈಫಿಯತ್ತು ಕೊಡಬೇಕಾದುದಿಲ್ಲ. ಅವಳು ಭೂತಕಾಲದಿಂದ ಬಂಧಿತಳಿಲ್ಲ, ಅವಳಿಗೆ ವರ್ತಮಾನದ ಭಯವಿಲ್ಲ, ಭವಿಷ್ಯದ ಬೇಡಿಕೆಯಿಲ್ಲ

ಈಗ ಏನಿದೆಯೊ ಇದೆ ಅವಳು ಅದರಲ್ಲಿಯೆ ಸಂಪೂರ್ಣಳಾಗಿದ್ದಾಳೆ, ಅದರಲ್ಲಿಯೆ ಉಪಲಬ್ಧಳಾಗಿದ್ದಾಳೆ ಸುಖವಾಗಿ ಮಲಗಿದ್ದಾಳೆ ಇದು ನಿದ್ರಿಸಿರುವ ಸಮಯ.

ಸುದರ್ಶನೆಯು ಕೇಳಿದಳು "ನಿಮಗೆ ನಿದ್ರೆ ಬರುತ್ತಿಲ್ಲವೆ?"

ಜಯರಾಜನು ಕಣ್ದೆರೆದು ಕತ್ತಲಲ್ಲಿ ನೋಡಲು ಯತ್ನಿಸಿದ; ಸಾಧ್ಯವಾಗಲಿಲ್ಲ ಈ ಪ್ರಶ್ನೆಯು ತನ್ನೊಳಗಿಂದಲೆ ಏಳುತ್ತಿರುವುದೇನೊ ಎಂದೆನಿಸಿತು ದೂರದಲ್ಲಿದ್ದರೂ ಸಮೀಪದಲ್ಲಿದ್ದುಕೊಂಡು ಪ್ರಶ್ನಿಸುತ್ತಿರುವಂತೆ ಕೇಳಿಸಿತು—"ನಿಮಗೆ ನಿದ್ರೆ ಬರುತ್ತಿಲ್ಲವೆ?" ಆಗ ಅವನು ತನ್ನೊಡನೆಯೆ ಒಗಳವಾಡಿದವನಂತೆ ಎಂದ "ಇಲ್ಲ, ಎಳ್ಳಷ್ಟೂ ಇಲ್ಲ"

ಯಾರೋ ಕೂಗಿದಂತಾಯಿತು—ರಾತ್ರಿ ಬಹಳವಾಗಿದೆ

ಜಯರಾಜನು ಮೈಮೇಲೆ ಏರಿಬರುತ್ತಿರುವುದನ್ನು ಆಹ್ವಾನಿಸುತ್ತಿರುವವನಂತೆ ಉತ್ತರವನ್ನಿತ್ತನು

"ಅಹುದು, ರಾತ್ರಿ ಬಹಳವಾಗಿದೆ"

ಈ ನುಡಿಗಳಲ್ಲಿನ ಅಪ್ರೀತಿಯೂ ಬಿರುಸೂ ಪ್ರೀತಿ-ವಿಶ್ವಾಸದಿಂದ ಕೇಳಿದ ಸುದರ್ಶನೆಯ ಅಂತರಾಳವನ್ನು ಚುಚ್ಚಿದುವು ಅವಳು ಎದ್ದು ಕುಳಿತಳು

"ಏಕೆ? ಏಕೆ?"

"ನಾನು ಕುಳಿತುಕೊಳ್ಳುತ್ತೇನೆ, ನೀವಿಷ್ಟು ಮಲಗಿಕೊಳ್ಳಿರಿ"

ಜಯರಾಜನು ಸುದರ್ಶನೆಯನ್ನು ನೋಡಿದ ಆ ಕಣ್ಣುಗಳಲ್ಲಿ ಅಭಿಯೋಗವೂ ಇರಲಿಲ್ಲ, ನಿರಾಶೆಯೂ ಇರಲಿಲ್ಲ, ಅವುಗಳಲ್ಲಿ ಬೇಡಿಕೆಯೂ ಇರಲಿಲ್ಲ, ಸ್ನಿಗ್ಧಸ್ನೇಹವಿದ್ದಿತು ಆದರೂ ಜಯರಾಜನು ತನ್ನಷ್ಟಕ್ಕೆ ತಾನೆ ಏನೇನೋ ವಿಪರೀತ ತಿಳಿದುಕೊಂಡು ಗಾಬರಿಯಾದ "ನಾನು ಕುಳಿತುಕೊಳ್ಳುತ್ತೇನೆ, ನೀವು ಮಲಗಿಕೊಳ್ಳಿರಿ" ನಾರಿಯ ಈ ನುಡಿಗಳಿಂದ ಜಯರಾಜನು ಕಳೆಗುಂದಿದವನಾಗಿ ನುಡಿದ "ಇಲ್ಲ, ನನಗೆ ನಿದ್ರೆ ಬಂದಿಲ್ಲ"

ಕೆಲವು ನಿಮಿಷಗಳು ಸಂದುವು ಸುದರ್ಶನೆಯು ಮೆಲ್ಲಗೆ ಕೇಳಿದಳು "ಎಷ್ಟು ಗಂಟೆಯಾಗಿರಬಹುದು?"

"ಸುಮಾರು ಹನ್ನೆರಡೂವರೆ!"

"ವಿಪರೀತ ಚಳಿ."

ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು ಬಳಿಕ ಸುದರ್ಶನೆಯೆ ಮೆಲ್ಲನೆ ನುಡಿದಳು "ನೀವು ಮಲಗಿಕೊಳ್ಳಬಾರದೆ? ನಾನು ಹೇಳುತ್ತಿದ್ದೇನೆ."

ನಿರ್ಮಮತೆಯಿಂದ ಪ್ರಕಟವಾದ ಸುದರ್ಶನೆಯ ಈ ಸಚ್ಚಿಂತನೆಯ ನುಡಿಗಳು, ಕಾರಣವಿಲ್ಲದೆ ಕಠೋರವಾಗಿದ್ದ ಜಯರಾಜನ ಚಿತ್ತವನ್ನು ಮೀಂಟಿದುವು ಜಯರಾಜನ ಅಂತರಂಗವು ಕದಲಿತು. ಅವನು ತೀರ ಮಾರ್ಪಾಡುಗೊಂಡ ದನಿಯಲ್ಲಿ ಎಂದ. "ಬೇಡ, ಬೇಡ "

'ನಾನು ಬೆಂಚಿನ ಮೇಲೆ ಮಲಗಿಕೊಳ್ಳುತ್ತೇನೆ, ನನ್ನ ಚಿಂತೆಯನ್ನು ನೀವು ಮಾಡಬೇಡಿರಿ' ಎಂದು ಸುದರ್ಶನೆಯು ಹೇಳಬೇಕೆನ್ನುತ್ತಿದ್ದಳು, ಆದರೆ ಜಯರಾಜನ ಮುಖದಿಂದ, ಸ್ನೇಹದಿಂದ ಬೆರೆತ ದನಿಯಲ್ಲಿ "ಬೇಡ, ಬೇಡ" ಎಂದು ಹೊರಬಿದ್ದ ಶಬ್ದಗಳನ್ನು ಕೇಳಿ, ಅವಳ ಹೃದಯವು ಕರಗಿ ಕಂಠವು ಗದ್ಗದಿತವಾಯಿತು ಹೇಳಬೇಕೆಂದ ಮಾತುಗಳು ಅವಳ ಬಾಯಿಂದ ಹೊರಡದಾದುವು

ಆಗ ಇಬ್ಬರ ಹೃದಯಗಳಲ್ಲಿಯೂ ತಮ್ಮಿಬ್ಬರೊಳಗೆ ಪ್ರಶ್ನೋತ್ತರಗಳ ಆವಶ್ಯಕತೆಯಿಲ್ಲವೆಂಬ ಅನುಭೂತಿಯು ಮೂಡಿತು ಪರಸ್ಪರರ ಪರಿಚಯ ಮಾಡಿಕೊಳ್ಳಬೇಕೆಂಬ ಅಭಿಲಾಷೆಯೂ ಇಬ್ಬರಲ್ಲಿಯೂ ಉಳಿಯಲಿಲ್ಲ ಇಬ್ಬರೂ ಚಿರಕಾಲದಿಂದ ಪರಿಚಿತರೊ, ಅಭಿನ್ನ ಹೃದಯಿಗಳೊ ಎಂಬಂತಿದ್ದರು ಇಬ್ಬರ ವಾಣಿಯೂ ಮೌನವಾಗಿದ್ದಿತು, ಶಬ್ದಗಳು ಒಂದು ತೊಡಕು ಎಂಬಂತೆ ಕಂಡಿತೇನೋ ಅವರಿಗೆ! ಶಬ್ದಗಳು ಬಾಹ್ಯಪ್ರಪಂಚಕ್ಕಾಗಿ ಮಾತ್ರ ತನ್ನನ್ನು ಎದುರಿಸಿಕೊಳ್ಳುವುದು ಕಠಿನವೆನಿಸಿದಾಗ, ಪ್ರಯತ್ನಪೂರ್ವಕವಾಗಿ ತನ್ನನ್ನು ಕುರಿತು ವಿರೋಧವನ್ನು ಸಾಧಿಸಿಕೊಳ್ಳುವಾಗ, ವ್ಯಕ್ತಿಗಳ ಮಧ್ಯದಲ್ಲಿ ಅಂತರವನ್ನುಂಟುಮಾಡಲು ಭಾಷೆಯು ಬೇಕಾಗುವುದು, ಆಗ ಶಬ್ದಗಳು ಅವಶ್ಯವೆನಿಸುವವು ಆದರೆ ಇವರಿಬ್ಬರ ನಡುವೆ ಸಾಗರದಲ್ಲಿ ಹನಿಗಳು ಬೆರತುಹೋಗುವಂತೆ ಶಬ್ದಗಳು ಮೌನದಲ್ಲಿ ಕೂಡಿಹೋದುವು, ಕಳೆದುಹೋದುವು

ಸುದರ್ಶನೆಯ ಹೃದಯವು ಕೃತಜ್ಞತೆಯಿಂದ ತುಂಬಿತುಳುಕಿತು ಒಂದು ಕ್ಷಣಕಾಲ ಸಹ ಕುಳಿತುಕೊಳ್ಳಲಾಗಲಿಲ್ಲ ಜಯರಾಜನ ತೊಡೆಗಳ ಮೇಲೆ ಮೊದಲಿನಂತೆ ಬಿದ್ದುಕೊಂಡು ನಿದ್ರೆಹೋದಳು

ಜಯರಾಜನ ಪೌರುಷದಲ್ಲಿ ಆಗ್ರಹಪೂರ್ವಕವಾಗಿ ಸ್ನಿಗ್ಧತೆಯು ಬಂದಿತು 'ರಾಮನಾಮದ ಮಂತ್ರೋಚ್ಚಾರಣೆಯಿಂದ ಹೊಡೆ-ದೋಡಿಸಲು ಬರುವಂತಹ ಭೂತವಾವುದೂ ಸುದರ್ಶನೆಯಲ್ಲಿ ಇಲ್ಲ, ಮುಟ್ಟಲಿಕ್ಕ ಅಯೋಗ್ಯವಾದುದು ಯಾವುದೂ ಅವಳಲ್ಲಿ ಇಲ್ಲ' ಎಂದು ಅವನಿಗೆನಿಸಿತು ಅವನ ಬಿಗಿದ ಹೃತ್‌ತಂತ್ರಿಗಳು ಸಡಿಲಾದುವು ಸ್ನೇಹದಿಂದ ಆತನು ಸುದರ್ಶನೆಯ ತಲೆಯನ್ನು ತಟ್ಟುತ್ತ ಕೇಳಿದ "ಸುದರ್ಶನಾ, ನಾನು ನಿನ್ನ ಸ್ಮರಣೆಮಾಡುತ್ತಿರಬಹುದೆಂದು ಯೋಚಿಸುತ್ತಿದ್ದಿಯೇನು ?"

"ನನಗೆ ನಿದ್ರೆಬರುತ್ತಿದೆ" ಎಂದಳು ಸುದರ್ಶನಾ

ಇದನ್ನು ಕೇಳಿ ಉದ್ವಿಗ್ನವಾದ ಮಾನಸ್ಸಿನ ಮತ್ತು ಶರೀರದ ಆತನ ಸ್ನಾಯುಗಳು ಶಿಥಿಲವಾದುವು ಅವನ ಮನಸ್ಸು ಸ್ವಸ್ಥವಾಗ-ತೊಡಗಿತು ಆತುರತೆಯು ಕಡಮೆಯಾಯಿತು ಅವನು ತನ್ನ ತೊಡೆಯ ಮೇಲೆ ಅವಳನ್ನು ಮಲಗಿಸಿಕೊಂಡು ಅವಳ ಕೂದಲುಗಳಲ್ಲ ಬೆರಳುಗಳನ್ನು ಆಡಿಸತೊಡಗಿದ

ಸ್ವಲ್ಪ ಸಮಯದ ಬಳಿಕ ಸುದರ್ಶನೆಯು ಕೇಳಿದಳು "ಮಲಗುವುದಿಲ್ಲವೆ ?"

ಆಕೆಯ ತಲೆಯನ್ನು ತಟ್ಟುತ್ತ "ಇಲ್ಲ, ನನಗೆ ನಿದ್ರೆಬಂದಿಲ್ಲ" ಎಂದ

ಕೆಲವು ನಿಮಿಷಗಳು ಕಳೆದ ನಂತರ ಪುನಃ ಜಯರಾಜ ಕೇಳಿದ "ಸುದರ್ಶನಾ, ನಿದ್ರೆ ಹತ್ತಿತೇನು ನಿನಗೆ ?"

ಅರೆನಿದ್ರೆಯಲ್ಲಿಯ ದನಿಯಲ್ಲಿ "ನನಗೆ ನಿದ್ರೆಬರುತ್ತಿದೆ" ಎಂದಳು ಸುದರ್ಶನೆ

ಸುದರ್ಶನೆಯ ತಲೆಯನ್ನೂ ಕಪೋಲಗಳನ್ನೂ ತನ್ನ ಕೈಗಳಿಂದ ಮೆಲ್ಲಮೆಲ್ಲನೆ ತಟ್ಟುತ್ತ, ಜಯರಾಜನೆಂದ "ಒಳ್ಳೇದು, ಮಲಗಿಕೊ,

ಕಂಬಳಿಯನ್ನು ಚೆನ್ನಾಗಿ ಹೊದ್ದುಕೊ ಸುದರ್ಶನಾ ಇಡಿ ರಾತ್ರಿಯನ್ನು ನಾವು ಎಚ್ಚೆತ್ತುಕೊಂಡೇ ಕಳೆಯೋಣ, ರಾತ್ರಿಯು ದಿನಕರನನ್ನು ಆಲಿಂಗಿಸುವ ವರೆಗೆ ಮಾತನಾಡೋಣ ಬಾ, ಎಂದು ನಿನಗೆ ಹೇಳಬೇಕೆಂದು ಯೋಚಿಸುತ್ತಿದ್ದೆ ಬೇಡ, ನೀನು ಮಲಗಿಕೋ ನಾನು ಸ್ವಾರ್ಥಿಯಾಗಲಾರೆ ! ”

ಸುದರ್ಶನೆ ಸಲುಗೆಯ ದನಿಯಲ್ಲಿ ಕುಸುಕುಸುಮಾಡಿ “ ನನಗ ನಿದ್ರಬರುತ್ತಿದ ” ಎಂದಳು

“ ಸರಿ ! ಆಗಲಿ ! ನೀನು ಮಲಗಿಕೊ ”

ಜಯರಾಜ ಮತ್ತೆ ಹೇಳತೊಡಗಿದ “ ನೀನು ನನ್ನಲ್ಲಿ ಇರುವೆಯೆಂದೂ ನನ್ನ ಅಂತರಂಗದಲ್ಲಿದ್ದ ನಿನ್ನನ್ನು ಈ ರೀತಿಯಲ್ಲ ಪಡೆಯುವೆನೆಂದೂ ನಾನು ತಿಳಿದಿರಲಿಲ್ಲ ಸುದರ್ಶನಾ ನಿನ್ನ ಪ್ರಯತ್ನದಿಂದಲೇ ನಾನು ನಿನ್ನನ್ನು ಹೊಂದುವೆನೆಂದು ನಾನು ಒಗೆದಿರಲಿಲ್ಲ ಒಬ್ಬನೇ ನಡೆದಿದ್ದೆ, ಆಶೆಯು ಸೋತು ಸೋತು ಹೋಗುತ್ತಿದ್ದಿತು, ಜೀವನವು ಉಸುಬಿನ ಬೈಲಿನಂತೆ ರುಕ್ಷವೆನಿಸುತ್ತಿದ್ದಿತು 'ಆದರೆ ನಾನು ಪುನಃ ಪುನಃ ರಾಷ್ಟ್ರದ ನಾಮವನ್ನೇ ಆಶ್ರಯಿಸಿಕೊಂಡು ಮುಂದಡಿಯಿಡುತ್ತಲಿದ್ದೆ ಇದೇ ತೆರನಾಗಿ ನಾನು ಹೊರಟುನಡೆದಿದ್ದೇನೆ ಬೀಳ್‌ದಾರಿಯಲ್ಲಿ ನಾನು ಹಿಂದೆ ನೋಡಲಿಲ್ಲ, ಮುಂದೆ ರಾಷ್ಟ್ರವನ್ನು ಇಟ್ಟುಕೊಂಡು ಅದರಲ್ಲಿಯೆ ನನ್ನ ದೃಷ್ಟಿಯನ್ನು ಕೀಲಿಸಿ ಓಡುತ್ತಲಿದ್ದೆ ಮನಸ್ಸು ಸೋಲುತ್ತಿದ್ದಿತು, ನಾನು ಕಣ್ಣು ಮುಚ್ಚಿಕೊಳ್ಳುತ್ತಿದ್ದೆ, “ ರಾಷ್ಟ್ರದೇವೋಭವ” ಎನ್ನುತ್ತಿದ್ದೆ ಧೈರ್ಯದಾನ ಮಾಡುವವರೂ ಉತ್ಸಾಹನೀಡುವವರೂ ಯಾರೂ ಇರಲಿಲ್ಲ ನನ್ನ ಸುಖದುಃಖಗಳನ್ನು ಹಂಚಿಕೊಳ್ಳಬೇಕೆಂದರೆ ಯಾರೂ ಇರಲಿಲ್ಲ ‘ ಮುನ್ನಡೆ, ನಾನೂ ನಿನ್ನ ಜೊತೆಯಲ್ಲಿ ಇದ್ದೇನೆ ’ ಎಂದು ಹೇಳುವವರೂ ಯಾರೂ ಇರಲಿಲ್ಲ ಇದ್ದವರೆಲ್ಲರೂ ‘ ಬನ್ನಿರಿ, ವ್ಯಾಖ್ಯಾನಕೊಟ್ಟು ಹೋಗಿರಿ ’ ಎನ್ನುವವರೇ ಇದ್ದರು ‘ಬನ್ನಿರಿ, ನೀರು ಕುಡಿಯಿರಿ’ ಎನ್ನುವವರು ಯಾರೂ ಇರಲಿಲ್ಲ ನಾನು ಹೊರಟುಹೋಗುವುದನ್ನೆ ಎಲ್ಲರೂ ಬೇಡುತ್ತಿದ್ದರು. ಹೋಗಲು

ಶಕ್ತಿಯನ್ನೂ ಉತ್ಸಾಹವನ್ನೂ ದಯಪಾಲಿಸುವವರು ಯಾರೂ ಇರಲಿಲ್ಲ ವೆಂದೆನ್ನುವುದು ಸುಳ್ಳು ಆಗಿದ್ದಿತು 'ಹಿಂದುಹಿಂದಿನಿಂದ ಒಡುವುದು ಹೇಗೆ ತಾನೆ ಸಾಧ್ಯ?' ಎಂದು ನಾನು ಹೇಳುತ್ತಿದ್ದೆ, ನನ್ನನ್ನೇ ಮರೆತು ಈ ಮಾತನ್ನು ಹೇಳುತ್ತಿದ್ದೆ "

ಸುದರ್ಶನೆಯು ಮಗ್ಗಿಲಾಗುತ್ತ "ನನಗ ನಿದ್ರೆಬರುತ್ತಲಿದೆ" ಎಂದಳು

"ಆಹುದು! ನಿದ್ರಿಸು, ನಿದ್ರಿಸು, ಸುದರ್ಶನಾ! ಕ್ಷಮಿಸು!" ಎಂದು ಅವನು ತಟ್ಟನೆ ಸುಮ್ಮನಾದ

ನಡುರಾತ್ರಿ! ಮೋಡಗಳು ಬಯಲಾಗಿವೆ ನಕ್ಷತ್ರಗಳು ಕಣ್ಣುಗಳನ್ನು ಮುಚ್ಚಿಮುಚ್ಚಿ, ತೆರೆತೆರೆದು ಜಗತ್ತನ್ನು ನೋಡುತ್ತಿವೆ

"ಸುದರ್ಶನಾ, ನಿದ್ರೆಹತ್ತಿತೇನು?"

"ಊಂ, ಊಂ, ಊಂ!"

"ಸುದರ್ಶನಾ, ನಾನು ರಾಷ್ಟ್ರೈಕ್ಯಕ್ಕೆಂತಲೆ ಜೀವಿಸಿದೆ, ಆದರೆ ದಿನದಿನಕ್ಕೆ ನನ್ನಲ್ಲಿದ್ದ ಜೀವನರಸವು ಕಡಮೆಯಾಗುತ್ತಲೆ ಸಾಗಿದೆ. ದಿನದಿನವೂ ವೆಚ್ಚವಾಗಿ ಹೋಗುತ್ತಿದ್ದುದರ ಸ್ಥಳದಲ್ಲ ಹೊಸಹೊಸ ಪ್ರಾಣವು ನನಗಲ್ಲಿಂದ ದೊರೆಯುತ್ತಿದ್ದಿತನ್ನುವುದು ನನಗೆ ಗೊತ್ತಿರಲಿಲ್ಲ, ಈಗ ನನಗೆ ತಿಳಿಯಿತು ಸುದರ್ಶನಾ, ನೀನು ಯುಗಯುಗಕ್ಕೂ ಜೀವಿಸಿರು! ನೀನು ಇದ್ದಲ್ಲಿಯ ಸುಖವಾಗಿರು! ಯಾವ ಝರಿಯಿಂದ ನಮಗೆ ಜೀವನರಸವು ದೊರೆಯುತ್ತಿರುವುದೆಂಬುದು ನಮಗೆ ಗೊತ್ತಿ-ದೆಯೆ! ಆದರೆ ಆ ಝರಿಯಲ್ಲ ಸ್ನೇಹವಿದ, ಯಜ್ಞವಿದ. ನಾನೆಂದಿಗೂ ಒಂಟಿಯಾಗಿರಲಿಲ್ಲವೆಂದು ಈಗ ನನಗೆನಿಸುತ್ತಿದೆ ಅಮೃತವು ನನ್ನನ್ನು ರಕ್ಷಿಸುತ್ತಿದ್ದಿತು ನಾನು ಮುಂದುವರಿಯುತ್ತಿದ್ದೆ ಸುದರ್ಶನಾ ನೀನು ನಿದ್ರಿಸುತ್ತಿರುವೆಯೇನು?"

ಗಾಢವಾದ ನಿದ್ರೆಯಲ್ಲಿದ್ದವಳಂತೆ "ಊಂ—ಊಂ—ಊಂ" ಎಂದಳು

'ನಿದ್ರಿಸು, ನಿದ್ರಿಸು ಸುದರ್ಶನಾ!" ಜಯರಾಜನು ಆಕೆಯ ಗಲ್ಲಗಳ ಮೇಲೆ ಮೆಲ್ಲಗೆ ಕೈಯಾಡಿಸುತ್ತ ಎಂದ "ಎಲ್ಲಿರುವೆಯೊ

ಅಲ್ಲಿ ಸುಖವಾಗಿ ನಿದ್ರಿಸು ಒಂದಿಲ್ಲೊಂದು ದಿನ ನಿನಗೆ ಮೃತ್ತಿಕೆಯ ತೊಡೆಯೂ ದೊರೆಯುವುದು ಅಲ್ಲಿಯೂ ನೀನು ಸುಖವಾಗಿ ನಿದ್ರಿಸುವೆಯೆಂದು ನನ್ನ ಭಾವನೆ ನನಗೆ ಅನಂತ ಜನ್ಮಗಳಲ್ಲಿ ವಿಶ್ವಾಸವಿಲ್ಲ, ಅನಂತ ಪ್ರಣಯದಲ್ಲಿಯೂ ನಂಬಿಕೆಯಿಲ್ಲ ಆದರೆ ನನಗೆ ಪ್ರಣಯದ ಒಂದು ಕ್ಷಣವೂ ಅನಂತವೆನಿಸುತ್ತದೆ ಸತ್ಯಜೀವನದ ಒಂದು ಕ್ಷಣವೂ ಶಾಶ್ವತವೆನಿಸುತ್ತದೆ. ನೀನು ಪತಿಯನ್ನು ಬಿಟ್ಟು ಇಲ್ಲಿಗೆ ಬಂದಿದ್ದೀಯೆ? ಆದರೇನು? ಸ್ನೇಹಮಯವಾದ ಜೀವಿಗೆ ಪರಮಾತ್ಮನು ಎಲ್ಲಿ ಇಲ್ಲ? ಆ ಜೀವಿಗೆ ವರ್ಜ್ಯವಾವುದೂ ಇಲ್ಲ, ನಿಯಮ-ನಿರ್ಬಂಧಗಳೂ ಇಲ್ಲ! ಯಜ್ಞಕ್ಕೆ ಆಹುತಿಯಾಗಬೇಕಾದ ಸ್ನೇಹವು ಜಯಶಾಲಿಯಾಗುವುದೆಂದು ಇಂದು ನನಗೆ ಗೊತ್ತಾಯಿತು ಅದು ಬಂಧನವನ್ನು ಹರಿದೊಗೆಯುವಂತಹದು! ಏಕೆಂದರೆ ಮುಕ್ತಿ-ದಾಯಕವಾದುದು ಆ ಸ್ನೇಹವು ಎಂದೂ ಅಸಂಯಮಿಯಾಗಿರದು, ಏಕೆಂದರೆ ಅದು ಸದಾ ಸ್ವತಂತ್ರವಾಗಿರುವುದು ಅಡೆ-ತಡೆಗಳಿಲ್ಲದು-ದಾಗಿರುವುದು ”

ಸುದರ್ಶನೆಯು ಯಾವುದೊ ಒಂದು ವೇದನೆಯಿಂದ ನುಗ್ಗಿಲು ಹೊರಳಿಸಿದಳು.

“ಸುದರ್ಶನಾ, ಮಲಗು, ಮಲಗು! ನಾನು ನನ್ನ ಸ್ನೇಹವನ್ನು ಸ್ವೀಕರಿಸದಿರಲು ಬಯಸಿದೆ ಅದನ್ನು ತ್ಯಜಿಸಿ ನಷ್ಟಮಾಡಲು ಇಚ್ಛಿಸಿದೆ ಅದೆಲ್ಲವೂ ವ್ಯರ್ಥವಾದುದೆಂದು ಇಂದು ನೀನು ನನಗೆ ಕಲಿಸಿದೆ ಆಗ ನನ್ನಲ್ಲಿ ಅಹಂಕಾರವಿದ್ದಿತು ಅಹಂಕಾರಿಯಾದ ನನ್ನಿಂದ ಯಜ್ಞವು ಹೇಗೆ ಕೊನೆಗಂಡೀತು? ನನ್ನಿಂದ ಯಾವ ರಾಷ್ಟ್ರ ಸೇವೆಯಾಗಬಹುದಾಗಿದ್ದಿತು? ಸ್ನೇಹವು ಅಂಗೀಕರಿಸುವುದಕ್ಕಿದೆಯೆ ವಿನಾ ನಿರಾಕರಿಸಲಿಕ್ಕಿಲ್ಲವೆಂಬುದನ್ನು ನಾನು ಅರಿತೆ ಸುದರ್ಶನಾ, ನಿದ್ರಿಸು, ನಿದ್ರಿಸು!”

ಪುನಃ ನಕ್ಷತ್ರಗಳ ಕಡೆಗೆ ನೋಡಿದ. ಇದಕ್ಕೆ ಮೊದಲು ಇದೇ ನಕ್ಷತ್ರಗಳನ್ನು ಅವನು ನೂರಾರು ಸಲ ನೋಡಿದ್ದ ಆದರೆ ಇಂದು ಅವು ಜಯರಾಜನಿಗೆ ತೀರ ಸಮೀಪದುವಾಗಿ—ಆತ್ಮೀಯವಾಗಿ—

ತೋರಿ, ಪ್ರತಿಯೊಂದನ್ನೂ ಸಂಬೋಧಿಸಿ, 'ನೀವು ನಗುತ್ತಾ ಇದ್ದೀರಿ, ಒಳಿತಾಗಿದ್ದೀರಾ?' ಎಂದು ಕ್ಷೇಮ ಸಮಾಚಾರವನ್ನು—ಕೇಳಬೇಕೆನ್ನಿಸುತ್ತಿದ್ದಿತು ಆತನಿಗೆ

"ಸುದರ್ಶನಾ, ಮಲಗಿದ್ದೀಯಾ!"

ಅವಳು ಮಿಸುಕಾಡುತ್ತ, ಕಂಬಳಿಯ ಎರಡು ಅಂಚುಗಳನ್ನೂ ಬಿಗಿಯಾಗಿ ತಲೆಯ ಬುಡದಲ್ಲಿಯೂ ಕಾಲ ಬುಡದಲ್ಲಿಯೂ ಸೇರಿಸಿ ಹೊದ್ದುಕೊಳ್ಳಲು ಏಳಬೇಕೆನ್ನುತ್ತಿದ್ದಳು

"ಏನು ಏನು?"

"ಯಾವ ಕಡೆಯಿಂದಲೊ ಚಳಿಗಾಳಿ ತಗಲುತ್ತಿದೆ!"

ತೋರಿಸಿದ ಕಡೆಯಲ್ಲ ಕೈಯಿಟ್ಟು ನೋಡಿದ ಜಯರಾಜ ಕಾಲುಗಳ ಹತ್ತಿರ ಸೀರೆಯು ಬಹಳ ಒದ್ದೆಯಾಗಿದ್ದಿತು ಅಲ್ಲಿ ಬೆಂಚಿನ ತೂತಿನೊಳಗಿಂದ ಗಾಳಿ ಬಂದು, ಅಸಹನೀಯ ಚಳಿಯನ್ನುಂಟುಮಾಡುತ್ತಿದ್ದಿತು "ಓಹೊ! ಸೀರೆ ವಿಪರೀತ ತೊಯ್ದು ಹೋಗಿದೆ!" ಜಯರಾಜ ನುಡಿದ

ಮುಗಿಲಲ್ಲಿ ಮುಸುಕಿಲ್ಲದ ತಾರೆಗಳು ಅರಳಿದ್ದುವು, ವ್ಯೋಮವು ವಿಸ್ತಾರವಾಗಿದ್ದಿತು ಆ ತಾರೆಗಳ ಕಂಗಳಿಗೆ ಕಾಣುವಂತೆಯೆ ಕೆಳಗೆ ಭೂಮಿಯು ಸ್ಥಿರವಾಗಿ ಬತ್ತಲೆಯಾಗಿ ಬಿದ್ದುಕೊಂಡಿದ್ದಿತು ಈ ಮಹಾವ್ಯೋಮದ ಕೆಳಗೆ ಸ್ತ್ರೀಯಾರು? ಪುರುಷನಾರು? ಆವರಣವೇನು?—ಅನಾವರಣವೇನು?

ಅದಾವುದೂ ಅದೇನೂ ಇಲ್ಲ, ಕೇವಲ ಸುದರ್ಶನೆಯೇ ಸುದರ್ಶನೆ, ಜಯರಾಜನೇ ಜಯರಾಜ . ಮಾತ್ರ ಇದ್ದಾರೆ ಇಷ್ಟು ಜ್ಞಾನದ ಹೊರತು ಇನ್ನಾವ ತುಚ್ಛತೆಗೂ ಅಲ್ಲಿ ಅವಕಾಶವಿರಲಿಲ್ಲ.

ಜಯರಾಜನೆಂದ "ಸುದರ್ಶನಾ, ಸೀರೆಯನ್ನು ಕಳೆದು ಬಿಡು ಒಣಗಿದ ಭಾಗವನ್ನು ಮೇಲೆ ಮಾಡಿ ಮಡಿಸಿ, ಆ ಬೆಂಚಿನ ತೂತಿನ ಮೇಲೆ ಇಡುತ್ತೇನೆ, ಆಮೇಲೆ ನೀನು ಮಲಗಿಕೊ." ಅವಳು ಸೀರೆಯನ್ನು ಕಳೆಯಬೇಕು, ತಾನು ಅದನ್ನು ಮಡಿಸಿ ಆ ತೂತಿನಮೇಲೆ

ಬೇಕು, ಎಂಬ ಆಕ್ಷೇಪೆಯಿಂದ ಜಯರಾಜನು ದಾರಿನೋಡತೊಡಗಿದ. ಸುದರ್ಶನೆಯು ಎದ್ದು ಕುಳಿತು ಆತನ ಕಡೆಗೆ ನೋಡಿದಳು

ತನ್ನ ನುಡಿಗಳು ಔಚಿತ್ಯದ ಎಲ್ಲೆಯನ್ನು ಮೀರಿಹೋದುವೆಂದು ಜಯರಾಜನಿಗೆ ಎನಿಸುವಷ್ಟರಲ್ಲಿಯೆ ಆಕೆ ಸೀರೆಯನ್ನು ಬಿಚ್ಚಿ ಅವನಿಗೆ ಕೊಡುತ್ತ ನುಡಿದಳು " ನನಗೆ ನಿದ್ರೆ ಬರುತ್ತಿದೆ, ಅಮ್ಮಮ್ಮಾ! "

ಜಯರಾಜನು ಕೂಡಲೆ ಎದ್ದು ಸೀರೆಯ ಒಣಗಿದ ಭಾಗವನ್ನು ಮೇಲೆ ಮಾಡಿ, ಬೆಂಚಿನ ತೂತಿನ ಮೇಲಿಟ್ಟು " ಇನ್ನು ಮಲಗಿಕೊ ಸುಖವಾಗಿ " ಎಂದು ಅವನು ಹೋಗತೊಡಗಿದ ಸುದರ್ಶನೆಯು ಚಳಿಯು ತಗಲದಂತೆ ಚೆನ್ನಾಗಿ ಹೊದ್ದುಕೊಳ್ಳುತ್ತ ಕೇಳಿದಳು " ಎಲ್ಲಿಗೆ ಹೋಗುತ್ತಿದ್ದೀರಿ ? "

" ಈಗ ಬಂದೆ ಹೊತ್ತು ನೋಡೋಣ ಎಷ್ಟಾಗಿದೆ ? "

" ಬೇಡ "

" ಈಗ ಬಂದೆ, ಈಗ ಬಂದೆ "

" ಬೇಡ, ಬೇಡ "

ಜಯರಾಜನು ಬಂದು ಸುದರ್ಶನೆಯ ಬಳಿಯಲ್ಲಿಯೆ ಬೆಂಚಿನ ಮೇಲೆ ಕುಳಿತುಕೊಂಡ ಆಗ ಸುದರ್ಶನೆಯು ಮತ್ತೆ ಆತನ ತೊಡೆಗಳ ಮೇಲೆ ಸಹಜವಾಗಿಯೆ ಉರುಳಿದಳು ಜಯರಾಜನು ಆಗ ಅತ್ಯಂತ ಹಗುರಾದ, ಯಾವ ತೆರದ ಕಲ್ಪನೆಯಿಲ್ಲದ ಮನಸ್ಸಿನಿಂದ ಸ್ವಲ್ಪ ನಕ್ಕು ಕೇಳಿದ " ಏನು, ನಾನು ಕುಳಿತು ಕುಳಿತು ದಣಿಯುವೆನೆಂಬ ಅರಿವೂ ನಿನಗೆ ಇರಬಾರದೇ ? "

ಸುದರ್ಶನೆಯು ಮಡಿಲು ಹೊರಳಿಸುತ್ತ "ಊಂ-ಊಂ-ಊಂ-" ಎಂದಳು.

ಕುಸುಕುಸು ಮಾಡುತ್ತ ಜಯರಾಜನ ತೊಡೆಗಳ ಮೇಲೆ ಬಿದ್ದುಕೊಂಡ ಈ ಹಕ್ಕಿಗೆ "ಇದು ಸ್ಟೇಶನ್ನು, ಇದು ಪ್ಲ್ಯಾಟ್‌ಫಾರ್ಮು, ಇದು ಪ್ಲ್ಯಾಟ್‌ಫಾರ್ಮಿನ ಬೆಂಚು, ತಾನು ನಾಲ್ಕು ವರ್ಷದ ಚಿಕ್ಕ ಕೂಸಲ್ಲ, ಇನ್ನೂ ಚುಂಚೂ ರೆಕ್ಕೆಯೂ ಬರದ ಹಕ್ಕಿಯಲ್ಲ" ಎಂಬುದು ಗೊತ್ತಿಲ್ಲವೇ? ಈ ಸ್ಟೇಶನ್ನು, ಈ ಪ್ಲ್ಯಾಟ್‌ಫಾರ್ಮು, ಈ ಬೆಂಚು, ಈ

ಜಯರಾಜನು ಇವರೆಲ್ಲರೂ ವಿಧಿ-ನಿಷೇಧಗಳ ಅಸದ್ಭಾವವಿಲ್ಲದ,ಅನುಚಿತತೆ—ನಾಚಿಕೆಗಳಿದ್ದ ಸಂಸಾರದಲ್ಲಿಯೆ ಇರುವರೆಂಬುದು ಗೊತ್ತಿಲ್ಲವೆ? —ಎಂದು ನಮ್ಮನ್ನು ಕೇಳಿದರೆ ಇದಾವುದೂ ನಮಗೆ ಗೊತ್ತಿಲ್ಲವೆಂದು ಹೇಳುತ್ತೇವೆ, ಆದರೆ ಇಷ್ಟು ಮಾತ್ರ ಗೊತ್ತಾಗಿದೆ ' ಸೀರೆಯನ್ನು ಹಾಸಿರುವುದರಿಂದ ಸುದರ್ಶನೆಗೆ ಚಳಿಯು ತಗಲುತ್ತಿಲ್ಲ; ಅವಳು ಕುಸುಕುಸು ಮಾಡುತ್ತ ಅತ್ಯಂತ ಸುಖದಿಂದ ಜಯರಾಜನ ತೊಡೆಗಳ ಮೇಲೆ ಪವಡಿಸಿದ್ದಾಳೆ '

ಓ, ಹೊದ್ದಿಕೆಯ ಮಾನವ! ಅನ್ಯರ ಕಣ್ಣಿಗೆ ಬೀಳಬಾರದೆಂದು ಮುಚ್ಚಿಕೊಳ್ಳುವ, ಸೂರ್ಯನ ಬಿಸಿಲು ತಗಲಬಾರದೆಂದು ಮುಚ್ಚಿಕೊಳ್ಳುವ, ಹವೆಯು ಸ್ಪರ್ಶಿಸಬಾರದೆಂದು ಮುಚ್ಚಿಕೊಳ್ಳುವ, ಸತ್ಯದ ಜ್ಯೋತಿಯು ತನ್ನ ಮೇಲೆ ಬೀಳಬಾರದೆಂದು ಮುಚ್ಚಿಕೊಳ್ಳುವ—ಬಟ್ಟೆಯನ್ನು ಹೇರಿಕೊಳ್ಳುವ—ನೀನು ಸಭ್ಯನೇ? ಬಟ್ಟೆಗಳನ್ನು ಬಿಚ್ಚಿಹಾಕಿದ ಮಾತ್ರಕ್ಕೆ ನಿನ್ನ ಸಭ್ಯತೆಯೂ ಸಂಭಾವನೆಯೂ ನಷ್ಟವಾಗುವುದೆ ? ಏನು ? ಹೇಳಯ್ಯಾ ಹೊದ್ದು-ಮುಚ್ಚಿಕೊಂಡ ಮಾನವ! .

ಈಗ ತೊಯ್ದ ಸೀರೆಯನ್ನು ಬಿಟ್ಟು ಸುದರ್ಶನೆಯು ಕುಸುಕುಸು ಮಾಡುತ್ತ ಜಯರಾಜನ ತೊಡೆಗಳ ಮೇಲೆ ಮಲಗಿದ್ದಾಳೆ ಜಯರಾಜನು ತನ್ನ ಕೈಬಿಸಿಯಿಂದ ಆಕೆಯ ದೇಹವನ್ನು ಕಾಸುತ್ತಿದ್ದಾನೆ.

ಜಯರಾಜನೆಂದ " ಸುದರ್ಶನಾ, ನಿದ್ರೆಹತ್ತಿತೆ ? "

" ಊಂ—ಊಂ—ಊಂ "

" ನಾನು ಹೋಗಬೇಕಾದ ರೈಲುಗಾಡಿ ನಾಲ್ಕು ಗಂಟೆಗೆ ಹೋಗುತ್ತದೆ "

" ಊಂ—ಊಂ—ಊ. "

" ಎರಡು ಗಂಟೆಯಾಗಿರಬಹುದು ! "

ಮತ್ತೆ " ಊಂ—ಊಂ—ಊಂ "

" ಸುದರ್ಶನಾ, ನೀನಿನ್ನು ಏನು ಮಾಡಬೇಕೆಂದಿದ್ದೀಯೆ ? "

" ಊಂ—ಊಂ—ಊಂ, "

ಕೋಪದಿಂದಲೊ ಸಲುಗೆಯಿಂದಲೋ ಆಕೆಯ ಗಲ್ಲಗಳ ಮೇಲೆ ಮೆಲ್ಲಗೆ ಟೊಣೆದು ತಟ್ಟುತ್ತ ಎಂದ: “ ಸರಿ, ನಿದ್ರಿಸು ಸುದರ್ಶನಾ! ನನ್ನ ಮಾತುಗಳನ್ನು ಕೇಳಬೇಡ ಮಲಗಿಕೊಂಡೇ ಇರು ”

ನೀರಿನ ಹನಿಗಳಂತೆ ಹೊಳೆಯುವ ಲೆಕ್ಕವಿಲ್ಲದ ಚುಕ್ಕೆಗಳು ಆಕಾಶದಲ್ಲಿ ಅರಳಿ ತೂಗಾಡುತ್ತಿದ್ದುವು ತೆರೆದ ಎದೆಯುಳ್ಳ ಭೂಮಿಯು ಪ್ರಮದೆಯಂತೆ ದಾರಿಯನ್ನು ನೋಡಿ ನೋಡಿ ಕೆಳಗೆ ಮೌನವಾಗಿ ಮಲಗಿದ್ದಳು

* * * *

ಬೆಳಗು ಬರತೊಡಗಿತು ಹಕ್ಕಿಗಳು ಕಲರವವನ್ನಾರಂಭಿಸಿದುವು. ಚುಕ್ಕಿಗಳು ಮಾಯವಾದುವು ಆಗ ಸುದರ್ಶನೆಯು ಎಚ್ಚತ್ತಳು ಜಯರಾಜನು ಬೆಂಚಿನ ಬೆನ್ನಿನ ಮೇಲೆ ತಲೆಯನ್ನಿಟ್ಟು ತೂಕಡಿಸುತ್ತಿದ್ದ ಪ್ಲ್ಯಾಟ್‌ಫಾರ್ಮ್ ನಿಶ್ಶಬ್ದವಾಗಿದ್ದಿತು ಅವಳು ಸೀರೆಯನ್ನುಟ್ಟುಕೊಂಡಳು, ಕುಪ್ಪುಸ ತೊಟ್ಟಳು, ಕಂಬಳಿಯನ್ನು ಮಡಿಸಿ ಬೆಂಚಿನಮೇಲಿಟ್ಟಳು ಆಕೆಯ ಮನದಲ್ಲಿ ಕೊರತೆಯಿರಲಿಲ್ಲ, ಅಭಿಯೋಗವೂ ಇರಲಿಲ್ಲ ಈಗ ಅವಳಿಗೆ ಬೇಕಾದುದೂ ಏನೂ ಇರಲಿಲ್ಲ ಮುಂಜಾವು ಅವಳಿಗೆ ಸಂಪ್ರಿಯವಾಗತೊಡಗಿದ್ದಿತು, ಅವಳಲ್ಲಿ ಪೂರ್ಣತೆಯು ತುಂಬಿಬರುತ್ತಿದ್ದಿತು ಯಾರನ್ನಾದರೂ ಧಿಕ್ಕರಿಸಬೇಕೆಂಬ ಬಯಕೆ ಅವಳಲ್ಲಿರಲಿಲ್ಲ ಮಲಗಿದ್ದ ಜಯರಾಜನನ್ನು ನೋಡಿದಳು ಯೌವನ ತೊಡೆಗಳ ಮೇಲೆ ಇಷ್ಟು ಹೊತ್ತಿನ ವರೆಗೆ ಪ್ರಮದೆಯಂತೆ ಬಿದ್ದುಕೊಂಡಿದ್ದಳೊ, ಅವನಿಗೋಸ್ಕರವಾಗಿಯೇ ಅವಳ ಹೃದಯದಲ್ಲಿ ತಾಯ್ತನದ ಭಾವನೆಯು ಹರಿಯುತ್ತ ಬಂದಿತು ‘ ನಾನು ಇವನನ್ನು ನನ್ನ ತೊಡೆಗಳ ಮೇಲೆ, ಕಂಬಳಿಯನ್ನು ಹೊಚ್ಚಿ ಮಲಗಿಸಿಕೊಳ್ಳಲಾರೆನೆ? ಆದರೆ ಹೀಗೆ ಮಾಡಿದರೆ ಇವನ ನಿದ್ರೆ ಹೊರಟುಹೋದೀತು ’ ಎಂಬ ವಿಚಾರವು ಅವಳಲ್ಲುದಯವಾಯಿತು

ರಾತ್ರಿಯ ಗರ್ಭದಿಂದ ಹೊರಬೀಳುತ್ತಿರುವ ಪ್ರಭಾತವನ್ನು ಅವಳು ನೋಡತೊಡಗಿದಳು ಅವಳ ಮನದಲ್ಲಿಯ ಎಲ್ಲ ಸಂಶಯವು ದೂರವಾಯಿತು. ಕೊರತೆಯು ಲಯವಾಯಿತು. ಯಾವ ಪ್ರಶ್ನೆಯೂ

ಉಳಿಯಲಿಲ್ಲ ಆಕೆಯ ಮನಸ್ಸು ನಾಲ್ಕೂ ದಿಕ್ಕುಗಳಿಗೆ ಅಭಿನಂದನೆ-ಗಳನ್ನು ಕೊಡಲು ಬಯಸಿತು ಎಲ್ಲ ಕಡೆಯಲ್ಲಿ ಪ್ರೀತಿಯು ಕಂಡಿತು. ಎಲ್ಲ ಕಡೆಯಲ್ಲಿ ಮಂಗಲವು ಗೋಚರವಾಯಿತು ಈ ಪ್ರಭಾತ-ಸಮಯದ ಬೆಳಕಿನಲ್ಲಿ ಅವಳು ಜಯರಾಜನನ್ನು ನೋಡಿದಳು ಅವಳಿಗಿಂದು ವರ್ಜ್ಯವಾದುದೇನಿದೆ? ನಿಷಿದ್ಧವಾದುದೇನಿದೆ? ಯಾರನ್ನು ಅಗಲಿ ಅವಳು ಇಂದು ಇರಲೇ ಬೇಕಾಗಿದೆ ? ಯಾರನ್ನೂ ಇಲ್ಲ, ಯಾರನ್ನೂ ಇಲ್ಲ ! ಅವಳ ಹೃದಯವು ನಾಲ್ಕೂ ದಿಶೆಗಳಲ್ಲಿ ಆಲಿಂಗನದ ಹಸ್ತಗಳನ್ನು ಚಾಚಿ, ಆವಾಹನದ ಗೀತೆಯನ್ನು ಹಾಡತೊಡಗಿತೇನೋ! ಆಗ ಅವಳು ಉಷೆಯ ಕಡೆಗೆ, ವನಸ್ಪತಿಗಳ ಕಡೆಗೆ, ಆಕಾಶದ ಕಡೆಗೆ ಬಾಹುಗಳನ್ನು ಚಾಚಿ, ಆಲಿಂಗನವನ್ನು ಬಯಸತೊಡಗಿದಳು "ನನ್ನನ್ನು ಆಲಿಂಗಿಸಿರಿ, ಆಲಿಂಗಿಸಿರಿ! ನಾನು ಹಿಂದೆ ಸರಿಯುವುದಿಲ್ಲ, ಬೇಡವೆನ್ನುವುದಿಲ್ಲ! ಎಲ್ಲರೂ ನನ್ನಲ್ಲಿ ಬನ್ನಿರಿ! ಎಲ್ಲರೂ ನನ್ನನ್ನು ಆಲಿಂಗಿಸಿರಿ, ಆಲಿಂಗಿಸಿರಿ! "

ಸುದರ್ಶನೆಯ ಮನಸ್ಸು ನಿರ್ಮಲತೆಯಿಂದ ತುಂಬುತ್ತಲೆ ಸಾಗಿತು ಅವಳ ಎದುರಿನಲ್ಲಿ, ಎಲ್ಲವೂ ಇದೀಗ ಸ್ನಾನಮಾಡಿದಂತೆ ಚುರುಕಾಗಿ— ಚಟುವಟಿಕೆಯುಳ್ಳುದಾಗಿ— ಕಾಣಲಾರಂಭಿಸಿತು. ಪ್ಲ್ಯಾಟ್‌ಫಾರ್ಮಿನ ತುದಿಯ ವರೆಗೂ ಹೋಗಿ, ಎರಡೂ ದಿಕ್ಕುಗಳ ಕಡೆಗೆ ದೂರದ ವರೆಗೆ ನೀಡಿ ನಡೆದಿದ್ದ ಕಬ್ಬಿಣದ ರೈಲುಗಳನ್ನು ನೋಡಿದಳು, ಅವುಗಳೊಡನೆಯೂ ಇವಳ ಸ್ನೇಹವಿದ್ದಿತೇನೊ ! ಅವುಗಳಲ್ಲಿಯೂ ಇವಳ ಚಿರರಹಸ್ಯಾಧಿಪನು ಇದ್ದನೇನೊ! ಅಹುದು ! ಅವುಗಳಲ್ಲಿಯೂ ಅವನು ವಾಸವಾಗಿದ್ದಾನೆ!

ಜಯರಾಜನ ಕಣ್ಣುಗಳು ತೆರೆದುವು ತನ್ನ ತೊಡೆಯು ಬರಿಯದಾದುದನ್ನೂ, ತನ್ನ ಬಳಿಯಲ್ಲಿ ಕಂಬಳಿಯನ್ನು ಮಡಿಸಿ ಇಟ್ಟುದನ್ನೂ ತನ್ನ ಮೇಲೊಂದು ಕಂಬಳಿಯನ್ನು ಹೊದ್ದಿಸಿದುದನ್ನೂ ಅವನು ನೋಡಿದನು. ಸಾಕಷ್ಟು ಬೆಳಗಾಗಿರುವುದನ್ನೂ ಅವನು ನಿಟ್ಟಿಸಿದನು ಆಗ ಅವನಿಗೆ 'ತನ್ನ ನಾಲ್ಕು ಗಂಟೆಯ ಗಾಡಿ ! ಹೊರಟು ಹೋಯಿತೆ ! ' ಎಂಬ ವಿಚಾರವು ಬಂದಿತು. ತಡವರಿಸಿ-

ಕೊಂಡು ಎದ್ದು, ಬಟ್ಟೆಯನ್ನು ಧರಿಸಿಕೊಂಡ ದೂರದಲ್ಲಿ ಪ್ಲ್ಯಾಟ್‌ಫಾರ್ಮಿನ ತುದಿಯ ಬಳಿಯಲ್ಲಿ, ಸುದರ್ಶನೆಯು ನಿಂತುದನ್ನು ಕಂಡ ಅವನು ಆಕೆಯ ಸನಿಹಕ್ಕೆ ಹೋಗಿ "ಸುದರ್ಶನಾ!" ಎಂದ

ಸುದರ್ಶನೆಯ ಮುಖದಲ್ಲಿ ನಸುನಗೆಯು ಮೂಡಿತು "ನೀವು ಎದ್ದಿರಾ!" ಎಂದು ಕೇಳಿದಳು ಬಳಿಕ ಪೂರ್ವದ ಕೆಂಪು ಬಣ್ಣದ ಕಡೆಗೆ ಬೆರಳುಮಾಡಿ ತೋರಿಸುತ್ತ "ನೋಡಿರಿ ಎಷ್ಟು ಮನೋಹರವಾಗಿದೆ!" ಎಂದಳು

"ಸುದರ್ಶನಾ!"

"ಕಂಬಳಿಯನ್ನು ಇಟ್ಟು ಬಂದಿದ್ದೆ—"

"ಸುದರ್ಶನಾ!"

'ಇನ್ನೇನು ಸುದರ್ಶನಾ?' ಎಂದು ಕೇಳಬೇಕೆಂದು ಆತನ ಬಯಕೆ

ಆದರೆ ಈಗ ಸುದರ್ಶನೆಯಲ್ಲಿಯ ಎಲ್ಲ ಪ್ರಶ್ನೆಗಳೂ ಶಾಂತವಾಗಿವೆ ಅವಳೆಂದಳು "ಕಂಬಳಿಗಳು ಅಲ್ಲಿವೆಯಲ್ಲವೆ?"

ಜಯರಾಜನು ಮೌನದಿಂದಿದ್ದ

ಅವನು ಸುಮ್ಮನಿರುವುದನ್ನು ಕಂಡು ಅವಳು ಅನ್ಯಥಾ ಭಾವಿಸಿಕೊಳ್ಳಲಿಲ್ಲ 'ಸ್ನೇಹವೂ ಒಂದು ಯಜ್ಞವಿರುವುದಲ್ಲವೆ? ಇದರಲ್ಲಿ ನನ್ನದೇನು ನಿಮ್ಮದೇನು ಇದೆ? ಈ ಸ್ನೇಹವನ್ನು ಸಮಾಜದಲ್ಲೊಯ್ದು ತೊಡಕನ್ನುಂಟು ಮಾಡಬೇಕೇತಕ್ಕೆ?' ಎಂದವಳ ವಿಚಾರ

"ಜಯರಾಜ, ನನಗೆ ಏನನಾದರೂ ಹೇಳಬೇಕೆಂದಿದ್ದಿರಾ?" ಒಮ್ಮೆಲೆ ಸುದರ್ಶನೆ ಕೇಳಿದಳು

"ಸುದರ್ಶನಾ"! ಎಂದು ಜಯರಾಜ ಸುಮ್ಮನಾದ

"ನೀವು ನನ್ನನ್ನು ಬಯಸುವುದಿಲ್ಲವೆಂಬುದನ್ನು ನಾನು ಬಲ್ಲೆ ಜಯರಾಜ, ಈ ನಿರಪೇಕ್ಷೆಯೆ ನನ್ನ ಸರ್ವಸ್ವವಾಗಿದೆ ....ನಾನಿನ್ನು ಹೋಗುತ್ತೇನೆ"

"ಎಲ್ಲಿಗೆ?"

"ಹೋಗುತ್ತೇನೆ, ಹೀಗೆಯೆ!"

ಜಯರಾಜನು ಪುನಃ ಕೇಳಬೇಕೇ "ಎಲ್ಲಿಗೆ" ಎಂದು ?

"ಜಯರಾಜ, ನನ್ನ ವಂದನೆಗಳನ್ನೂ ಆಶೀರ್ವಾದಗಳನ್ನೂ ಸ್ವೀಕರಿಸಿರಿ! ಒಂದು ಮಾತನ್ನು ನಿಮಗೆ ಹೇಳಬೇಕೆಂದು ನನಗೆ ಎನಿಸುತ್ತದೆ ನಾನು ಇದೇ ವರ್ಷ ತಾಯಿಯಾಗುವೆನು, ದೇವರು ನಿಮ್ಮನ್ನು ಸದಾ ಸುಖಿಯಾಗಿಡಲಿ "

"ಸುದರ್ಶನಾ!"

ಸುದರ್ಶನೆಯು ಹಿಂಜರಿಯದಿರಲಿಲ್ಲ, ಆದರೆ ಚರಣಗಳನ್ನು ಸ್ಪರ್ಶಿಸಿ ಹೊರಡಲುದ್ಯುಕ್ತಳಾಗಿ "ನಾನು ಹೋಗುತ್ತೇನೆ" ಎಂದಳು.

"ಹೋಗು!" ಎಂದ ಏಕೆಂದರೆ ಇದಕ್ಕೂ ಹೆಚ್ಚಿಗೆ ಜಯರಾಜನು ಏನನೂ ಹೇಳಲಾರ

"ನಮಸ್ಕಾರ!"

ಜಯರಾಜನ ಎದುರಿನಲ್ಲಿಯೆ, ಅವನ ಕಡೆ ಬೆನ್ನು ಮಾಡಿ, ಪ್ಲ್ಯಾಟ್‌ಫಾರ್ಮಿನ ತುದಿಯ ಎದುರಿನಲ್ಲಿ ಎದ್ದು ಬರುತ್ತಿರುವ ಉಷೆಯ ಕಡೆಗೆ ಸುದರ್ಶನೆಯು ಸಾಗಿದಳು, ಮುಂದೆ ಸಾಗುತ್ತ ಹೊರಟು-ಹೋದಳು ಜಯರಾಜ ನೋಡುತ್ತಿದ್ದ, ನೋಡುತ್ತಲೇ ಇದು. ಆ ಮೇಲೆ ಹಿಂತಿರುಗಿ ಬಂದ

# ಮಾಸ್ಟರಜೀ    

ಮೋಶಾ ಬಾಬುಗಳು ತಮ್ಮ ಸ್ಕೂಲಿನ ಅಸಿಸ್ಟೆಂಟ್ ಮಾಸ್ಟರರೆಂದು ವಿದ್ಯಾರ್ಥಿಗಳಿಗೆ ಗೊತ್ತಾಗಿದ್ದಿತು ಮಾಸ್ಟರರ ಪೂರ್ಣ ಹೆಸರು 'ಮಹಾಮಹಿಮ ಘೋಷಾಲ್' ಎಂದು ಅವರು ಸುಮಾರು ನಾಲ್ವತ್ತು ವರ್ಷದವರಿರಬಹುದು ನಸುಗೆಂಪಾದ ಮೈಬಣ್ಣ, ಸ್ವಭಾವವು ವಿನೋದದಿಂದ ಬೆರೆತುದು ಬಂಗಾಲಿಗಳಂತೆ ಉಚ್ಚಾರ ಮಾಡಲು—ಮೋಹಾಮೋಹಿಮ—ಎನ್ನಲು ಹುಡುಗರಿಗೆ ಬರುತ್ತಿರಲಿಲ್ಲವಾದುದರಿಂದ ಅವರು 'ಮೋಶಾ ಬಾಬೂ' ಎಂದು ಚಿಕ್ಕ ಹೆಸರನ್ನಿಟ್ಟಿದ್ದರು ಮಾಸ್ಟರ್ ಮಹಾಶಯರಿಗೆ

ಮಹಾಮಹಿಮ ಘೋಷಾಲರು ಬಂಗಾಲವನ್ನು ಬಿಟ್ಟು ಸಂಯುಕ್ತ ಪ್ರಾಂತ್ಯದಲ್ಲಿಯ ಅತರೌಲಿ ಎಂಬ ಊರಿಗೆ ನೌಕರಿ ಮಾಡಲಿಕ್ಕೆ ಏಕೆ ಬಂದರೆಂಬುದನ್ನು ಹೇಳಬೇಕಾದರೆ, ಅನೇಕ ಕಥೋಪಕಥೆಗಳನ್ನು ಹೇಳಬೇಕಾಗುವುದು ಸ್ವಲ್ಪದರಲ್ಲಿಯೆ ಹೇಳುವುದಾದಲ್ಲಿ ಹೀಗೆ ಹೇಳಬಹುದು 'ಎಫ್ ಎ ಯಲ್ಲಿ ತೇರ್ಗಡೆ ಹೊಂದಿದ ಸ್ವಲ್ಪ ದಿನಗಳಲ್ಲಿಯೆ ತಂದೆಯವರು ತೀರಿಕೊಂಡದ್ದರಿಂದ ಅವರಿಗೆ ವಿದ್ಯಾಭ್ಯಾಸವನ್ನು ಮುಂದುವರಿಸಲಾಗಲಿಲ್ಲ ತಾಯಿಯು ಸೊಸೆಯನ್ನು ಕಾಣಲು ಆತುರಳಾದದ್ದರಿಂದ ಸೊಸೆಯೂ ಮನೆಗೆ ಬಂದಳು ಸೊಸೆಯ ಮುಖವನ್ನು ನೋಡಿದ ಬಳಿಕ ಅಲ್ಪಾವಕಾಶದಲ್ಲಿಯೆ ತಾಯಿಯೂ ಇಹಲೋಕವನ್ನು ಬಿಟ್ಟು ತೆರಳಿದಳು ಆ ಮೇಲೆ ಮಹಾಮಹಿಮರು ವೃತ್ತಪತ್ರಗಳಲ್ಲಿ 'ಬೇಕು' 'ಬೇಕು' ಎಂದಿದ್ದ ಕಾಲಮುಗಳನ್ನು ದಿನಾಲು ಓದಿ, ತೆರವಿದ್ದ ಸ್ಥಳಗಳಿಗೆಲ್ಲಕ್ಕೂ ಅರ್ಜಿಯ ಬಾಣಗಳನ್ನು ಬಿಟ್ಟರು ಅದೆಷ್ಟೋ ತಿಂಗಳುಗಳಾದ ಬಳಿಕ

ಒಂದು ಬಾಣವು ಗುರಿಯನ್ನು ಹೊಡೆಯಿತು ಆದರ ಫಲಸ್ವರೂಪವಾಗಿ ಅವರು ಆತರೌಲಿಗೆ ಬಂದು ಹೆಂಡತಿಯೊಡನೆ ವಾಸವಾಗಿರುವರು'

ಅವರ ಹೆಂಡತಿಯ ಹೆಸರು 'ಶ್ಯಾಮಕಲಾ' ಎಂದು ಅವಳು ಅಷ್ಟು ಶ್ಯಾಮಲೆಯಲ್ಲದಿದ್ದರೂ ಕಲೆಯಲ್ಲಿ ಮಾತ್ರ ನಿಷ್ಣಾತಳಿದ್ದಾಳೆ ತನ್ನ ಕಪ್ಪುತನವನ್ನು ನೋಡುವವರು ಬೆರಳು ಕಚ್ಚುವಂತೆ ಕಲೆಯಿಂದ ಹೋಗಲಾಡಿಸಿಕೊಳ್ಳುತ್ತಾಳೆ ಆಮೇಲೆ ಅವಳನ್ನು ನೋಡಿದರೆ ಅವಳು ಕಪ್ಪಾದ ಹೆಣ್ಣು ಎಂದು ಹೇಳಲು ಯಾರಿಗೆ ತಾನೆ ಧೈರ್ಯ-ವಾದೀತು ಶ್ಯಾಮಕಲೆಯು ಹತ್ತು ವರುಷದವಳಿದ್ದಾಗ ಮಹಾ-ಮಹಿಮರು ಅವಳನ್ನು ಮದುವೆಯಾದರು ಈಗ ಅವಳು ಹದಿಮೂರು ಹದಿನಾಲ್ಕು ವರುಷದವಳಾಗಿದ್ದಾಳೆ, ಈ ಆತರೌಲಿಯಲ್ಲಿ ಮಾಸ್ತರಜೀ-ಯವರ ಹೆಂಡತಿಯಾಗಿ ವಾಸಮಾಡುತ್ತಿದ್ದಾಳೆ

ದಿನಗಳು ಕಳೆದು ಹೋದವು ಅವುಗಳಿಗೆ ಲೆಕ್ಕವಿಲ್ಲ ಈಗ ಮಾಸ್ತರಜೀಯವರ ವಯಸ್ಸು ನಾಲ್ವತ್ತನ್ನು ಮಿಕ್ಕಿರಬಹುದು, ಕಲಾ-ವತೀ ಶ್ಯಾಮಲೆಯ ವಯಸ್ಸೂ ಇಪ್ಪತ್ತಕ್ಕಿಂತ ಕಡಿಮೆಯಿರಲಿಕ್ಕಿಲ್ಲ ಇನ್ನೂ ಒಂದೆರಡು ವರ್ಷ ಹೆಚ್ಚಾಗಿದ್ದರೂ ಇರಬಹುದು ಮಾಸ್ತರಜೀ-ಯವರು ಅತ್ಯಂತ ಪ್ರೀತಿಯಿಂದ ಅವಳನ್ನು ಸಲಹಿ ಇಲ್ಲಿಯವರೆಗೆ ದೊಡ್ಡವಳನ್ನಾಗಿ ಮಾಡಿದ್ದಾರೆ ಅವರ ಎದುರಿನಲ್ಲಿಯೆ ಚಿಕ್ಕ ಹುಡುಗಿಯಾಗಿದ್ದ ಶ್ಯಾಮಕಲೆಯು ಕಿಶೋರಾವಸ್ಥೆಯಿಂದ ಷೋಡ-ಶಾವಸ್ಥೆಗೆ ಬಂದು,ಈಗ ನವಯುವತಿಯೂ ಆಗಿದ್ದಾಳೆ ಮಾಸ್ತರಜೀ-ಯವರು ಪತಿಯ ಪ್ರೇಮಕ್ಕಿಂತಲೂ ಮಾತೃಪ್ರೇಮದಿಂದಲೆ ಅವಳನ್ನು ಹೆಚ್ಚಾಗಿ ಬೆಳೆಯಿಸಿದ್ದಾರೆ ಅವರು ಅವಳಿಗೆ ಅನೇಕ ಆಟದ ಒಡವೆ-ಗಳನ್ನು ತಂದುಕೊಟ್ಟಿದ್ದರು ಚಿಕ್ಕ ಚಿಕ್ಕ ಮಿಠಾನಗಳನ್ನು ತುಪ್ಪದಲ್ಲಿ ಕರಿದು ಕರಿದು ತಿನ್ನಿಸಿದ್ದರು ಅವಳನ್ನು ಹೀಗೆ ಬೆಳೆಯಿಸಿ ಹೆಂಡತಿಯ ಹೆಸರಿನಲ್ಲಿ ಮನೆಯಲ್ಲಿಟ್ಟುಕೊಂಡಿದ್ದರು ತಮ್ಮ ತಾಯಿಯು ತೀರಿದ ಮೇಲೆ, ಗೃಹಿಣೀತನಕ್ಕೆ ಬೇಕಾಗುವ ಸಾಧನ-ಸಾಮಗ್ರಿಗಳನ್ನು ಕಲೆ-ಹಾಕುವ ಭಾರವೂ ಅವರ ಮೇಲೆಯೆ ಬಿದ್ದುಹೋಯಿತು ಏನೂ ಅರಿ-ಯದ ಈ ಶ್ಯಾಮಕಲೆಯೂ ಅವರ ಪಾಲಿಗೆ ಇನ್ನೊಂದು ಯಾವುದೊ

ಮನೆವಾರ್ತೆಯು ವಸ್ತುವಿನ ತೆ-ಕೆಲಸದಂತೆ—ಭಾರವಾಗಿದ್ದಾಳೆ ಇದೆಲ್ಲವನ್ನೂ ಸಹಿಸಿಕೊಂಡು ಅವರು ಇಲ್ಲಿಯವರೆಗೆ ಸಂಸಾರವನ್ನು ನಡೆಯಿಸಿಕೊಳ್ಳುತ್ತ ಬಂದಿದ್ದಾರೆ ಇಂತಹ ಈ ಸಂಸಾರ ನಿರ್ವಾಹದಲ್ಲಿ ಅವರಿಗೆ ಎಂದೂ ಬೇಸರವೆನಿಸಲಿಲ್ಲ, ಅರಸಿಕತೆಯು ಎಲ್ಲಿಯೂ ಕಂಡು-ಬರಲಿಲ್ಲ ಕೆಲವು ವರ್ಷಗಳು ಕಳೆದ ಮೇಲೆ ಶ್ಯಾಮಕಲೆಯು ಈ ಮನೆತನದ ಭಾರವನ್ನೆಲ್ಲ ತನ್ನ ಮೇಲೆ ತೆಗೆದುಕೊಳ್ಳುವಳೆಂಬ ವಿಚಾರದಿಂದಲೆ— ಇಲ್ಲಿಯವರೆಗೆ— ಎಲ್ಲವನ್ನೂ ನಿರ್ವಹಿಸುತ್ತ ಬಂದಿದ್ದಾರೆ "ಇನ್ನೇನು ಸ್ವಲ್ಪ ದಿನಗಳಲ್ಲಿ ಸಂಸಾರದ ಭಾರವು ಶ್ಯಾಮಕಲೆಯ ಮೇಲೆ ಬೀಳುವುದು ಈ ತೊಂದರೆ ಇನ್ನೆಷ್ಟು ದಿವಸ ಉಳಿದೀತು?" ಎಂಬ ವಿಚಾರದಿಂದ ಅವರು ಸಂತೋಷದಿಂದಿದ್ದರು

ಶ್ಯಾಮಕಲೆಯೂ ದಿನದಿನಕ್ಕೆ ಒಂದೊಂದು ಕಲೆಯಲ್ಲಿ ಪಾರಂಗತ-ಳಾಗುತ್ತ ಬೆಳೆದುಬಂದಿದ್ದಾಳೆ ಬಾಲ್ಯವನ್ನು ಮೆಲ್ಲಮೆಲ್ಲಗೆ ದಾಟಿ ಮನಮೋಹಿನಿಯಾಗಿದ್ದಾಳೆ ಮೊದಲೇನೋ ಅವಳು ಆಡುತ್ತಿರ-ಬಹುದು, ಈಗ ಬೈತಲೆ ತೆಗೆದುಕೊಳ್ಳುತ್ತಿದ್ದಾಳೆ, ನಾನಾ ಬಗೆಯ ಹೆರಳು ಹೆಣೆಯುವುದನ್ನು ಕಲಿತುಕೊಂಡಿದ್ದಾಳೆ, ತಾನು ಚಿಕ್ಕ ಹುಡುಗಿಯಾಗಿಲ್ಲನೆಂಬುದನ್ನು ತನ್ನ ಪತಿಯು ಈಗ ತಿಳಿದುಕೊಳ್ಳ-ಬೇಕೆಂದು ಇಚ್ಛಿಸುತ್ತಿದ್ದಾಳೆ ತಾನು ಹೆಣೆದುಕೊಳ್ಳುವ ನಾನಾ ಬಗೆಯ ಮುಡಿ-ಜಡೆಗಳನ್ನು ತನ್ನ ಪತಿಯು ನೋಡಬೇಕೆಂದೂ, ತಾನು ಉಡುವ ಸೀರೆಗಳ ಕಡೆಗೆ ಆತನ ಮನಸ್ಸನ್ನು ಸೆಳೆಯಬೇಕೆಂದೂ ಅವಳು ತನ್ನನ್ನು ಆಗಾಗ ಸಿಂಗರಿಸಿಕೊಳ್ಳುತ್ತಾಳೆ ಆದರೇನು? ಮಹಾಮಹಿಮರು ಬಂದು ಅವಳನ್ನು ನೋಡಿ, "ಒಹೋ,—ಶ್ಯಾಮಾ, ನೀನೀಗ ಕಲಾನಿಧಿಯಂತೆ ಶೋಭಿಸುತ್ತೀಯೆ" ಎನ್ನುತ್ತಾರೆ!

ಮಹಾಮಹಿಮರ ಈ ನುಡಿಗಳಿಂದ ಅವಳಿಗೆ ಕೋಪಬರುತ್ತದೆ "ತಾನು ಯಾವಾಗಲೂ ಸಂತವಿಡಿಸಿಕೊಳ್ಳುವ ಪ್ರಾಣಿಯೆ?" ಎಂದು ಯೋಚಿಸುತ್ತಾಳೆ.

"ಕಾಮುಕಸ್ತೂರಿಯಂತಹ ಶ್ಯಾಮುಕಸ್ತೂರಿ, ಮಾತನಾಡು! ಮಾತನಾಡು!" ಕೂಡಲೆ ಶ್ಯಾಮಾ ಇನ್ನಿಷ್ಟು ಕೋಪಿಸಿಕೊಳ್ಳುತ್ತಾಳೆ

"ಕೋಪಿಸಿಕೊಳ್ಳಬೇಡವೇ!"

ಸೆಡವಿನಿಂದ ಹೊರಟುಹೋಗಿಬಿಡುವಳು ಮಹಾಮಹಿಮರ ಎದುರಿನಿಂದ

ಮಹಾಮಹಿಮರು ಅಡುಗೆಯ ಮನೆಯಲ್ಲಿ ಒಲೆಯು ಆರಿದುದನ್ನು ನೋಡುವರು ತಾವೇ ಸ್ವತಃ ಎತ್ತಿ ಕಟ್ಟಿಗೆ—ಕುರುಳು ತಂದು ಅದನ್ನು ಹೊತ್ತಿಸಿ, ಅನ್ನಮಾಡಿ, ಸಾರಿಗೆ ಒಗ್ಗರಣೆಹಾಕಿ, ತಾಟು ಬಡಿಸಿಟ್ಟು, ತನ್ನ ಕೋಣೆಯಲ್ಲಿ ನಲ್ಲೆಯವನ್ನು ಹೊದ್ದುಕೊಂಡು ಮಲಗಿದ್ದ ಹೆಂಡತಿಯನ್ನು "ಏಳೇ ಊಟಕ್ಕೇಳು, ಬಡಿಸಿಯಾಗಿದೆ" ಎಂದು ಊಟಕ್ಕೆಬ್ಬಿಸುತ್ತಾರೆ

ಅವಳು ಸೆಲ್ಲೆಯವನ್ನು ಇನ್ನಿಷ್ಟು ಬಿಗಿಯಾಗಿ ಹೊದ್ದುಕೊಳ್ಳುತ್ತ "ಹೋಗಿ-ಹೋಗಿ, ನನಗೆ ಹಸಿವಾಗಿಲ್ಲ!" ಎನುತ್ತಾಳೆ

"ಮೀನಿನ ಸಾರು ಎಷ್ಟೊಂದು ರುಚಿಯಾಗಿದೆಯೆನ್ನುತ್ತೀಯಾ ಬಹು ಚೆನ್ನಾಗಿ ತಯಾರಿಸಿದ್ದೇನೆ ಬಂದೆ ಒಂದು ತುತ್ತು ಅನ್ನದೊಡನೆ ಸುರಿದುಕೊಂಡು ನೋಡೇಳು, ಬಾ ಎದ್ದು, ಬೇಗ" ಎಂದು ಅಡುಗೆಯ ಮನೆಗೆ ಹೋಗುವಷ್ಟರಲ್ಲಿ ಅವಳೂ ಎದ್ದು ಬಂದು ಊಟಮಾಡುತ್ತಾಳೆ ಬಳಿಕ ಮಹಾಮಹಿಮರು ಸ್ಕೂಲಿಗೆ ಹೊರಟು ಹೋಗುತ್ತಾರೆ

ಅತರೌಲಿಗೆ ಹೊಸತಾಗಿ ಬಂದಾಗ ನಡೆಯುತ್ತಿದ್ದ ಕತೆಯಿದು ಈಗ ಹಾಗಿಲ್ಲ ಶ್ಯಾಮಕಲಾ ಈಗ ಚಿಕ್ಕಹುಡುಗಿಯಲ್ಲ ದೊಡ್ಡವಳಾಗಿದ್ದಾಳೆ ಮನೆಯಲ್ಲಿ ಈಗ ಒಬ್ಬ ಗುಡ್ಡುಗಾಡಿನ ಹುಡುಗ ಅಡುಗೆಮಾಡಲಿಕ್ಕೆ, ಮುಸುರೆ ತಿಕ್ಕಲಿಕ್ಕ, ನೀರು ತರಲಿಕ್ಕೆ ಇದ್ದಾನೆ ಆದುದರಿಂದ ಶ್ಯಾಮಕಲೆಗೆ ಅಡುಗೆ ಮೊದಲಾದುದರ ಯಾವ ಚಿಂತೆಯೂ ಇಲ್ಲ ಅವಳು ಬಗೆಬಗೆಯಾಗಿ ಬೈತಲೆ ತೆಗೆದುಕೊಳ್ಳುವುದರಲ್ಲಿ, ಮುಡಿಯನ್ನು ಹೆಣೆದುಕೊಳ್ಳುವುದರಲ್ಲಿ ಸಮಯವನ್ನು

ಹೆಚ್ಚಾಗಿ ಕಳೆಯುತ್ತಾಳೆ ತೆಳುವಾದ ಸುಂದರವಾದ ಬಟ್ಟೆಯನ್ನು ಉಡಬೇಕೆಂದು ಎನಿಸುತ್ತದೆ ಆದುದರಿಂದಲೇ ನಯವಾದ ಬಟ್ಟೆ-ಗಳನ್ನು ಮನೋಹರವಾಗಿ ಉಟ್ಟುಕೊಳ್ಳುತ್ತಾಳೆ ಈಗ ಆಕೆಯ ಮೈಮೇಲೆ ಬಟ್ಟೆಗಳೂ ಗುಲಾಬಿಗಿಡದ ಮೇಲೆ ಗುಲಾಬಿಯ ಹೂ ಅರಳಿದಂತೆ ಅರಳಿ, ಆಕೆಯ ಸೌಂದರ್ಯವನ್ನು ಹೆಚ್ಚಿಸುತ್ತಿವೆ ಆವಳ ಸ್ವಭಾವದಲ್ಲಿಯೂ ಈಗ ಪರಿವರ್ತನೆಯಾಗಿದೆ ಮೊದಲಿನಂತೆ ಪ್ರತಿಯೊಂದು ಮಾತಿಗೂ ಕೋಪವಿಲ್ಲ ಮಹಾಮಹಿಮರಿಗೂ ಕೋಪಗೊಂಡುದನ್ನು ತಿಳಿಸಬಯಸುತ್ತಿಲ್ಲ ಅವಳ ನಡಿಗೆಯಲ್ಲಿ ಮಂದಗತಿಯು ಬಂದಿದೆ, ಕಣ್ಣುಗಳಲ್ಲಿ ಆಶೆಯು ತುಂಬಿದೆ, ಈಗ ಮಹಾಮಹಿಮರನ್ನು ಕಂಡೊಡನೆಯೇ ಓಡಿಹೋಗುವುದಿಲ್ಲ, ಅವರೆಡೆಗೆ ಧಾವಿಸಿಹೋಗಲು ಬಯಸುತ್ತಾಳೆ ಮಹಾಮಹಿಮರನ್ನು ಏಡಿಸ-ಬೇಕೆಂಬ ಯೋಚನೆಗಳು ಈಗ ಬರುತ್ತಿಲ್ಲ ಆಕೆಗೆ ಬಹಳ ಬುದ್ಧಿವಂತಿಯಾಗಿದ್ದಾಳೆ ಅವರನ್ನು ಸಂತೋಷಪಡಿಸುವುದು ಹೇಗೆ? ತನ್ನೆಡೆಗೆ ಆಕರ್ಷಿಸುವುದು ಹೇಗೆ? ಎಂಬುದನ್ನೆ ಯೋಚಿಸುತ್ತಾಳೆ ಯೌವನಕ್ಕೆ ತನ್ನದೆನ್ನುವ ಹಕ್ಕು ಏನೂ ಇಲ್ಲವೆ? ಇದ್ದ ಸ್ಥಿತಿಯಲ್ಲಿ ಅದು ಪೂರ್ಣ ತೃಪ್ತವಾಗಿರಲಾರದೇಕೆ? ಕಳೆದ ಜೀವನವನ್ನು ಅದು ತನ್ನ ಅಮೃತಮಯ ಜೀವನದಿಂದ ತುಂಬಲಾರದೇಕೆ? ತನ್ನಲ್ಲಿ ತುಂಬಿತುಳುಕುವ ತಾರುಣ್ಯವಿರುವುದೆಂದ ಮೇಲೆ ಶ್ಯಾಮ-ಕಲೆಯು ತಾರುಣ್ಯದ ಹಕ್ಕನ್ನು ಅಪೇಕ್ಷಿಸುವ ಹೆಂಡತಿಯೇತಕ್ಕೆ ಆಗಿರಬಾರದು !

ಈಗ ಮಾಸ್ಟರ್ ಮಹಾಮಹಿಮರು ಹುಡುಗರಿಗೆ ಓದು ಹೇಳಿ ಬಂದು, ಶ್ಯಾಮಕಲೆಯನ್ನು ನೋಡಿದಾಗ ಎಷ್ಟೊಂದು ಸಂತೋಷ-ಪಟ್ಟುಕೊಳ್ಳುತ್ತಾರೆ—"ಕಾಮಕಲೆಯಿಂದ ತುಂಬಿದ ಶ್ಯಾಮಕಲೆಯೆ, ನೀನು ಶ್ಯಾಮಕಲೆಯೊ ಕಾಮಕಲೆಯೊ?" ಎಂದುಬಿಡುತ್ತಾರೆ

ಶ್ಯಾಮಕಲೆಯು ಪತಿಯ ಮಾತುಗಳನ್ನು ಕೇಳಿ ನಾಗಿಣಿಯಂತೆ ಕನಲುತ್ತಾಳೆ.

ದಿನದಿನಕ್ಕೆ ಬಳೆದು ದೊಡ್ಡವಳಾಗುತ್ತ ಸಾಗಿದ ಶ್ಯಾಮಕಲೆಯು, ಅಂದಿನ ಚಿಕ್ಕಬಾಲಿಕೆಯಲ್ಲವೆಂಬ ಭಾವನೆಯು ಮಹಾಮಹಿಮರಲ್ಲಿ ಉದಿಸಲಾರದಾಗಿದೆ ಶ್ಯಾಮಕಲೆಯು ಅವರು ವಾತ್ಸಲ್ಯದಿಂದ ಬಳೆಯಿಸಿದ ಬಾಲಿಕೆಯಲ್ಲವೆ !

*   *   *

ಮೋಶಾಯ್ ಬಾಬುಗಳನ್ನು ಕಂಡರೆ ಹುಡುಗರಿಗೆ ಬಲು ಪ್ರೀತಿ ಮೋಶಾಯ್ ಬಾಬುಗಳು ಇಂಗ್ಲಿಷ್ ವಿಷಯದಲ್ಲಿ ಗಟ್ಟಿಗರೆಂದು ಉಳಿದ ಅಧ್ಯಾಪಕರಿಗೂ ಗೊತ್ತಿದೆ, ಎಂದ ಮೇಲೆ ವಿದ್ಯಾರ್ಥಿಗಳಿಗೆ ಗೊತ್ತಾಗದೆ ಇದ್ದೀತೆ? ಸ್ಕೂಲಿನಲ್ಲಿ ಅವರು ಹೆಚ್ಚಾಗಿ ಇಂಗ್ಲಿಷನ್ನೆ ಕಲಿಸುತ್ತಾರೆ ಆದರೆ ಅವರ ವರ್ಗದಲ್ಲಿ, ಹುಡುಗರು ಕಲಿಯುವುದಕ್ಕಿಂತ ಹೆಚ್ಚಾಗಿ ನಗುತ್ತಾರೆ ಏಕೆಂದರೆ ಮಾಸ್ತರಜೀಯವರಿಗೆ ಕೋಪವೆನ್ನುವುದೇ ಗೊತ್ತಿಲ್ಲ ಕೋಪಿಸಲಿಕ್ಕೆ ಬರುವುದೇ ಇಲ್ಲವೆಂದ ಮೇಲೆ ಅವರು ಏನು ಓದುಹೇಳಬಲ್ಲರೊ ! ಯೋಗ್ಯ-ಶಿಕ್ಷಕರೆನ್ನಿಸಿಕೊಳ್ಳುವವರು ಯಾವಾಗಲೂ ನಿರ್ಲಕ್ಷ್ಯರಾಗಿ ( indifferent ) ಇರುತ್ತಾರೆನ್ನುವುದು ತೀರ ಸತ್ಯವಾದ ಮಾತೆಂದು ತಿಳಿಯಬೇಕು ಕೈಯಲ್ಲಿ ಬಡಿಗೆ ತೆಗೆದುಕೊಂಡು ಶಿಷ್ಯರನ್ನು ಚೆನ್ನಾಗಿ ಥಳಿಸುವುದು ಅವರಿಂದಾಗದ ಕೆಲಸ, ಎಂದ ಮೇಲೆ ಅವರಿಂದ ಅಧ್ಯಾಪನ ಕಾರ್ಯವು ಎಷ್ಟು ಚೆನ್ನಾಗಿ ಆದೀತೆಂಬುದನ್ನು ನೀವೇ ಯೋಚಿಸಬೇಕು

ಮಾಸ್ತರ್ ಮೋಹಾಮೋಹಿಮರು ವರ್ಗದಲ್ಲಿ ಪಠ್ಯ ಪುಸ್ತಕಗಳಲ್ಲಿಯ ಕತೆಗಳನ್ನು ಹೇಳು-ಹೇಳುತ್ತ ಯುರೋಪದ ಇತಿಹಾಸದೊಳಗಿನ ಕತೆಗಳಿಗೆ ಹಾರುತ್ತಿದ್ದರು ಅಲ್ಲಿಂದ ಯಾವ ಆಧಾರದಿಂದಲೊ ಮೊದಲಿನ ತಮ್ಮ ಕ್ಲಾಸಿನ ಕಥೆಗೆ ಬಂದುಬಿಡುತ್ತಿದ್ದರು. ಒಂದೊಂದು ಸಲ ಹೇಳುತ್ತಿದ್ದರು -

"ನಮ್ಮದು ಬಾಂಗ್ಲಾ ದೇಶ ಬಹಳ ಶುಂದರ್ ದೇಶ ಅಲ್ಲಿ ದೊಡ್ಡ ದೊಡ್ಡ ಫಲಗಳು ದೊರೆಯುತ್ತಿವೆ ಬಾಂಗ್ಲಾದ ಭೂಮಿಯು ಫಲವತ್ತಾದದ್ದು. ಅಲ್ಲಿ ಬಗೆಬಗೆಯ ಮಿಠಾಯಿ ತಯಾರಿಸುತ್ತಾರೆ

ನಮ್ಮ ದೇಶದ ಇಸ್ತ್ರೀ ಜನರು ಬಹಳ ಶುಂದರ್ ನಮ್ಮ ಹೆಂಡತಿಯ ಹೆಸರು ನಿಮಗೆ ಗೊತ್ತೇನು? ಅವಳ ಹೆಸರು ಶ್ಯಾಮಕೋಲಾ ಶ್ಯಾಮಕಾಂತಾ ಎನ್ನಬಹುದು, ಶ್ಯಾಮಲೋತಾ ಎನ್ನಬಹುದು, ಶ್ಯಾಮಕೀರ್ತಿ ಎನ್ನಬಹುದು ಅಥವಾ ಶ್ಯಾಮಬಾಲಾ ಎನ್ನಬಹುದು ಎಲ್ಲಾ ಹೆಸರೂ ಚೆನ್ನಾಗಿವೆ ಆದರೆ ಬಣ್ಣ ಮಾತ್ರ ನಸುಗಪ್ಪು ಇದೆ ಆದರೂ ನೋಡಲಿಕ್ಕೆ ಬಹಳ ಶುಂದರ್ ಕಾಣುತ್ತಾಳೆ ನಮಗೆ ಬಹಳ ವರದಕ್ಷಿಣೆ ಕೊಡುತ್ತಿದ್ದರು, ತೆಗೆದುಕೊಳ್ಳಲಿಲ್ಲ ನಾವು ನಮ್ಮ ಹೆಂಡತಿ ಬಹಳ ದೊಡ್ಡಮನೆತದವಳು ನಮ್ಮನ್ನು ಬಹಳ ಪ್ರೀತಿಸುತ್ತಾಳೆ ”

ಹುಡುಗರು ಈ ಕತೆಯನ್ನು ಕೇಳಿ ಸಂತೋಷಪಡುತ್ತಿದ್ದರು ಪುಸ್ತಕದೊಳಗಿನ ಸಂಗತಿಗಳು ನೆನಪಿನಲ್ಲಿ ಉಳಿಯದೆ ಹೋದರೂ ಚಿಂತೆಯಿಲ್ಲ ಬಂಗಾಲದ ಹಣ್ಣುಗಳ, ಮಿರಾಯಿಗಳ ನೆನಹು ಉಳಿಯುತ್ತಿದ್ದಿತು, ಹುಡುಗರು ಕೆಲಸವಿದ್ದೊ ಕೆಲಸವಿಲ್ಲದಯೊ ಮಾಸ್ತರಜೀಯವರ ಮನೆಗೆ ಆಗಾಗ ಹೋಗಿ, ಮಾಸ್ತರರ ಹೆಂಡತಿಯವರಿಗೆ ಬಗೆಬಗೆಯ ಉಪಹಾರಗಳನ್ನು ಒಯ್ದು ಕೊಡುತ್ತಿದ್ದರು ಮಾಸ್ತರರ ಹೆಂಡತಿಯೂ ಹುಡುಗರನ್ನು ಹೆಚ್ಚಾಗಿ ಪ್ರೀತಿಸುತ್ತಿದ್ದರು ಆದ್ದರಿಂದ ಮಾಸ್ತರರು ತಮ್ಮ ಹೆಂಡತಿಯ ವಿಷಯವನ್ನು ಹೇಳಲಿಕ್ಕೆ ತೊಡಗಿದರೆ ಅದನ್ನು ಕೇಳಬೇಕೆಂದು ಹುಡುಗರಿಗೆ ಕುತೂಹಲವುಂಟಾಗುತ್ತಿತ್ತು

ಅಂತಲೇ ಹುಡುಗರು ಎಷ್ಟು ಹೊತ್ತಾದರೂ ಕೂತು, ಕೇಳಿ ಸಂತೋಷಪಡುತ್ತಿದ್ದರು ಹುಡುಗರೆಂದರ ಹುಡುಗರೆ ಮಾಸ್ತರರು ಹೇಳುತ್ತಿರುವಾಗ ಮಧ್ಯದಲ್ಲಿಯೆ “ಮಾಸ್ತರಜೀ, ಪಾಠಹೇಳಿರಿ, ಪುಸ್ತಕದ ಪಾಠಹೇಳಿರಿ!” ಎನ್ನುತ್ತಿದ್ದರು

ಮಾಸ್ತರರು ಎನ್ನುತ್ತಿದ್ದರು “ನೀವು ಹುಡುಗಾಟಿಕೆಮಾಡುತ್ತೀರಾ! ಓದಿರಿ ಪುಸ್ತಕ, ಓದಿರಿ! ನೀವು ನಾಪಾಸು ಆದರೆ ನಮ್ಮ ನಮ್ಮ ಮೂಗು ಹೋಗುವುದು ಹೇಳಿರಿ ‘ಕಸಬಿಯಂಕಾ’ ಯಾರು? ಅವನ ಕತೆಯೇನು?”

ಸ್ವಲ್ಪ ಹೊತ್ತು ಅಭ್ಯಾಸ ನಡೆಯುತ್ತಿದ್ದಿತು ಮತ್ತೆ ಮಾಸ್ತರಜೀಯವರು ಹೇಳುತ್ತಿದ್ದರು “ನೀವು ಬಂಗಾಲದೊಳಗಿನ ಕೋಲೀಕಾತಾ

ಶಹರದ ಹೆಸರು ಕೇಳಿದ್ದೀರೇನು? ಬಹಳ ದೊಡ್ಡ ಪಟ್ಟಣವದು. ಅಲ್ಲಿ ನಾನಾ ತೆರದ ಗಾಡಿಗಳು ಓಡಾಡುತ್ತವೆ ರೈಲುಗಾಡಿಗಳಿವೆ, ಇಸ್ಟೀಮರುಗಳು ನಡೆಯುತ್ತವೆ ಟ್ರಾಮ್‌ಗಾಡಿ, ಮೋಟಾರುಗಾಡಿ, ರಿಕ್ಷಾಗಾಡಿ, ಟಾಂಗಾಗಾಡಿ ಮುಂತಾದ ತೆರತೆರದ ಗಾಡಿಗಳು ಓಡಾಡುತ್ತಿವೆ ಇಸ್ಟೀಮರ್ ನೋಡಿದ್ದೀರೇನು ? ಅದು ಇಸ್ಟೀಮಿನ ಜೋರಿನಿಂದ ನಡೆಯುತ್ತದೆ ಅಲ್ಲಿ ಹೂಗ್ಲೀ ನದಿ ಇದೆ, ಅದರ ಮೇಲೆ ದೊಡ್ಡದೊಂದು ಸೇತುವೆ ಇದೆ ನಾವು ಅದೇ ಪಟ್ಟಣದಲ್ಲಿ ಎಫ್. ಎ ಪಾಸಾದೆವು ಆ ಮೇಲೆ ನಮ್ಮ ಲಗ್ನವಾಯಿತು ಮೊದಲು ಮೊದಲು ನಾವು ಕೆಂಪು ಹೆಂಡತಿ ಬೇಕೆನ್ನುತ್ತಿದ್ದೆವು ಲಗ್ನದ ಕಾಲಕ್ಕೆ ನಮ್ಮ ಹೆಂಡತಿ ಹತ್ತು ವರ್ಷದಾಕೆ ಇದ್ದಳು ನಮ್ಮ ಹೆಂಡತಿಯ ಬಣ್ಣ ಕೆಂಪು ಇಲ್ಲದಿದ್ದರೂ ಬಹಳ ಸುಂದರವಾಗಿದೆ ಆಕೆಯ ಮುಖ ನಮ್ಮ ಹೆಂಡತಿ ಬಹಳ ಒಳ್ಳೆಯ ಹುಡುಗಿ, ಹಸುವಿನಂತಹ ಸ್ವಭಾವ.''

ಹುಡುಗರು ನೆನಪುಕೊಡುತ್ತಿದ್ದರು '' ಮಾಸ್ತರಜೀ ಕ್ಯಾಸ ಬಿಯಂಕಾ! '' ಮಾಸ್ತರರು ಒಮ್ಮೆಲೆ ಗಟ್ಟಿಯಾಗಿ ಬಿರುನುಡಿಯಿಂದ ಎನ್ನುತ್ತಿದ್ದರು ''ನೀವು ತಮಾಷೆಮಾಡುತ್ತಿದ್ದೀರೇನು? ತಮಾಷೆ ನಡೆಯಲಿಕ್ಕಿಲ್ಲ ಪಾಠ ಓದಿರಿ, ಪಾಠ ಓದಿರಿ ! ನೀವು ನಾಪಾಸಾದರೆ ಬಹಳ ಕಟ್ಟಾದೀತು ಹೆಡ್‌ಮಾಸ್ತರರು ನಮಗೆ ದೋಷಕೊಟ್ಟಾರು ಆಗ ನಾವು 'ಹುಡುಗರು ಪೋಲಿ ಇವೆ' ಎಂದು ಹೇಳಿಬಿಡುತ್ತೇವೆ- ನೋಡಿರಿ ''

ಉಪ್ಪು ಮನಃಪೂರ್ವಕವಾಗಿ ಪಾಠಹೇಳದಿದ್ದರೂ ಈ ಮಾಸ್ತರಜೀಯವರು ಕಲಿಸುವ ವಿಷಯದಲ್ಲಿ ಹುಡುಗರೆಂದೂ 'ಕಚ್ಚಾ' ಇರುತ್ತಿರಲಿಲ್ಲ ಅವರಲ್ಲಿಯೂ ವಿದ್ಯಾರ್ಥಿಗಳಲ್ಲಿಯೂ ಒಂದು ರೀತಿಯ ಆತ್ಮೀಯತೆಯು ಬಳೆದಿದ್ದಿತು ಸಲಹೆ ಕೇಳಬೇಕೆಂದೋ ಏನೋ ಮಾಸ್ತರರು ತಮ್ಮ ಮನೆಯ ಪ್ರತಿಯೊಂದು ಚಿಕ್ಕಚಿಕ್ಕ ಮಾತನ್ನೂ ಹುಡುಗರ ಎದುರಿನಲ್ಲಿ ಹೇಳುತ್ತಿದ್ದರು ಆ ಅಲ್ಪಜ್ಞಾನದ ಹುಡುಗರು ಮಾಸ್ತರರ ಈ ಮಾತುಗಳಿಂದ ಏನಾದರೂ ಸಾರ ಗ್ರಹಿಸುತ್ತಿದ್ದರೊ

ಇಲ್ಲವೊ ಹೇಳಲಾಗುವುದಿಲ್ಲ, ಆದರೆ ಸ್ನೇಹವನ್ನು ಮಾತ್ರ ಗ್ರಹಿಸು-ತ್ತಿದ್ದರೆಂದು ಧಾರಾಳವಾಗಿ ಹೇಳಬಹುದು.

ಸ್ಕೂಲು ಮಿಡಲ್ ಸ್ಕೂಲಾಗಿದ್ದಿತು ಆತರೌಲಿಯು ಅಷ್ಟು ದೊಡ್ಡ ಊರಾಗರಲಿಲ್ಲ ಇನ್ನೇನನಾದರೂ ಮಾಡಿ ಹೆಚ್ಚಿಗೆ ಗಳಿಸಬೇಕೆಂಬ ಲಾಲಸೆಯು ನಮ್ಮ ಮಾಸ್ಟರಜೀಯವರಲ್ಲಿಯೂ ಇರಲಿಲ್ಲ ತಿಂಗಳಿಗೆ ೩೫ ರೂಪಾಯಿ ಸಂಬಳದ ಮೇಲೆ ಇಲ್ಲಿಗೆ ಕೆಲಸಮಾಡಲಿಕ್ಕೆ ಬಂದರು ವರ್ಷಕ್ಕೆ ಮೂರು ರೂಪಾಯಿ ಹೆಚ್ಚು ಆಗುತ್ತ ಆಗುತ್ತ ಈಗ ಅವರಿಗೆ ತಿಂಗಳೊಂದಕ್ಕೆ ೫೦ ರೂಪಾಯಿಗಿಂತಲೂ ಸ್ವಲ್ಪ ಹೆಚ್ಚು ಸಂಬಳ ಸಿಕ್ಕುತ್ತಿದ್ದಿತು ಸಂಬಳದ ರೂಪಾಯಿ ಸಿಕ್ಕಕೂಡಲೆ ಬೇಸಗೆಯ ರಜೆಯಲ್ಲಿ ತಮ್ಮ ಬಂಗಾಲದೇಶಕ್ಕೆ ಹೋಗಿ ಬರುತ್ತಿದ್ದರು, ಇಲ್ಲವೆ ಅದೇ ಊರಲ್ಲಿ ವಿದ್ಯಾರ್ಥಿಗಳಲ್ಲಿಯೂ ಊರಿನವರಲ್ಲಿಯೂ ಬೆರೆತು ವಿನೋದದಿಂದ ರಜೆಯನ್ನು ಕಳೆಯುತ್ತಿದ್ದರು ಒಬ್ಬಿಲ್ಲ ಒಬ್ಬ ವಿದ್ಯಾರ್ಥಿ ಅವರ ಮನೆಯಲ್ಲಿ ನೀರು ತುಂಬುತ್ತಿದ್ದ, ಉಳಿದ ಕೆಲಸಗಳು ಇದ್ದರೂ ಮಾಡಿಬಿಡುತ್ತಿದ್ದ ಆದುದರಿಂದ ಮಾಸ್ಟರಜೀಯವರು ಹೆಚ್ಚಿಗೆ ಸಾಮಾನುಗಳನ್ನು ಕೊಳ್ಳದೆ, ಸಂಗ್ರಹಿಸದೆ ತಮ್ಮ ಕಾರ್ಯದಲ್ಲಿಯೆ ಮಗ್ನರಾಗಿದ್ದುಕೊಂಡು, ಯುವತಿಯಾದ ಶ್ಯಾಮ-ಕಲಿಯ ಪತಿಯಾಗಿ ಸಂತೋಷದಿಂದ ಕಾಲಕಳೆಯುತ್ತಿದ್ದರು

* * *

ಪ್ರತಿಯೊಂದು ವ್ಯಕ್ತಿಗೆ ಪ್ರೇಮವನ್ನು ಹೊಂದಬೇಕೆಂಬ-ದೊಂದು ಅವಸ್ಥೆಯಿದ್ದೇ ಇರುತ್ತದೆ ಆ ಅವಸ್ಥೆಯಲ್ಲಿ ತನ ಪ್ರೇಮವು ಸಿಕ್ಕುತ್ತಿಲ್ಲದಿದ್ದರೆ ಅದನ್ನು ಬಲಾತ್ಕಾರದಿಂದಾದರು ತನ್ನೆಡೆಗೆ ಬರಮಾಡಿಕೊಳ್ಳಬೇಕೆಂದು ಆ ವ್ಯಕ್ತಿ ಬಯಸುತ್ತಾನ ಈ ಅವಸ್ಥೆಗೆ ಯೌವನವೆಂದು ಹೆಸರು ನಿಷ್ಕಾಮ ಬುದ್ಧಿಯಿ ದಾನದಂತೆ ಸಲ್ಲಿಸುತ್ತಿರುವ ಪ್ರೇಮವನ್ನು ಸ್ವೀಕರಿಸುವುದೆಂದ ತಾರುಣ್ಯಕ್ಕೆ ಅಪಮಾನ ಮಾಡಿದಂತೆ ತನ್ನಲ್ಲಿ ಶಕ್ತಿಯುಳ್ಳವ ದಾನಕ್ಕೆ ಕೈಯೊಡ್ಡುವನೇ? ತಾನು ಗಳಿಸಿದುದೇ ತನಗೆ ಸಂಪತ್ತು ಪಿತ್ರಾರ್ಜಿತದ ಸಂಪತ್ತಿನಿಂದ ಅವನಿಗೆ ಸುಖವೆಲ್ಲಿ! ತೃಪ್ತಿಯೆಲ್ಲಿ!

ಶ್ಯಾಮಕಲೆಯು ಹೇಗೆಯೆ ಇರಲಿ, ಏನೇ ಇರಲಿ, ಅವಳು ಯೌವನಮದದಿಂದ ತುಂಬಿದ ಶ್ಯಾಮಕಲೆಯು ತನಗೆ ಕೊಡುತ್ತಿರುವ ಪ್ರೇಮವನ್ನು—ಏಕೆಂದರೆ ಅದನ್ನು ಕೊಡಲಾಗುತ್ತಿದೆ—ಸ್ವೀಕರಿಸುವುದರಲ್ಲಿ ಹೇಗೆ ಸುಖಪಟ್ಟಾಳು ? ಅದರಿಂದ ಅವಳ ಮನಸ್ಸು ತಣಿಯುವುದಾದರೂ ಹೇಗೆ ? 'ಪರವಶತೆಯಿಲ್ಲದ—ಉನ್ಮಾದವಿಲ್ಲದ—ನನ್ನಿಯ ಹರಿತವಿಲ್ಲದ—ಪ್ರೇಮವನ್ನು ತಾನು ಗಳಿಸಿದ್ದೇನೆ, ಆದುದರಿಂದ ಅದು ತನ್ನದು, ಅದರ ಮೇಲೆ ತನ್ನ ಪೂರ್ಣಾಧಿಕಾರವಿದೆ' ಎಂದು ಶ್ಯಾಮಕಲೆಯು ಹೇಗೆ ತಿಳಿದುಕೊಳ್ಳಬೇಕು ? ವಯಸ್ಸಿಗೆ ಬಂದ ಮೇಲೆ ಕನ್ಯೆಯು ತಂದೆತಾಯಂದಿರ ಸ್ವಾಭಾವಿಕ ಪ್ರೇಮವನ್ನೂ ದಾಟಿ ಹೊರಕ್ಕೆ ಹೋಗುವುದಿಲ್ಲವೆ ? ಮಗಳು ಅಥವಾ ಅಕ್ಕತಂಗೆಯಾದುದಕ್ಕೆ ಸ್ವಾಭಾವಿಕವಾಗಿ ಸಿಕ್ಕುತ್ತಿರುವ ಪ್ರೇಮಕ್ಕಿಂತಲೂ ಭಿನ್ನವಾದ, ತನ್ನ ಬಲದಿಂದ ದೊರೆಯುತ್ತಿರುವ ಪ್ರೇಮವನ್ನು ಹೊಂದಬೇಕೆಂಬ ಅಪೇಕ್ಷೆಯು ಅವಳಲ್ಲಿ ಇರಲಿಕ್ಕಿಲ್ಲವೆ ? ತನ್ನ ರೂಪ, ತನ್ನ ಗುಣ, ತನ್ನ ಯೌವನಕ್ಕೆ ವಶವಾಗಿ, ವಿವಶವಾಗಿ ಸ್ತ್ರೀತ್ವದ ಬೇಡಿಕೆಯನ್ನು ಪೂರ್ತಿಗೊಳಿಸಲು ಓಡಿ ಬರುವ ಪ್ರೇಮವು ಅವಳಿಗೆ ಬೇಡವೆ ? ವಯಸ್ಸಿಗೆ ಬಂದವಳಿಗೆ ಇಂತಹ ಪ್ರೇಮವು ದೊರೆಯದೆ ಇದ್ದರೆ, ತಂದೆತಾಯಂದಿರ ಅಸೀಮ-ನಿಸ್ಸೀಮ—ಅನಂತ—ಅಪಾರ ಪ್ರೇಮವು ದೊರೆತರೂ ಅವಳಲ್ಲಿ ಒಂದು ಬಗೆಯ ಆಕಾಂಕ್ಷೆ, ಒಂದು ಬಗೆಯ ಕೊರತೆ, ಒಂದು ಬಗೆಯ ವಿಷಾದ—ವೇದನೆ ಇದೆಲ್ಲ ಇರದೆ ಹೋದೀತೆ ?

ಶ್ಯಾಮಕಲೆಗೆ ಪತಿಯ ಸಂಚಿತಪ್ರೇಮವು ಸದಾ ಸಿಕ್ಕುತ್ತಿದೆ ಅವಳು ಕೋಪಿಸಿಕೊಂಡರೂ ಪ್ರೀತಿಯಿಂದ ಸಮಾಧಾನಮಾಡಿ-ಅವಳಿಗದನ್ನು ಕೊಡಲಾಗುತ್ತಿದೆ ಅವಳು ನಕ್ಕಾಗ ನಕ್ಕು ಅದನ್ನು ಕೊಡಲಾಗುತ್ತಿದೆ ಅವಳ ಆರೋಗ್ಯವನ್ನು ಹೆಚ್ಚು ಲಕ್ಷ್ಯದಿಂದ ಚೆನ್ನಾಗಿ ಕಾಯ್ದಿಡಲಾಗುತ್ತಿದೆ ಯಾವಾಗಲೂ ಅವಳನ್ನು ಸಮಾಧಾನಪಡಿಸಲಾಗುತ್ತಿದೆ ಈ ತೆರನಾಗಿ ತನಗೆ ದೊರೆಯುತ್ತಿರುವ ಸ್ನೇಹದ ಬೆಲೆಯನ್ನು ಅವಳು ಅರಿಯಳೆ ? ಆದರೆ . ... !

ಆದರೇನು ! ಉದ್ವೇಗವನ್ನು ಹುಟ್ಟಿಸಿಕೊಳ್ಳುವುದಕ್ಕೆ ಮಹಾ-ಮಹಿಮರು ತಮ್ಮ ಪ್ರೇಮವನ್ನು ಸ್ವಲ್ಪ ಶಿಥಿಲಮಾಡಿಕೊಳ್ಳುವು-ದಾದರೂ ಹೇಗೆ ? ಅವರ ಪ್ರೇಮವು ಪ್ರವಹಿಸುತ್ತಿದ್ದರಲ್ಲವೇ ತಡೆ ಹಾಕುವುದು! ತಗ್ಗುದಿನ್ನೆಗಳಿದ್ದರಲ್ಲವೆ ವೇಗವಾಗಿ ಪ್ರವಹಿಸುವುದು! ದ್ವಂದ್ವವಿದ್ದರಲ್ಲವೆ ಅದರಲ್ಲಿ ನೊರೆಯು ತೋರುವುದು ! ಅವರ ಪ್ರೇಮಧಾರೆಯು ತರಂಗವಿಹೀನವಾಗಿ, ತಟಗಳಲ್ಲಿ ಆಬದ್ಧವಾಗಿ, ಸಮರಸವಾಗಿ ಶ್ಯಾಮಕಲೆಯ ಕಡೆಗೆ ಹರಿಯುತ್ತಿದೆ, ಏಕೆಂದರೆ ಅದು ದಿನದಿನಕ್ಕೆ ಬಹಳ ಆಳವಾಗುತ್ತ ಬಂದಿದೆ

"ನನ್ನ ಮೇಲೆ ಅವರು ಸಿಟ್ಟನ್ನು ಸುರಿಯುವುದಿಲ್ಲವೇಕೆ ?" ಎಂದು ಶ್ಯಾಮಕಲೆಯು ಯೋಚಿಸುತ್ತಾಳೆ "ನಾನು ಪೂರ್ಣ ಸ್ತ್ರೀಯಾಗಿರುವೆನೆಂದು ಅವರೇಕೆ ತಿಳಿದುಕೊಳ್ಳುವುದಿಲ್ಲ ? ನನ್ನನ್ನು ಸದಾ ಸಣ್ಣ ಹುಡುಗಿಯಂತೆ ರಮಿಸುತ್ತಲೆ ಇರುವರು, ಬೆದರಿಸುವು-ದಿಲ್ಲವೇಕೆ ? ನಾನು ಚಿಕ್ಕ ಹುಡುಗಿಯೆ ? ನನಗೆ ಒಳ್ಳೆಯ ಉಡುಗೆ ತೊಡಿಗೆ, ಒಳ್ಳೆಯ ಮನೆ ಬೇಕಾಗಿಲ್ಲ, ಆದರೂ ಅವರು ನನಗೆ ಹೊಸ ಹೊಸ ಸೀರೆಗಳನ್ನೂ ಬ್ಲೌಜ್‌ಪೀಸುಗಳನ್ನೂ ಏಕೆ ತಂದುಕೊಡುತ್ತಾರೆ? ನಾನು ಅವುಗಳನ್ನು ಉಟ್ಟುಕೊಂಡಾಗ ಅವುಗಳ ಕಡೆಗೂ—ನನ್ನ ಕಡೆಗೂ ನೋಡುವುದಿಲ್ಲವೇಕೆ ? ನನ್ನೊಡನೆ ಓದುಬರೆಹದ ಅಥವಾ ಮತ್ತೆ ಯಾವುವೇ ಮಾತುಗಳನ್ನೇಕೆ ಆಡಲಾರರು ? ಮಾತನಾಡಿ-ದರೂ ಒಣಒಣ ಮಾತುಗಳನ್ನೇ ಆಡುತ್ತಾರೇಕೆ ? ಅವರಲ್ಲಿ ಪರಿವರ್ತನೆ ಮಾಡುವಷ್ಟು ಅವರ ಮೇಲೆ ನನ್ನ ಅಧಿಕಾರವಿಲ್ಲವೆ? "

ಅವರ ಮನೆಯಲ್ಲಿ ಇರುತ್ತಾನಲ್ಲ—ಆ ಗುಡ್ಡಗಾಡಿನ ಆಳುಮಗ, ಅವನದೇನು ಈಗ ಹೇಳುವ ಹಾಗಿಲ್ಲ, ಬಹಳ ತುಂಟನಾಗಿದ್ದಾನೆ ಯಾರ ಮಾತನ್ನೂ ಕೇಳುವುದಿಲ್ಲ, ಶ್ಯಾಮಕಲೆಯ ಆಜ್ಞೆಯನ್ನೂ ಪಾಲಿಸುವುದಿಲ್ಲ ಏನನಾದರೂ ಕೆಲಸ ಹೇಳಿದರೆ ಕೇಳಿಸಿತೊ ಇಲ್ಲವೊ ಎಂಬಂತೆ ನಟಿಸಿ, ಮೈಯುಳಿಸಿಕೊಳ್ಳಲಿಕ್ಕೆ ಪ್ರಯತ್ನಿಸುತ್ತಾನೆ. ಶ್ಯಾಮಕಲಾ ಅವನ ಮೇಲೆ ಸ್ವಲ್ಪ ಕೋಪಿಸಿಕೊಂಡರೆ ಅವನು ನಗುತ್ತಾನೆ. ಶ್ಯಾಮಕಲೆಯು ಕೋಪಾವಿಷ್ಟಗಳಾಗಿ ನಡುಗಲು

ಆರಂಭಿಸಿದ ಕೂಡಲೆ ಮೋರೆ ತಿರುವಿಕೊಂಡು ಅಲ್ಲಿಂದ ಹೊರಟು ಹೋಗುತ್ತಾನೆ

ಶ್ಯಾಮಕಲೆಯು ಅವನನ್ನು ಇಷ್ಟಕ್ಕೇ ಬಿಡಳು — ಅವನ ಮುರ್ಖಾಳುತನವನ್ನು ಬಿಡಿಸಿಬಿಡುವಳು ಆ ಹುಡುಗ ಈಗ ತನ್ನ ಕೂದಲುಗಳಿಗೆ ಎಣ್ಣೆ ಹಚ್ಚಿಕೊಂಡು, ಬೈತಲ ತೆಗೆದುಕೊಳ್ಳಲಾರಂಭಿಸಿದ್ದಾನೆ! ಜೆಂಟಲ್‌ಮೆನ್ನರ ಹಾಗೆ ಬಟ್ಟೆ ಹೊಲಿಸಿಕೊಂಡು ಧರಿಸುತ್ತಾನೆ! ಈ ಗುಡ್ಡಗಾಡಿನ ಹುಡುಗನ ರೀತಿ-ನೀತಿಗಳನ್ನು ನೋಡಿ ಶ್ಯಾಮಕಲೆಗೆ ವಿಪರೀತ ಕೋಪ ಬರುತ್ತದೆ, ಅಸಹ್ಯವಾಗುತ್ತದೆ

ಶ್ಯಾಮಕಲೆ ಕೂಗಿದಳು "ಮಹಾದೇವಾ! ಎಲೋ ಮಹಾದೇವಾ!"

ಹತ್ತೊಂಬತ್ತು ಇಪ್ಪತ್ತು ವರ್ಷದ ಆ ಗುಡ್ಡಗಾಡಿನ ಆಳುಮಗನ ಹೆಸರು 'ಮಹಾದೇವ' ಎಂದು

"ಕೇಳಿಸುತ್ತದೆಯೋ ಇಲ್ಲವೋ! ಕಿವಿ ಹೋಗಿರುವುವೇನು?"

ನಗುತ್ತ ಆಕೆಯ ಎದುರಿಗೆ ಬಂದು "ಅಮ್ಮನವರೆ, ಏನಪ್ಪಣೆ? ತಮ್ಮ ಮಾತನ್ನು ಕೇಳಲಿಕ್ಕೆ ಸಿದ್ಧನಿದ್ದೇನೆ" ಎಂದ ಮಹಾದೇವ

"ಕತ್ತೆ! ನಾಯಿ! ನೀಚ! ಹೋಗು ನನ್ನೆದುರಿಗೆ ನಿಲ್ಲಬೇಡ"

"ಅಮ್ಮನವರೆ ಸಿಟ್ಟಾಗಬೇಡಿರಿ ನಿಮ್ಮ ಆಳುಮಗ ನಾನು" ಎಂದು ನಗುತ್ತ ನುಡಿದ ಮಹಾದೇವ

"ಬದ್‌ಮಾಷ್, ತಲೆಯಲ್ಲಿ ಇಷ್ಟೇಕೆ ಎಣ್ಣೆ ಸುರಿದು-ಕೊಂಡಿದ್ದಿಯೆ?"

ತನ್ನ ವಂಚೆಯ ಚುಂಗಿನಿಂದ ತಲೆಯನ್ನು ಉಜ್ಜಿಕೊಳ್ಳುತ್ತ "ಇಗೊಳ್ಳಿ ಅಮ್ಮಾ, ಕೋಪಿಸಿಕೊಳ್ಳಬೇಡಿ! ಇನ್ನೊಮ್ಮೆ ಹಿಂಗೆ ಮಾಡುವುದಿಲ್ಲ" ಎಂದು ಮತ್ತೆ ನಕ್ಕ ಮಹಾದೇವ

"ನೀಚ! ನಗೆಯಾಟವಾಡುತ್ತೀಯೇನು ನನ್ನೊಡನೆ?"

"ಇಲ್ಲಮ್ಮಾ ಇಲ್ಲ!"

"ಸೀರೆ ಒಗೆದು ಒಣಗಿಸಿದೆಯೊ?"

"ಒಣಗಿಸಿದ್ದೇನೆ."

"ಎಲ್ಲಿ ಒಣಗಿಸಿದೆ?" ಎಂದು ಅತ್ಯಂತ ಸಿಟ್ಟಿನಿಂದ ಕೇಳಿದಳು ಶ್ಯಾಮಕಲಾ

"ಆಕಾಶದಲ್ಲಿ ಒಣಗಿಸಿದೆ" ಎಂದು ನಲ್ಲಿಯ ಬಳಿಯಿದ್ದ ಸೀರೆಯನ್ನು ಕುಕ್ಕಿ ಹಿಂಡತೊಡಗಿದ

ಶ್ಯಾಮಕಲೆಯು "ಮೂರ್ಖಾ!" ಎಂದು ಗರ್ಜಿಸಿ ದುಮು-ದುಮು ಉರಿಯುತ್ತ ತನ್ನ ಕಿರುಮನೆಗೆ ಹೋದಳು

ಮಹಾದೇವನು ಸೀರೆ ಒಗೆದು ಒಣಗುಹಾಕಿ, ಆಕೆಯ ಕಿರು-ಮನೆಗೆ ಹೋಗಿ "ಅಮ್ಮಾ ಸೀರೆ ಒಗೆದು ಒಣಗುಹಾಕಿದೆ" ಎಂದು ಹೇಳಿದ ಶ್ಯಾಮಕಲೆ ಸಿಟ್ಟಿನಿಂದ ಅವನನ್ನು ಬಯ್ದುಬಿಟ್ಟಳು ಅವನು "ಅಮ್ಮಾ ಕೋಪಿಸಬೇಡಿ" ಎಂದು ಆಕೆಯ ಕಾಲಿಗೆ ಬಿದ್ದು ಬೇಡಿ-ಕೊಂಡ ಅವಳು "ನಡೆ! ನಿಲ್ಲಬೇಡ ನನ್ನ ಎದುರಿಗೆ!" ಎಂದು ಬೆದರಿಸಿದಳು

ಶ್ಯಾಮಕಲೆ ಮತ್ತು ಆಳುಮಗ ಮಹಾದೇವ ಇಬ್ಬರಲ್ಲಿಯೂ ದಿನದಿನಕ್ಕೆ ಈ ಬಗೆಯಾಗಿ ಸಂಬಂಧವು ಬೆಳೆದು ಬರತೊಡಗಿತು

ಆ ಪೋಕರಿ ಹುಡುಗನನ್ನು ಬೆದರಿಸಿ ಉತ್ತರಕೊಡುವುದರಲ್ಲಿ ಶ್ಯಾಮಕಲೆಗೆ ಅಭಿಮಾನವೆನಿಸುತ್ತಿದ್ದಿತು ಈ ಆಳುಮಗನ ಮೇಲೆ ಅಧಿಕಾರ ನಡೆಯಿಸಿ, ಅವಳ ಅಹಂಕಾರವು ತೃಪ್ತಿಹೊಂದುತ್ತಿದ್ದಿತು, ಅವಳಿಗೆ ಸಂತೋಷವೆನಿಸುತ್ತಿದ್ದಿತು ತನ್ನ ಜೀವನದ ಸಾರ್ಥಕತೆಯ ಅನುಭವವಾಗುತ್ತಿದ್ದಿತು ಈ ಆಳುಮಗನ ಮೇಲೆ ತನ್ನ ಅಧಿಕಾರ-ನಡೆಯುವುದೆಂದೂ, ತನ್ನ ಅಧಿಕಾರದಲ್ಲಿ ಅಲ್ಪಸ್ವಲ್ಪ ದರ್ಪವಿದೆ-ಯೆಂದೂ ಅವಳಿಗೆನಿಸುತ್ತಿದ್ದಿತು ಅವಳು ಕೃಪಾಕಾಂಕ್ಷಿಣಿಯಲ್ಲ, ಅನುಗ್ರಹದಾತ್ರಿಯು!

* * *

ಮಾಸ್ಟರ್ ಮಹಾಮಹಿಮರು ಸ್ಕೂಲಿನಿಂದ ಮನೆಗೆ ಬಂದು, ಪುಸ್ತಕಗಳನ್ನು ವ್ಯವಸ್ಥಿತವಾಗಿಟ್ಟು, ಪತ್ನಿಯ ಬಳಿಗೆ ಹೋಗಿ ಎಂದಿ-ನಂತೆ ಎನ್ನುತ್ತಿದ್ದರು "ಕಾಮಕಲೆಯಿಂದ ತುಂಬಿದ ಶ್ಯಾಮಕಲೆಯೆ! ನೀನು ಶ್ಯಾಮಕಲೆಯೊ ಕಾಮಕಳೆಯೊ!" ಆಗ ಆಕೆಳು ಉತ್ತರ-

ಕೊಡದೆ ಸುಮ್ಮನೆ ಕುಳಿತಿರುತ್ತಿದ್ದಳು. ಪತಿಯ ಈ ಪ್ರೇಮದ ಮಾತುಗಳು ಆವಳ ಹೃದಯವನ್ನು ತಟ್ಟದೆ ಹಾಗೆಯೆ ಹಾರಿಹೋಗುತ್ತಿದ್ದವು

" ನಿನಗೋಸ್ಕರ ಒಂದು ಪದಾರ್ಥ ತಂದಿದ್ದೇನೆ, ನೋಡುತ್ತೀಯೇನು ?"

" ಏನು ? "

ಅವಳು ಮಾಸ್ಟರಜೀಯವರನ್ನು ನಿತ್ಯವೂ ಕೇಳುವಂತೆ ಶುಷ್ಕವಾಗಿಯೆ ಕೇಳಿದಳು " ಏನದು ಹೊಸ ಪದಾರ್ಥ ? " ಮಾಸ್ಟರಜೀಯವರಿಗೆ ಈ ಶುಷ್ಕತೆಯು ತಿಳಿಯದೆ ಇರಲಿಲ್ಲ ಆದರೂ ಅವರು ಆಗ್ರಹದಿಂದ ಹೇಳಿದರು " ಹೋಗು, ನೋಡಿಬಾ ಹೋಗು "

ಶ್ಯಾಮಕಲೆಯು ಪತಿಯನ್ನು ಕರೆದುಕೊಂಡು ನಡುಮನೆಗೆ ಹೋಗಿ, ಪತಿಯು ತಂದ ಸೀರೆಯ ಪಿನ್ನು ನೋಡಿದಳು ಮಹಾಮಹಿಮರು ಕೇಳಿದರು " ಏನು ? ಮನಸ್ಸಿಗೆ ಬಂದಿತೆ ? "

" ಚೆನ್ನಾಗಿದೆ "

" ಆ ಮುಗಿಲು ಬಣ್ಣದ ಸೀರೆಯಿದೆಯಲ್ಲ ಅದಕ್ಕೆ ಈ ಪಿನ್ನು ಬಹಳ ಚೆನ್ನಾಗಿ ಒಪ್ಪುತ್ತದೆ ನೋಡು! ತೆಗೆದುಕೊ ಇದನ್ನು!" ಎಂದು ಪಿನ್ನನ್ನು ಹೆಂಡತಿಯ ಕೈಗಿತ್ತರು— ಮಾಸ್ಟರಜೀಯವರು ಅಲ್ಲದೆ ಸ್ಕೂಲಿನಿಂದ ಬರುವಾಗ ಒಂದು ದೊನ್ನೆಯಲ್ಲಿ ' ಗುಲಾಬ್ ಜಾಮುನ್' ತಂದಿದ್ದರು, ಅದನ್ನೂ ಕೊಟ್ಟರು

ಈ ಬಗೆಯ ವ್ಯವಹಾರವು ಶ್ಯಾಮಕಲೆಗೆ ಸೇರುತ್ತಿರಲಿಲ್ಲ. ' ಗುಲಾಬ್ ಜಾಮುನ್ ' ನೋಡಿ " ನನಗೆ ಯಾವಾಗಲೂ ಹಸಿವೆಯಾಗಿರುತ್ತದೆಯೆಂದು ತಿಳಿದುಕೊಂಡಿರುವಿರೇನು ? " ಎಂದಳು

" ಇಲ್ಲ ಇಲ್ಲ ಪ್ರಿಯೆ, ಈ ಸಲ ಬಂಗಾಲ್ ದೇಶದಿಂದ ನಿನಗೆ ಸಂದೇಶ್ ತರಿಸಿಕೊಡುತ್ತೇನೆ. ಈ ಗುಡ್ಡಗಾಡಿನ ಹುಡುಗ ಅಡಿಗೆ ಚೆನ್ನಾಗಿ ಮಾಡುವುದಿಲ್ಲ ನನಗೇನು? ಹೇಗಿದ್ದರೂ ನಡೆಯುತ್ತದೆ. ನಿನಗೆ ಏನೇನು ಬೇಕಾಗುತ್ತದೋ ನನಗೆ ಹೇಳು, ತರಿಸಿಕೊಡುತ್ತೇನೆ ಈ ಅಡಿಗೆ ನಿನಗೆ ಸೇರುತ್ತದೆಯೇನು ? "

“ ನನಗೆ ಏನೇನೂ ಬೇಕಾಗಿಲ್ಲ ”

ಇಂತಹ ಮಾತುಗಳನ್ನು ಕೇಳಿದಾಗ ಮಹಾಮಹಿಮರಿಗೆ ಸಂತೋಷವೆನಿಸುವುದಿಲ್ಲ ‘ ತನ್ನ ಹೆಂಡತಿಯು ತನಗೆ ಬೇಕಾದ ವಸ್ತುಗಳನ್ನು ಬೇಡಬೇಕು, ತಾನು ಅವುಗಳನ್ನು ಆಕೆಗೆ ಯಥಾಶಕ್ತಿ ಪೂರೈಸಬೇಕು ’ ಎಂದಿಷ್ಟೆ ಅವರ ಬಯಕೆ ತಮ್ಮ ಕಾರ್ಯಗಳಿಂದ ತಾವು ಶ್ಯಾಮಕಲಯನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಿದ್ದೇವೆಂದು ತೋರಿಸಿಕೊಡಬೇಕೆಂಬ ಇಚ್ಛೆಯು ಅವರಿಗೆ ಇದ್ದಿತು

ವಾಸ್ತವವಾಗಿ ಶ್ಯಾಮಕಲೆಯು ಮಹಾಮಹಿಮರ ಜೀವನದಲ್ಲಿ ಬೆರೆತುಹೋಗಿದ್ದಾಳೆ ಆದುದರಿಂದ ಅವಳ ನಿಜವಾದ ಕೊರತೆಯ ಕಡೆಗೆ ಅವರ ಕಲ್ಪನೆಯು ಹರಿಯುವುದೇ ಇಲ್ಲ, ಎಂತಲೇ ಅವಳಿಗಾಗಿ ತಾನು ಮಾಡಬೇಕಾದುದೇನು ಎನ್ನುವುದರ ಕಡೆಗೆ ಅವರ ಲಕ್ಷ್ಯವೇ ಇಲ್ಲ ಶ್ಯಾಮಕಲಯು ತಮ್ಮಿಂದ ಇನ್ನೇನನಾದರೂ ಅಪೇಕ್ಷಿಸುತ್ತಾಳೆ, ಇನ್ನಾವುದಕ್ಕಾದರೂ ಪ್ರಾರ್ಥಿಸುತ್ತಾಳೆ--ಎಂಬುದನ್ನು ತಿಳಿದುಕೊಳ್ಳಲು ಅವರಿಗೆ ಅವಕಾಶವು ದೊರೆಯಲಿಲ್ಲ ಅವಳು ತನಗೆ ಸುಲಭವಾಗಿ ಸಿಕ್ಕಿದುದರಿಂದ ಅವಳು ತನ್ನ ಜೀವನದಲ್ಲಿ ಒಬ್ಬಳು ಇದ್ದಾಳೆಯೆನ್ನುವುದೂ ಅವರಿಗೆ ತಿಳಿಯದಾಗಿದೆ

ಸೊಂಟದಲ್ಲಿ ಒಂದಿಲ್ಲೊಂದು ನೋವಾದಾಗ ಮಾತ್ರ ಆ ಸೊಂಟದ ಅಸ್ತಿತ್ವದ ಅರಿವು ನಮಗಾಗುತ್ತದೆ ಸ್ವಸ್ಥವಾಗಿದ್ದಾಗ ನಮ್ಮ ಸೊಂಟವೂ ನಮ್ಮೊಡನೆ ಇದೆಯೆಂದು ನಮಗೆನಿಸುವುದಿಲ್ಲ, ಹೀಗೆಯೆ ನಮ್ಮ ಜೀವನವು ಸಾಗಿ ಹೋಗುತ್ತಿರುತ್ತದೆ ಎಂದಾದರೂ ಒಂದು ದಿನ ಸೊಂಟದಲ್ಲಿ ನೋವು ಉಂಟಾಗಿ, ನಮ್ಮ ತೀರ ಹತ್ತಿರದಲ್ಲಿಯೆ ನಮ್ಮ ಸೊಂಟವೂ ಇದೆಯೆಂಬುದರ ಅರಿವನ್ನುಂಟು ಮಾಡಿಕೊಡುವುದು

ಮಾಸ್ತರಜೀಯವರು ಸ್ಕೂಲು ಬಿಟ್ಟು ಬಂದ ಮೇಲ ಪ್ರಯತ್ನಪೂರ್ವಕವಾಗಿ ಪತ್ನಿಯೊಡನೆ ಮಾತನಾಡಿ, ಮನಸ್ಸನ್ನು ಸಂತೋಷಪಡಿಸಿಕೊಂಡು, ಮರಳಿ ತಮ್ಮ ಕಾರ್ಯದಲ್ಲಿ ಮಗ್ನರಾಗುತ್ತಾರೆ ಸ್ಕೂಲಿನ ಪುಸ್ತಕ, ಸ್ಕೂಲಿನ ಹುಡುಗರು ಇದರಲ್ಲಿಯೇ ಅವರು

ತಮ್ಮ ಹೆಚ್ಚು ಸಮಯವನ್ನು ಕಳೆಯುತ್ತಾರೆ ಆಳುಮಗ, ವಯಸ್ಸಿಗೆ ಬಂದ ಹೆಂಡತಿ ಮನೆಯಲ್ಲಿರುವರೆಂದಮೇಲೆ ಮನೆಯ ಚಿಂತೆಯು ಅವರಿಗೆ ಏತಕ್ಕಿರಬೇಕು? ಏನು ಬೇಕಾದುದು ಆಗಲಿ, ಮಹಾಮಹಿಮರು ಸಮಯಕ್ಕೆ ಸರಿಯಾಗಿ ಸ್ಕೂಲಿಗೆ ಹೋಗುತ್ತಾರ, ಸ್ಕೂಲಿಗೆ ರಜೆಯಾದ ಮೇಲೆ ಸಾಯಂಕಾಲ ಮನೆಗೆ ಬಂದು ಪುಸ್ತಕ-ಗಳನ್ನು ಎದುರಿಗಿಟ್ಟುಕೊಂಡು ಕುಳಿತುಕೊಳ್ಳುತ್ತಾರೆ ಬೆಳಗಿನಲ್ಲಿಯೂ ಹತ್ತು ಗಂಟೆಯು ವರೆಗೆ ಪುಸ್ತಕಪಠನವೆ ಹುಡುಗರು ಹೊತ್ತಿಲ್ಲದ ಹೊತ್ತಿನಲ್ಲಿ ಮಾಸ್ತರರ ಮನೆಗೆ ಬಂದು, ಅವರಿಗೆ ಯಾಹಾಗಲಾದ-ರೊಮ್ಮೆ ಸಿಕ್ಕುವ ಬಿಡುವನ್ನೂ ಬಾಯಿಯಲ್ಲ ಹಾಕಿಕೊಂಡು ಬಿಡುತ್ತಾರೆ

ಆರೋಗ್ಯ ಚೆನ್ನಾಗಿದ್ದ ಮನುಷ್ಯನಿಗೆ ತನ್ನ ಅಂಗಾಂಗಗಳ ಅರಿವು ಹೇಗೆ ಇರುವುದಿಲ್ಲವೊ ಹಾಗೆಯೆ ಸ್ವಸ್ಥ ಪ್ರೇಮವಿದ್ದ ಮಹಾಮಹಿಮ-ರಿಗೆ ತಮ್ಮ ಗೃಹಸ್ಥಜೀವನದ ಆವಶ್ಯಕತೆಯ ಅರಿವೇ ಇದ್ದಿಲ್ಲ

ಅಧ್ಯಾಪನಕಾರ್ಯವನ್ನು ಮಾಡಲುತೊಡಗಿ ಹತ್ತುವರ್ಷ-ಗಳಾಗುತ್ತ ಬಂದುವು ಒಂದು ದಿನ ಮಾಸ್ತರಜಿಯವರು ಪಾಠಹೇಳಿ, ಮನೆಗೆ ಬಂದು ನೋಡಿದರು, ಮನೆಯಲ್ಲಿ ಯಾರೂ ಇರಲಿಲ್ಲ ಶ್ಯಾಮಕಲೆಯೂ ಇಲ್ಲ! ಆ ಗುಡ್ಡಗಾಡಿನ ಆಳುಮಗನೂ ಇಲ್ಲ!

*   *   *

ಆರು ತಿಂಗಳ ಪರೀಕ್ಷೆ ಸಮೀಪಿಸುತ್ತಿದ್ದಿತು ಆದೆಷ್ಟೋ ಹುಡುಗರು ಓದುವುದಕ್ಕೆ ಮಾಸ್ತರಜಿಯವರ ಮನೆಗೆ ಬರುತ್ತಿದ್ದರು ಆವೊತ್ತು ಮಾಸ್ತರರು ಉಂಡಿರಲಿಲ್ಲ ಊಟಮಾಡಬೇಕೆಂಬ ನೆನಪು ಕೂಡ ಆಗಿ-ರಲಿಲ್ಲ 'ಅಡಿಗೆಮಾಡಿದ ಮೇಲಲ್ಲವೆ ಊಟಮಾಡುವುದು?' ಎಂಬುದೂ ಹೊಳೆಯಲಿಲ್ಲ ಅವರು ತಮ್ಮ ಕಿರುಮನೆಯಲ್ಲಿ ಕುಳಿತಿದ್ದರು; ಕುಳಿತವರು ಅಲ್ಲಿಯೆ ಕುಳಿತುಕೊಂಡು ಬಿಟ್ಟರು ಸಮಯವು ಸಾಗಿದ್ದಿತು ಸಾಯಂಕಾಲವು ಸಮೀಪಕ್ಕೆ ಬರುತ್ತಿದ್ದಿತು ಆದರೂ ಅವರು ಕುಳಿತೇ-ಇದ್ದರು ಇಷ್ಟರಲ್ಲಿ "ಮಾಸ್ತರಜೀ, ಮಾಸ್ತರಜೀ!" ಎಂದು

ಕೂಗುತ್ತ ಗಲಾಟೆ ಮಾಡುತ್ತ ಬರುತ್ತಿರುವ ಹುಡುಗರ ಸೊಲ್ಲು ಕೇಳಿಸಿತು

" ಬನ್ರಿ, ಬನ್ರಿ " ಎನ್ನುತ್ತ ಕಂದಿಲು ಹಚ್ಚುವುದಕ್ಕೆ ಮಾಸ್ತರಜಿಯವರು ಎದ್ದರು

" ಮಾಸ್ತರಜೀ ಮಾಸ್ತರಜೀ ! " ಎನ್ನುತ್ತ ಎಲ್ಲ ಹುಡುಗರೂ ಒಳಕ್ಕೆ ಬಂದು " ಇದೇನು ಮಾಸ್ತರಜೀ ! ಬಹಳ ಕತ್ತಲೆಯಾಗಿ ಹೋಗಿದೆ, ಕಂದೀಲು ಎಲ್ಲಿದೆ ತನ್ರಿ ! ನಾವೇ ಹಚ್ಚುತ್ತೀವೆ " ಎಂದರು

" ಕಂದೀಲು ! ಅಡಿಗೆ ಮನೆಯಲ್ಲಿರಬಹುದು ನೋಡಿರಿ ! "

ಇಬ್ಬರು ಹುಡುಗರು ಅಲ್ಲಿಗೆ ಹೋದರು, ಉಳಿದ ಹುಡುಗರು " ಮಾಸ್ತರಜೀ, ಅಮ್ಮಾಜೀಯವರು ಎಲ್ಲಿಗೆ ಹೋಗಿದ್ದಾರೆ " ಎಂದರು

" ನಮ್ಮ ಆಳುಮಗನ ಕೂಡ ತವರುಮನೆಗೆ ಹೋಗಿದ್ದಾಳೆ "

" ಮಾಸ್ತರಜೀ, ನೀವು ಮೊದಲ ನಮಗೆ ಹೇಳಲಿಲ್ಲ, ನಾವೂ ಕಳಿಸಲಿಕ್ಕೆ ಹೋಗುತ್ತಿದ್ದೆವು ಸ್ವಲ್ಪ ದೂರ ಮನೆಗೆ ಬಂದು ಏನಾದರೂ ಕೆಲಸಮಾಡುತ್ತಿದ್ದೆವು "

" ನಾಳೆಗೆ ಹೇಳಬೇಕೆಂದು ಬಿಟ್ಟಿದ್ದೆ, ಆಕೆ ಬಹಳ ದುಷ್ಟಳಿದ್ದಾಳೆ! ನಾನು ಸ್ಕೂಲಿನಿಂದ ಬರುವ ಮೊದಲೆ ಹೋಗಿಬಿಟ್ಟಿದ್ದಾಳೆ! '

ಮಾಸ್ತರಜಿಯವರಿಗೆ ಯಾವ ಬಗೆಯ ತೊಂದರೆಯು ಆಗದಂತೆ ನೋಡಿಕೊಳ್ಳಬೇಕೆಂದು ಹುಡುಗರು ತಮ್ಮತಮ್ಮೊಳಗೇ ನಿಶ್ಚಯಿಸಿಕೊಂಡರು ನೀರು ಇರದಿದ್ದರೆ ತುಂಬಬೇಕೆಂದೂ, ಮತ್ತೇನಾದರೂ ಮಾಡುವುದಿದ್ದರೆ ಮಾಡಿಬಿಡಬೇಕೆಂದೂ ಗೊತ್ತುಮಾಡಿಕೊಂಡರು

ಕಂದೀಲು ಹುಡುಕಹೋದ ಹುಡುಗರು ಕಂದೀಲು ಹುಡುಕಿಕೊಂಡು ದೀಪಹಚ್ಚಿಕೊಂಡು, ಬಂದರು ಮಾಸ್ತರರು ಎಲ್ಲ ಹುಡುಗರನ್ನೂ ಕೂಗಿ ಕರೆದು "ಓದಿರಿ, ಓದಿರಿ ನಿಮ್ಮ ನಿಮ್ಮ ಪಾಠ" ಎಂದರು

ಒಬ್ಬ ಹುಡುಗ ಎಂದ " ಮಾಸ್ತರಜೀ ಅಮ್ಮಾ ಅವರು ಎಂದು ಬರುತ್ತಾರೆ? "

"ಹೇಳಲಿಕ್ಕಾಗದು. ನೀವು ಚೆನ್ನಾಗಿ ಓದಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಬೇಕು! ನಿಮ್ಮ ಪರೀಕ್ಷೆಗೆ ಎಷ್ಟು ದಿವಸ ಉಳಿದುವು ಇನ್ನು? ಎರಡು ವಾರಗಳಿಗಿಂತ ಹೆಚ್ಚಿಗೆ ಇರಲಿಕ್ಕಿಲ್ಲ. ನೀವು ಹೆಚ್ಚು ಗುಣಗಳನ್ನು ದೊರೆಸಿ ಉತ್ತೀರ್ಣರಾಗಬೇಕು. ನಮ್ಮ ಮನೆಯವರು ಹೋಗಿರುವುದರಿಂದ ನಾನೂ ನಿಮಗೆ ಬಹಳ ಹೊತ್ತು ಓದುಹೇಳುತ್ತೇನೆ. ಆದ್ದರಿಂದ ನೀವೆಲ್ಲರೂ ಚೆನ್ನಾಗಿ ಅಭ್ಯಾಸ-ಮಾಡಬೇಕು."

"ಮಾಸ್ಟರಜೀ, ನಾಳೆ ಮಧ್ಯಾಹ್ನ-ಸಾಯಂಕಾಲ ಎರಡೂ ಹೊತ್ತು ನಿಮಗೆ ಊಟಕ್ಕೆ ತರುತ್ತೇನೆ" ಎಂದ ಒಬ್ಬ.

"ಬೇಡ ಬೇಡ, ನಾನು ಅಡಿಗೆಮಾಡಿಕೊಳ್ಳುತ್ತೇನೆ."

"ಬೇಡಿ, ಬೇಡಿ! ನಾವು ತಂದುಕೊಡುತ್ತೇವೆ" ಹುಡುಗರು ಒಬ್ಬೊಬ್ಬರಾಗಿ ಆಮಂತ್ರಣಕೊಡುತ್ತಿದ್ದರು.

"ನಮ್ಮ ಮನೆಯವರು ಬಂದರೆ ಸಿಟ್ಟಾಗುವರು, 'ಇದನ್ನೇನು ಮಾಡಿದಿರಿ?' ಎಂದು ಕೇಳುವರು. ಇರಲಿ ನೀವು ಇನ್ನು ಓದಿರಿ."

ಪಾಠಕ್ಕೆ ಪ್ರಾರಂಭವಾಯಿತು. ಪಾಠವು ಸಾಗಿದಾಗ ಕಂದೀಲಿನೊಳಗಿನ ಎಣ್ಣೆ ತೀರಿದ್ದರಿಂದ ದೀಪ ಮಂದವಾಗತೊಡಗಿತು. ಹುಡುಗರೂ ನೋಡಿದರು. ಮಾಸ್ಟರರೂ ನೋಡಿದರು. "ಎಣ್ಣೆ ಹಾಕಿಸಿಕೊಂಡು ಬರುತ್ತೇನೆ, ಕೊಡಿರಿ ಇಲ್ಲಿ ಕಂದೀಲು!" ಎಂದ ಒಬ್ಬ ಹುಡುಗ.

ಇನ್ನೊಬ್ಬ ಕೇಳಿದ "ಮಾಸ್ಟರಜೀ, ಮನೆಯಲ್ಲಿ ಎಣ್ಣೆ ಇಲ್ಲೇನ್ರಿ?"

"ಎಣ್ಣೆ!" ಚಿಂತಾಗ್ರಸ್ತರಾಗಿ ನುಡಿದರು. ಮುಂದೆ ಅವರ ಬಾಯಿಂದ ಮಾತುಗಳೇ ಹೊರಡದಾದುವು.

ಮೊದಲಿನ ಹುಡುಗ ಮಾತನಾಡದೆ, ಕಂದೀಲು ಎತ್ತಿಕೊಂಡು ಎಣ್ಣೆ ಹಾಕಿಸಿಕೊಂಡು ಬರಲು ಪೇಟೆಗೆ ಹೊರಟ.

ಕಿರುಮನೆಯಲ್ಲಿ ಕತ್ತಲು ಕವಿಯಿತು. ಹುಡುಗರು ನಕ್ಕು ಗಲಾಟೆ ಮಾಡಲಾರಂಭಿಸಿದರು. ಮಾಸ್ಟರಜಿಯವರು ಆ ಕತ್ತಲಲ್ಲಿ

ಎಲ್ಲಿಯೊ ಕಳೆದುಹೋಗಿದ್ದರು ತಮ್ಮೊಳಗೂ ಹೊರಗೂ ಈಗ ಕತ್ತಲು ಇದೆಯೆಂದು ಎನಿಸಿತು ಆಗ ಹುಡುಗರೆಂದರು "ಮಾಸ್ತರಜೀ, ಅಮ್ಮನವರನ್ನು ಬೇಗನೆ ಕರೆಯಿಸಿಕೊಳ್ಳಿರಿ!"

ಮಾಸ್ತರರು ಕೇಳಿದರು, ಮಾತನಾಡಬೇಕೆಂದಿದ್ದನ್ನು ಅಲ್ಲಿಯೆ ನುಂಗಿದರು

ಇನ್ನೊಬ್ಬ ಹುಡುಗನೆಂದ "ಮಾಸ್ತರಜೀ, ಅಮ್ಮಾಜಿಯವರನ್ನು ದೀಪಾವಳಿಗೆ ಕರೆಯಿಸಿಕೊಳ್ಳಿರಿ ಇಂದು ಕತ್ತಲಾಗಿದೆ, ಅಂದು ಬೇಕಾದಷ್ಟು ದೀಪಹಚ್ಚುತ್ತೇವೆ ಮನೆತುಂಬ!"

ಮಾಸ್ತರರು ಕೇಳಿದರು, ಸುಮ್ಮಗಿದ್ದರು

"ಮಾಸ್ತರಜೀ, ನಮ್ಮ ಮಾತು ಕೇಳುವುದಿಲ್ಲೇನ್ರಿ? ದೀಪಾವಳಿಗೆ ನೀವು ಕರೆಯಿಸಿಕೊಳ್ಳಲಿಕ್ಕೇ ಬೇಕು!" ಎಂದ ಒಬ್ಬ ಹುಡುಗ "ಹೂಂ" ಎಂದರು ಮಾಸ್ತರರು ಮೆಲ್ಲಗೆ

"ಮಾಸ್ತರಜೀ, ಕತ್ತಲನ್ನು ಕಂಡರೆ ನಮಗೆಲ್ಲ ಹೆದರಿಕೆ ಬರುತ್ತದೆ ನಿಮಗೆ ಹೆದರಿಕೆಯಾಗುವುದಿಲ್ಲೇನ್ರಿ?"

"ಏ, ಸುಮ್ಮನೆ ಕುಳಿತುಕೊಳ್ಳಿರಿ! ಓದುವ ಮಾತನ್ನು ಆಡುವುದು ಬಿಟ್ಟು, ಅತ್ತ ಇತ್ತ ಕಡೆಯ ಮಾತಿಗೆ ಆರಂಭಿಸುತ್ತಿದ್ದೀರಿ!"

ಕಂದೀಲು ಬಂದಿತು ಓದು ಸುರುವಾಯಿತು ಆದರೆ ಇಂದು ಈ ಮನೆಯಲ್ಲಿ ಮಾಸ್ತರರ ಮನಸ್ಸು ನಿಲ್ಲಲೊಲ್ಲದು ಮಾಸ್ತರರೆಂದರು "ಕೇಳಿರೊ, ಈ ಮನೆ ನಿಮಗೆ ಬಹಳ ದೂರವಾಗುತ್ತದೆ, ಇದು ಸರಿಯಾಗುವುದಿಲ್ಲ ನಾಳೆ ನಾನು ನಿಮ್ಮ ಮನೆಗೇ ಓದುಹೇಳಲಿಕ್ಕೆ ಬರುತ್ತೇನೆ ಹೇಳಿರಿ, ಯಾರ ಮನೆ ಎಲ್ಲರಿಗೂ ಬರಲಿಕ್ಕೆ ಅನುಕೂಲವಾದೀತು?"

ಕೊನೆಗೆ ಒಬ್ಬ ಹುಡುಗನ ಮನೆಯನ್ನು ನಿಶ್ಚಯಿಸಿದರು ಮಾಸ್ತರರು "ಒಳ್ಳೆಯದು, ಇನ್ನು ನೀವು ಹೋಗಿರಿ ನಾಳೆ ನಾನೇ ಓದುಹೇಳಲಿಕ್ಕೆ ಬರುತ್ತೇನೆ" ಎಂದರು.

ಹುಡುಗರು ಪುನಃ ಆಗ್ರಹಮಾಡಲು ತೊಡಗಿದುವು "ಮಾಸ್ತರ್ಜೀ, ಅಮ್ಮಾಜಿಯವರನ್ನು ಬೇಗನೆ ಕರೆಯಿಸಿಕೊಳ್ಳಿರಿ, ದೀಪಾವಳಿಗೆ ಕರೆಯಿಸಲಿಕ್ಕೇ ಬೇಕು" ಮಾಸ್ತರರು "ಒಳ್ಳೆಯದು ಒಳ್ಳೆಯದು" ಎಂದರು ಹುಡುಗರು ನಗುತ್ತ ಆಡುತ್ತ ಹೊರಟುಹೋದರು

ಆ ಮೇಲೆ ಮಾಸ್ತರರು ಎದ್ದು ತಮ್ಮ ಇಡಿಯ ಮನೆಯನ್ನು ನೋಡಿದರು, ಹೆಂಡತಿಯು ಕೂಡ ಏನೇನು ಹೊರಟುಹೋಗಿದೆಯೆಂಬು-ದನ್ನು ನೋಡುವುದಕ್ಕಲ್ಲ, ಎಲ್ಲಿಯಾದರೂ ಕೋಪಿಸಿಕೊಂಡು ಮಲಗಿದ್ದಾಳೋ ಹೇಗೆಂಬುದನ್ನು ನೋಡುವುದಕ್ಕೆ ಆಕೆಯ ಒಂದು ಸೀರೆ ಒಂದು ಗೂಟಕ್ಕೆ ಒಣಗಹಾಕಿದ್ದಿತು, ಅದನ್ನು ಮಡಿಸಿ ಅದೇ ಗೂಟದ ಮೇಲೆ ಇಟ್ಟರು ದಿನಾಲು ಹೇಗೆ ಅದನ್ನು ಇಡಲಾಗುತ್ತಿ-ದ್ದಿತೊ ಹಾಗೆಯೆ ಇಟ್ಟು, ಮುಂಗಾಣದೆ ತಮ್ಮ ಕಿರುಮನೆಗೆ ಬಂದು ಮಂಚದ ಮೇಲೆ ಬಿದ್ದುಕೊಂಡರು ಮಲಗಬೇಕೆಂದು—

*　　*　　*

ಮನೆಯಾಕೆ ಮನೆಯನ್ನು ಯಾವ ಸ್ಥಿತಿಯಲ್ಲಿ ಬಿಟ್ಟುಹೋಗಿದ್ದಳೊ ಅದೇ ಸ್ಥಿತಿಯಲ್ಲಿಯೆ ಅದು ಇದ್ದಿತು ಮಹಾಮಹಿಮರು ಮನೆಯಲ್ಲಿಯ ಸಾಮಾನುಗಳನ್ನು ಎತ್ತಿ ಇಟ್ಟಿರಲಿಲ್ಲ, ಏಕೆಂದರೆ ಮನೆಯಾಕೆ ಹಿಂತಿರುಗಿ ಬಂದರೆ ಇಟ್ಟ ಸಾಮಾನುಗಳು ಇಟ್ಟಲ್ಲಿಯೆ ಆಕೆಗೆ ಸಿಕ್ಕಬೇಕೆಂದು ಮಾಸ್ತರರು ಈ ತಮ್ಮ ಹೆಚ್ಚು ವೇಳೆಯನ್ನು ಮನೆಯಲ್ಲಿ ಕಳೆಯದೆ, ಹುಡುಗರ ಮಧ್ಯದಲ್ಲಿ ಕಳೆಯುತ್ತಾರೆ ಮನೆಯು ತನ್ನ ಸ್ವಾಮಿನಿಯ ದಾರಿಯನ್ನು ಕಾಯುತ್ತ ನಿಂತಿದೆಯೋ ಏನೋ ಎನ್ನುವಂತೆ ಅದನ್ನು ಸರ್ವದಾ ಸ್ವಚ್ಛವಾಗಿಟ್ಟಿರುತ್ತಾರೆ ಹಗಲು, ರಾತ್ರಿ, ವೇಳೆ ದೊರೆತಾಗಲೆಲ್ಲ ಹುಡುಗರ ಮಧ್ಯದಲ್ಲಿಯೆ ಕಾಲ ಕಳೆಯಲು ಹೋಗುತ್ತಾರೆ

ಹುಡುಗರು ಒಂದು ದಿನ ರಾತ್ರಿ ಓದಲು ತೊಡಗಿದ್ದರು ಸಾಯಂಕಾಲ ಏಳರಿಂದಲೆ ಓದುತ್ತಿದ್ದರು ೯ ಗಂಟೆಯಾಗಿರಬಹುದು, ಅವರಿಗೆ ನಿದ್ದೆ ಬಂದಂತಾಯಿತು ಆಗ ಮಹಾಮಹಿಮರೆಂದರು "ನಿದ್ದೆ ಬರುತ್ತಿದೆಯೇನು? ಮಲಗಿರಿ! ನಾನು ಹೋಗುತ್ತೇನೆ……

ಭೂಗೋಲ! ಕಿತ್ತಳೆಹಣ್ಣಿನ ತೆ ಭೂಮಿಯು ಮುಂದಿಗೆ ಇದೆ ಓಹೋ, ನೀವು ತೂಕಡಿಸುತ್ತಿದ್ದೀರಿ, ಮಲಗಿರಿ, ನಾನು ಹೋಗುತ್ತೇನೆ" ಎಂದು ಮಾಸ್ಟರರು ಬಾಗಿಲಕಡೆಗೆ ಹೋಗುತ್ತಿದ್ದರು, ಮತ್ತೆ ಹೇಳುತ್ತಿದ್ದರು "ಕೇಳಿರಿ, ಈ ಪ್ರಾಂತ್ಯದಲ್ಲಿ ಯಾವ ಯಾವ ನದಿಗಳಿವೆ? ಗಂಗಾ, ಯಮುನಾ, ಘಾಘರಾ, ಚಂಬಲ್, ಬೇತವಾ, ಕೇನ್ ಇತಿಹಾಸದಲ್ಲಿ—" ಎನ್ನುತ್ತ ಕಿರುಮನೆಯೊಳಕ್ಕೆ ಹೋಗಿ ಮತ್ತೆ ಹಿಂತಿರುಗಿ ಬಂದು—"ಹಿಸ್ಟರಿಯಲ್ಲಿ ಆರ್ಯ ಜಾತಿಯ ಶಭ್ಯತೆಯ ಬಿಶಯದ ಬಿಷಯವನ್ನು ಚೆನ್ನಾಗಿ ಪಾರಮಾಡಬೇಕು ಯಾರು ಯಾರು ಭಾರತದ ಮೇಲೆ ದಾಳಿ ಮಾಡಿದರು? ಓಹೋ, ಮಲಗಿರಿ ಮಲಗಿರಿ, ನಾನು ಹೋಗುತ್ತೇನೆ "

ಬಾಗಿಲ ಕಡೆಗೆ ಹೋಗುತ್ತಿದ್ದರು, ಮತ್ತೆ ಇಂಗ್ಲಿಷ್ ಅಥವಾ ಭೂಗೋಲ, ಗಣಿತ ಅಥವಾ ಇತಿಹಾಸದ ಮುಖ್ಯ ಮುಖ್ಯ ವಿಷಯಗಳನ್ನು ಹೇಳುತ್ತ ಹಿಂತಿರುಗುತ್ತಿದ್ದರು ಅವರ ಮನಸ್ಸು ಹೀಗಾಗಲಿಕ್ಕೆ ಕಾರಣವಿಲ್ಲದಿಲ್ಲ, ಯಾವಾಗಲೂ ಮನೆಯ ಕಡೆಗೆ ಚಿಂತೆಯಿರುತ್ತಿದ್ದಿತು ಹುಡುಗರು ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕೆನ್ನುವುದರ ಕಡೆಗೂ ಸಾಕಷ್ಟು ಲಕ್ಷ್ಯವಿರುತ್ತಿದ್ದಿತು

ಈ ಪ್ರಕಾರವಾಗಿ ದಿನಗಳು ಕಳೆಯುತ್ತ ನಡೆದಿದ್ದುವು ದೀಪಾವಳಿಯು ಸಮೀಪ-ಸಮೀಪಿಸಿದಂತೆ ಅಮ್ಮಾಜಿಯವರನ್ನು ಕರೆಯಿಸಲಿಕ್ಕೆ ಆಗ್ರಹಮಾಡುತ್ತಿದ್ದರು ಹುಡುಗರು ಮಾಸ್ಟರರೂ ಹುಡುಗರಿಗೆ "ಹುಂ! ಹುಂ!" ಎಂದು ಹೇಳಿ ವಚನಬದ್ಧರಾಗಿದ್ದರು ಅಲ್ಲದೆ ಮಾವನ ಕಡೆಗೆ ಪತ್ರವನ್ನೂ ಬರೆದಿದ್ದೇನೆಂದು ಒಂದು ದಿನ ಹೇಳಿಬಿಟ್ಟಿದ್ದರು ಆದುದರಿಂದ ಹುಡುಗರು ದಿನಾಲು ಕೇಳುತ್ತಿದ್ದರು "ಮಾಸ್ಟರಜೀ, ಅಮ್ಮಾಜಿಯವರಿಂದ ಪತ್ರ ಬಂದಿತೇನ್ರಿ?"

"ಹುಂ ಬಂದಿದೆ! ಅಲ್ಲಿ ಎಲ್ಲರೂ ಕ್ಷೇಮವಾಗಿದ್ದಾರೆ ಆದರೆ ಬರುವ ಸುದ್ದಿಯನ್ನೇ ಆಕೆ ಬರೆದಿಲ್ಲ."

"ಮಾಸ್ಟರಜೀ, ದೀಪಾವಳಿಯ ದಿನ ಲಕ್ಷ್ಮೀಪೂಜೆಯಾಗುತ್ತದೆ ಪನ್ನಾ, ಚುನ್ನೀ, ರಾಮಸಿಂಹ ಇವರೆಲ್ಲ ನಿಮ್ಮನ್ನು ಬಹಳ ನೆನಸುತ್ತಾರೆಂದು ಅಮ್ಮಾಜಿಯವರಿಗೆ ಪತ್ರ ಬರೆಯಿರಿ—"

"ನಾನೂ ರಿ"

"ನಾನೂ ರಿ"

ಉಳಿದ ಹುಡುಗರೂ ಗಲಾಟೆ ಮಾಡಲಾರಂಭಿಸಿದರು—

ಮಾಸ್ಟರರು "ಆಗಲಿ, ಆಗಲಿ!" ಎಂದರು

ಒಂದು ದಿನ ಮಾಸ್ಟರಜಿಯವರಿಗೆ, ದೀಪಾವಳಿಗೆ ಬರಲು ಯತ್ನಿಸುತ್ತೇನೆ ದೂ ಹುಡುಗರೆಲ್ಲರಿಗೂ ನನ್ನ ವಾತ್ಸಲ್ಯವನ್ನು ತಿಳಿಸಿರೆಂದೂ ಪ್ರ್ಯಾಮಿಲಿತ ಬರೆದಿದ್ದಾಳೆಂದು ಹೇಳಬೇಕಾಯಿತು ಹುಡುಗರೆದುರು

ದೀಪಾವಳಿಯ ಮುನ್ನಾದಿನ ಹುಡುಗರಲ್ಲಿ ಬಹಳ ಉತ್ಸಾಹವಿದ್ದಿತು ಆದರೆ ಮಾಸ್ಟರಜಿಯವರ ಮನಸ್ಸು ಕುಗ್ಗತೊಡಗಿದ್ದಿತು ಹುಡುಗರು ಕೇಳುತ್ತಿದ್ದರು "ಮಾಸ್ಟರಜೀ, ನಾಳೆ ಅಮ್ಮಾಜಿಯವರು ಬರುತ್ತಾರಲ್ಲವೆ?" ಮಾಸ್ಟರರು ಒಮ್ಮೆ 'ಹೂಂ' ಎಂದೂ ಒಮ್ಮೆ 'ಇಲ್ಲ,' ಎಂದೂ ಬಹಳ ಸಲ 'ಹೇಳಲಾಗುವುದಿಲ್ಲ' ಎಂದೂ ಹೇಳುತ್ತಿದ್ದರು

ಹುಡುಗರು ಮನೆಯನ್ನು ಉಡುಗಿ ಸ್ವಚ್ಛಮಾಡಿದರು ದೀಪಾವಳಿಯ ದಿವಸ ಆಕೆ ಬರದಿದ್ದರೆ ತಾವೇ ಅವರನ್ನು ಕರೆದುಕೊಂಡು ಬರುವುದಕ್ಕೆ ಹೋಗುವೆವೆಂದು ಮಾಸ್ಟರಜೀ ಒಂದು ದಿನ ಹೇಳಿದ್ದರು ಹುಡುಗರೂ "ಮಾಸ್ಟರಜೀ, ನೀವು ಎಂದು ಹಿಂತಿರುಗಿ ಬರುತ್ತೀರಿ?" ಎಂದೂ ಕೇಳಿದ್ದರು ಮಾಸ್ಟರರು ಉತ್ತರಕೊಟ್ಟಿದ್ದರು "ನಮ್ಮ ಹೆಂಡತಿ ದೊಡ್ಡ ಮನೆತನದವಳು ಹಳ್ಳಿ ಆಕೆಯ ಮನಸ್ಸಿಗೆ ಬರುವುದಿಲ್ಲ ನಾನು ಹೋದರೆ, ತಿರುಗಿ ಬರುವುದಿಲ್ಲ, ಕಲ್ಕತ್ತೆಯಲ್ಲಿಯೆ ಇದ್ದು ಬಿಡುತ್ತೇನೆ ಅಲ್ಲಿ ನನ್ನ ಹೆಂಡತಿಯ ಮನಸ್ಸು ಬಹಳ ಹರ್ಷಿತವಾಗಿರುತ್ತದೆ"

'ಅಮ್ಮಾಜಿಯವರು ಬರದಿದ್ದರೂ ಪರವಾ ಇಲ್ಲ, ಮಾಸ್ಟರರು ಮಾತ್ರ ಹಿಂತಿರುಗಿ ಬರಲೇಬೇಕು' ಎಂದು ಹುಡುಗರೆಲ್ಲ ಮನೆಯನ್ನು ಅತ್ಯಂತ ಸ್ವಚ್ಛವಾಗಿಡುವುದರಲ್ಲಿ ತೊಡಗಿದ್ದರು

ಇಂದು ದೀಪಾವಳಿಯ ಹಬ್ಬ! ಮಧ್ಯಾಹ್ನವಾಯಿತು, ಸಾಯಂಕಾಲವಾಗುತ್ತಿದೆ ಇನ್ನು ರಾತ್ರಿಯು ಬರುವುದು ಜನರು ದೀಪಗಳನ್ನು ಹಚ್ಚುವರು. ಸಾಲುದೀಪಗಳನ್ನು ಸಾಲುಸಾಲಾಗಿ ಹಚ್ಚಿ, ಬೆಳಕಿನಿಂದ ಝಗಝಗಿಸುವ ತಮ್ಮ ಮನೆಗಳಲ್ಲಿ ಲಕ್ಷ್ಮಿಯನ್ನು ಆಹ್ವಾನಿಸುವರು ಸಾಲುದೀಪಗಳು ಅಮಾವಾಸ್ಯೆಯನ್ನು ನಿರ್ಮೂಲ ಮಾಡಿ ಮನೆಮನೆಯಲ್ಲಿ, ನಗರನಗರಗಳಲ್ಲಿ, ಜ್ಯೋತಿಯನ್ನು ಹರಡುವುವು ಜನರು ಒಬ್ಬರನ್ನೊಬ್ಬರು ಭೆಟ್ಟಿಯಾಗುವರು ಹುಡುಗರು ಆಡುವರು ಮಿಠಾಯಿಗಳನ್ನು ಹಂಚಲಾಗುವುದು ಎಲ್ಲೆಲ್ಲಿಯೂ ಮಂಗಲವು ಕಾಣುವುದು ಋತುವು ಬದಲಾಗುವುದು ಹರುಷದ ಹೊನಲು ಹರಿಯುವುದು

ಇವೆಲ್ಲವುಗಳನ್ನೂ ಮಾಸ್ಟರಜಿಯವರ ಮನೆಯಲ್ಲಿಯೂ ಒದಗಿಸುವಂತೆ ಹುಡುಗರು ವ್ಯವಸ್ಥೆಮಾಡಿರುವರು ಹಣತೆಗಳನ್ನೂ ಸಾಲುದೀಪಗಳನ್ನೂ, ನೀರಾಜನಗಳನ್ನೂ ತಂದಿದ್ದಾರೆ ಅವುಗಳಲ್ಲಿ ಬತ್ತಿಗಳನ್ನು ಇರಿಸಿದ್ದಾರೆ ಎಣ್ಣೆಯನ್ನೂ ತಂದಿದ್ದಾರ ಎಲ್ಲೆಲ್ಲಿ ಎಷ್ಟೆಷ್ಟು ದೀಪಗಳನ್ನು ಹಚ್ಚಬೇಕೆಂಬುದನ್ನೂ ನಿರ್ಧರಿಸಿಬಿಟ್ಟಿದ್ದಾರೆ ಎಲ್ಲ ಕೆಲಸವನ್ನೂ ಹುಡುಗರೇ ಮಾಡುತ್ತಿದ್ದಾರೆ ಮಾಸ್ಟರರು ಬರಿ ಒಪ್ಪಿಗೆಯನ್ನು ಕೊಡುತ್ತಲಿದ್ದಾರೆ ಒಬ್ಬ ಹುಡುಗ ಬಂದು "ಮಾಸ್ಟರಜೀ, ಆ ಕಿರುಮನೆಯ ಗೂಡಿನಲ್ಲಿ ಎರಡೆರಡು ಹಣತೆಗಳನ್ನು ಇಡೋಣವಲ್ಲವೇ?" ಎಂದು ಕೇಳಿದ ಮಾಸ್ಟರರು "ಸರಿ" ಎಂದು ಒಪ್ಪಿಗೆ ಕೊಟ್ಟರು ಇನ್ನೊಬ್ಬ ಬಂದು "ನಾಲ್ಕು ನಾಲ್ಕು ಇಟ್ಟರೆ ಚೆನ್ನು" ಎಂದ "ಹಾಗೇ ಮಾಡಿರಿ" ಎಂದರು ಮಾಸ್ಟರರು

ಹುಡುಗರ ಉತ್ಸಾಹದಲ್ಲಿ ಮಾಸ್ಟರಜಿಯವರೂ ಉತ್ಸಾಹವನ್ನು ಅನುಭವಿಸುತ್ತಿದ್ದಾರೆ. ಒಬ್ಬ ಹುಡುಗ ಕೇಳಿದ "ಇದುವರೆಗೆ

ಹುಡುಗರು ಅದನ್ನೇ ತೆಗೆದುಕೊಂಡು ಒಂದು ಎತ್ತರವಾದ ಆಸನದ ಮೇಲೆ ಇಟ್ಟರು, ಅದಕ್ಕೆ ಮಾಲೆಯನ್ನು ಹಾಕಿದರು ಬಳಿಯಲ್ಲಿ ಒಂದು ರೂಪಾಯಿ ಇಟ್ಟು, ತುಪ್ಪದ ದೀಪವನ್ನೂ ಹಚ್ಚಿ ಇಟ್ಟರು ಆ ಮೇಲೆ ಮನೆಗೆ ಹೋಗಲು ಅಪ್ಪಣೆ ಕೇಳುವುದಕ್ಕಾಗಿ ಮಾಸ್ತರರ ಹತ್ತಿರ ಬಂದು "ಮಾಸ್ತರಜೀ, ಇನ್ನು ನಾವು ಹೋಗೋಣವೇ ?" ಎಂದು ಕೇಳಿದರು

ಮಾಸ್ತರರು ಗದ್ಗದಿತರಾದರು ಅವರು ಇಷ್ಟೆ ಎಂದರು. "ಒಳ್ಳೆಯದು!"

"ಮಾಸ್ತರಜೀ, ನಾಳೆ ದೊಡ್ಡ ದೀಪಾವಳಿ, ಅಮ್ಮಾಜಿಯವರು ನಾಳೆಗೆ ಬರುವರಲ್ಲವೇನ್ರಿ ?" ಎಂದು ಕೇಳಿದರು ಹುಡುಗರು

"ಬರಬಹುದು!"

ಹುಡುಗರು ಹೊರಟುಹೋದರು ಮಹಾಮಹಿಮರು ನೀಳವಾದ ಉಸಿರೊಂದನ್ನು ಬಿಟ್ಟು, ಮಾಲೆಹಾಕಿ ಉಚ್ಚಸ್ಥಾನದಲ್ಲಿಟ್ಟಿದ್ದ ತಮ್ಮ ಹೆಂಡತಿಯ ಚಿತ್ರದ ಹತ್ತಿರ ಬಂದರು. ಆ ಚಿತ್ರದ ಚರಣಗಳ ಬಳಿ ತುಪ್ಪದ ದೀಪವೊಂದು ಉರಿಯುತ್ತಿದ್ದಿತು ಅದೇ ಕಿರುಮನೆಯ ಗೂಟಕ್ಕೆ ತೂಗುಹಾಕಿದ ತಮ್ಮ ಹೆಂಡತಿಯ ಸೀರೆ-ಬಟ್ಟೆಗಳು ಗೋಚರವಾದುವು ಆಗ ಅವರ ಮನಸ್ಸು ಯಾರ ಮೇಲೂ ದೋಷಾ-ರೋಪಣ ಮಾಡಬೇಕೆಂದು ಬಯಸುತ್ತಿರಲಿಲ್ಲ ತಮ್ಮ ಬಳಿಯಲ್ಲಿಯೆ ಸ್ವಲ್ಪ ದೂರದಲ್ಲಿದ್ದ ಹಾಸಿಗೆಯೂ ಆ ತೂಗುಹಾಕಿದ ಸೀರೆಯೂ ನಿಷ್ಪ್ರಯೋಜಕವಾಗಿವೆ. ಎನಿಸುತ್ತಿದ್ದಿತು ಅವರಿಗೆ ಆ ಸೀರೆಯನ್ನು ಒಂದೆಸವನೆ ನೋಡುತ್ತ, ಮಾಸ್ತರಜಿಯವರು ಮಂಚದ ಮೇಲೆ ಕುಳಿತುಕೊಂಡರು. ದೀಪಗಳು ಒಂದೊಂದಾಗಿ ಆರಿಹೋಗುವುದನ್ನು ನೋಡುತ್ತಿದ್ದರು ಅವು ಒಂದೊಂದಾಗಿ ನಂದುತ್ತ ನಡೆದಿದ್ದುವು ಆದರೆ ಒಂದೆ ಒಂದು ತುಪ್ಪದ ದೀಪವು, ಅಕಂಪಿತ ಹೃದಯದ ಸ್ನೇಹದಿಂದ ಉರಿಯುತ್ತಿರುವ ದೀಪವು, ಆ ದಂಪತಿಗಳ ಚರಣಗಳ ಬಳಿ ಪ್ರಕಾಶವನ್ನು ಹರಡುತ್ತ ಬೆಳಗುತ್ತಿದ್ದಿತು. ಮಹಾಮಹಿಮರು ಅದನ್ನೆ ಒಂದೆಸವನೆ ನೋಡುತ್ತ ಹಾಗೆಯೆ ಕುಳಿತಿದ್ದರು ಈವೊತ್ತು

ಅವರು ಬಾಗಿಲನ್ನು ಮುಚ್ಚಲಿಲ್ಲ, ತೆರೆದೇ ಇಟ್ಟರು ಮೆಲ್ಲಮೆಲ್ಲನೆ ರೆಪ್ಪೆಗಳು ನೋಟವನ್ನು ಮರೆಮಾಡಲಾರಂಭಿಸಿದ್ದುವು; ಇಷ್ಟರಲ್ಲಿ ಯಾರೋ ಮನೆಯ ಒಳಕ್ಕೆ ಬಂದಹಾಗೆ ಎನಿಸಿತು ಅವರಿಗೆ ಆದರೆ ಇಲ್ಲ, ಯಾರೂ ಬಂದಿರಲಿಲ್ಲ! ಮಾಸ್ಟರರು ಸರಿಯಾಗಿ ಕಣ್ತೆರೆದು ಕುಳಿತರು ಹೊರಗಿನ ದೀಪಗಳು ನಂದಿಹೋಗಿದ್ದುವು, ನಿಬಿಡವಾದ ಅಂಧಕಾರದ ರಾತ್ರಿಯು ತನ್ನ ರಾಜ್ಯವನ್ನು ಬೆಳೆಯಿಸಿದ್ದಿತು ಮತ್ತೆ ಮೆಲ್ಲಮೆಲ್ಲಗೆ ಅವರ ಕಣ್ಣುಗಳು ಮುಚ್ಚಲು ತೊಡಗಿದುವು ಇಂದಿನ ಈ ರಾತ್ರಿಯನ್ನು ನಾಳೆಯ ರಾತ್ರಿಯೊಂದಿಗೆ ಕೂಡಿಸಬೇಕೆಂದು ಅವರ ಬಯಕೆ ಎಚ್ಚತ್ತೇ ಇರಬೇಕೆಂದು ಅವರ ಬಯಕೆ ಒಮ್ಮೆಲೆ ಬೆಚ್ಚಿಬಿದ್ದವರಂತಾಗಿ ಎಚ್ಚತ್ತರು ಸಣ್ಣಗಾಗುತ್ತ ನಡೆದ ಆ ತುಪ್ಪದ ದೀಪವು ತೀರ ಆರುತ್ತಿರುವಂತೆ ಕಂಡಿತು ಎರಡು ತಿಥಿಗಳ ಸಂಧಿಯಲ್ಲಿ, ಸರಿಯಾಗಿ ಮಧ್ಯರಾತ್ರಿಯಲ್ಲಿ ಲಕ್ಷ್ಮಿಯು ಪ್ರವೇಶಿಸುವ-ಳೆಂದು ಅವರು ಕೇಳಿದ್ದರು ಲಕ್ಷ್ಮಿಯು ಬಂದರೆ ಮನೆಯು ಪ್ರಕಾಶಮಯವಾಗಿ ತೋರಬೇಕು! ಆದುದರಿಂದ ಮಹಾಮಹಿಮರು ಎದ್ದು, ಆ ದೀಪದ ಬತ್ತಿಯನ್ನು ಮುಂದೆ ಚಾಚಿ, ದೊಡ್ಡದನ್ನಾಗಿ ಮಾಡಿದರು ಬೆಳಕು ಉಜ್ವಲತರವಾಯಿತು ಪುನಃ ಬಂದು ಮಂಚದ ಮೇಲೆ ಕುಳಿತರು ಮತ್ತೆ ಮೆಲ್ಲಮೆಲ್ಲಗೆ ರೆಪ್ಪೆಗಳ ಮೇಲೆ ಸ್ವಪ್ನಗಳು ಇಳಿಯತೊಡಗಿದುವು ಅವರು ಮೆಲ್ಲಮೆಲ್ಲಗೆ ಮೃದುತಲ್ಪದ ಮೇಲೆ ಪವಡಿಸಿದರು

ಹೊರಗಿನ ಕಟ್ಟೆಯ ಮೇಲೆ ಕತ್ತಲಲ್ಲಿ ಮುದುಡಿಕೊಂಡು ಕುಳಿತ ಹೆಂಗುಸಿಗೆ ಈಗ ಸ್ವಲ್ಪ ಧೈರ್ಯಬಂದಿತು ಇಲ್ಲದೆ ಹೋಗಿದ್ದರೆ ಅವಳಿಗೆ ಧೈರ್ಯವೆ ಉಂಟಾಗುತ್ತಿರಲಿಲ್ಲ, ಸುತ್ತಲಿನ ಪ್ರಕಾಶವು ತನ್ನನ್ನು ಕಚ್ಚಲು ಓಡಿ ಬರುತ್ತಿರುವಂತೆ ಕಂಡಿದ್ದಿತವಳಿಗೆ ಪೂರ್ತಿ-ಯಾಗಿ ಅಡಗಿಸುವುದಕ್ಕೆ ಸಾಲುವಷ್ಟು ಅಂಧಕಾರವು ಸಿಕ್ಕುತ್ತಿದ್ದಿಲ್ಲ ಆ ಹೆಂಗುಸಿಗೆ. ಇದುವರೆಗೆ ಹೊಸ್ತಿಲ ಹೊರಗೆ ಕತ್ತಲಲ್ಲಿ ಹೇಗೊ ಜೀವಿಸಿಕೊಂಡಿದ್ದಳು. ಬೆಳಕಿಗೆ ಬಿದ್ದಿದ್ದರೆ ... ! ಅಬ್ಬಬ್ಬಾ! ಅವಳ ಗತಿಯೇನಾಗುತ್ತಿದ್ದಿತೊ! ಮಹಾಮಹಿಮರು ಮಲಗಿದ್ದ

ಕಿರುಮನೆಯಲ್ಲಿ ಕಾಲಿಡಲು ಅವಳಿಗೆ ಧೈರ್ಯವಾಗಲಿಲ್ಲ ಏಕೆಂದರೆ ಮಹಾಮಹಿಮರು ನಿದ್ರಿಸುತ್ತಿದ್ದರೂ ದೀಪವು ಜಾಗೃತವಾಗಿದ್ದಿತು ಹೃದಯದಲ್ಲಿ ಗ್ಲಾನಿಯಿರುವಾಗ ಪ್ರಕಾಶದ ಒಂದು ಕಿರಣವೂ ಬಾಣದಂತೆ ಇರಿಯುವುದು ಆದುದರಿಂದ ಆ ಹೆಂಗುಸು ಆ ದೀಪವನ್ನು ನಂದಿಸಬೇಕೆಂದು, ಮೆಲ್ಲಗೆ ತುದಿಗಾಲಿನಿಂದ ಅದರ ಕಡೆಗೆ ಹೋದಳು ಬಳಿಕ ಆ ಕತ್ತಲಲ್ಲಿ ಮಹಾಮಹಿಮರ ಚರಣಗಳನ್ನು ಹಿಡಿದು, ನಿಶೀಥವನ್ನು ಸೀಳುವಂತೆ 'ಒಡೆಯ!' ಎಂದು ಕೂಗಬೇಕೆಂದು ಭರದಿಂದ ಮುಂದುವರಿದಳು

ದೀಪವನ್ನು ಊದಿ ಆರಿಸಬೇಕೆಂದು ಮುಖವನ್ನು ಮುಂದೆ ಮಾಡಿದಾಗ, ಆ ದೀಪವು ತಮ್ಮಿಬ್ಬರ ಚರಣಗಳಿಗೆ ಆರತಿ ಬೆಳಗು-ತ್ತಿರುವುದನ್ನು ಕಂಡಳು ಅವಳ ಅಂತಃಕರಣದಲ್ಲಿ ಅದೊಂದು ಬಗೆಯ ವೇದನೆಯುಂಟಾಯಿತು ಎದೆಯನ್ನು ಹಿಸುಕಿಕೊಂಡಳು, ದೀಪವನ್ನು ಆರಿಸಲಿಲ್ಲ; ಚಿತ್ರದ ಎದುರಿನಲ್ಲ ಪ್ರತಿಮೆಯಂತೆ ಸ್ತಬ್ಧಳಾಗಿ—ಸ್ಥಿರಳಾಗಿ—ನಿಂತುಬಿಟ್ಟಳು ಹೃದಯವನ್ನು ಕಲ್ಲು-ಮಾಡಿ ಮಲಗಿದ್ದ ವ್ಯಕ್ತಿಯ ಕಡೆಗೆ ಸಾಗಿದಳು ಸಾವಧಾನದಿಂದ ಮಹಾಮಹಿಮರ ಅಡಿಗಳನ್ನು ಹಿಡಿದಳು ಬಳಿಕ ತನ್ನ ತಲೆಯನ್ನು ಗಟ್ಟಿಯಾಗಿ ಅವುಗಳಿಗೆ ತಾಗಿಸತೊಡಗಿದಳು

ಮಹಾಮಹಿಮರು ಅದಾವ ಸ್ವಪ್ನವನ್ನು ನೋಡುತ್ತಿದ್ದ-ರೇನೋ! ಒಮ್ಮೆಲೆ ಎದ್ದು "ಎಶೆಛಿಸ್ ಮಾಂ ಲಕ್ಷ್ಮೀ, ಆಶುಸ್ (ಬಂದೆಯೇನಮ್ಮಾ ಲಕ್ಷ್ಮೀ, ಬಾ!)" ಎಂದರು

ಆ ಹೆಂಗುಸು ಇನ್ನಿಷ್ಟು ಬಲವಾಗಿ, ಮಹಾಮಹಿಮರ ಪಾದ-ಗಳನ್ನು ಹಿಡಿದುಕೊಂಡು, ಬಿಕ್ಕಿಬಿಕ್ಕಿ ಅಳಲುತೊಡಗಿದಳು

ಮಹಾಮಹಿಮರು ಎರಡೂ ಕೈಗಳಿಂದ ಅವಳನ್ನು ಹಿಡಿದೆಬ್ಬಿಸಿ ಹಾಸಿಗೆಯ ಮೇಲೆ ಕುಳ್ಳಿರಿಸಿ "ಲಕ್ಷ್ಮೀ, ಜಖನ್ ಎಶೆಂಛೆಸ್, ತಬೆ ಫಿರೇ ಜೇತೆ ಪಾರಿಬೆನ್ ನಾ ಆಲೋನಿಬಿಯೇ ದಿಚ್ಛಿ, ಕೇಮನ್ ಕರೇ ಜಾಬೆನ್? (ಲಕ್ಷ್ಮೀ, ಬಂದುಬಿಟ್ಟದ್ದೀಯಾ, ಇನ್ನು ನೀನು

ಮರಳಿ ಹೋಗಲಾರೆ, ದೀಪವನ್ನು ಆರಿಸಿಬಿಡುತ್ತೇನೆ, ಹೇಗೆ ಕೂಗುತ್ತೀಯೆ ?) " ಎಂದು ದೀಪವನ್ನು ಆರಿಸಿದರು

*　　　*　　　*

ಮರುದಿನ ಬೆಳಗಾಗುವ ಮೊದಲೆ ಮಹಾಮಹಿಮರು ಅಂಗಡಿಯ ಬಾಗಿಲು ತೆರೆಯಿಸಿ ಬಹಳಷ್ಟು ಮಿಠಾಯಿಯನ್ನು ಕೊಂಡುತಂದರು ಬಳಿಕ ಒಬ್ಬ ಹುಡುಗನ ಮನೆಗೆ ಹೋಗಿ ' ಓ ಚುನ್ನೀ, ಇನ್ನೂ ಮಲಗಿದ್ದೀಯೇನು ? ನಿಮ್ಮ ಸಲುವಾಗಿ ಮಿಠಾಯಿ ತಂದಿದ್ದಾಳೆ ! ' ಎಂದು ಎಬ್ಬಿಸಿದರು

ಮತ್ತೊಬ್ಬ ಹುಡುಗನ ಮನೆಗೆ ಹೋಗಿ "ಪ್ರೊನ್ನಾ ! ಪ್ರೊನ್ನಾ !! ಕೇಳೊ ! ನಿಮ್ಮ ಸಲುವಾಗಿ ಮಿಠಾಯಿ ತಂದಿದ್ದಾಳೆ ! " ಎಂದು ಪನ್ನಾಲಾಲನನ್ನು ಎಬ್ಬಿಸಿದರು

ಇದೇ ರೀತಿಯಾಗಿ ಮೂರನೆಯ ಹುಡುಗನ ಮನೆಗೆ, ನಾಲ್ಕನೆಯ ಹುಡುಗನ ಮನೆಗೆ ಹೋಗಿ ಹೋಗಿ "　　　" ಎಂದೆಂದು ಎಬ್ಬಿಸಿದರು

ಎಲ್ಲ ಹುಡುಗರೂ ಒಟ್ಟುನೇರಿದರು, ತಮ್ಮೊಳಗೆ ಮಾತನಾಡಿ-ಕೊಳ್ಳತೊಡಗಿದರು " ನಾಳೆ ಮಾಸ್ಟರಜಿಯವರ ಮನೆಯವರು ಬರುತ್ತಾರೆಂದು ಹೇಳಿದ್ದಿಲ್ಲವೆ ನಾನು ? "

ಎಲ್ಲ ಹುಡುಗರೂ ಮಾಸ್ಟರರ ಮನೆಗೆ ಹೋದರು ಮಾಸ್ಟರರ ಹೆಂಡತಿಯವರಿಗೆ ನಮಸ್ಕಾರ ಮಾಡಿದರು ಅವರು ತೀರ ಕ್ಷೀಣರಾದು-ದನ್ನು ನೋಡಿ " ಅಮ್ಮಾ, ನೀವು ನಿಮ್ಮ ಕಾಯಿಲೆಯ ವಿಷಯವಾಗಿ ನಮಗೆ ಯಾವ ಸುದ್ದಿಯನ್ನೂ ತಿಳಿಸಲಿಲ್ಲ ಅಕಸ್ಮಾತ್ ಬಂದುಬಿಟ್ಟಿರಿ, ಬರುವುದನ್ನು ಮೊದಲೇ ತಿಳಿಸಲಿಲ್ಲವೇಕೆ ? " ಎಂದರು

ಮಾಸ್ಟರರು ಹುಡುಗರಲ್ಲಿ ಬರ್ಫಿಗಳನ್ನು ಹಂಚಿದರು ಹುಡುಗರೆಲ್ಲರೂ ಖುಷಿಯಿಂದ ಹೇಳಿದರು " ಅಮ್ಮಾ, ನೀವು ನಿಮ್ಮ ದೇಶದ ಮಿಠಾಯಿಯನ್ನೇಕೆ ತರಲಿಲ್ಲ ? ಆ ರಸಗುಲ್ಲಾ ......

ಇನ್ನೊಂದು ನಿಮ್ಮ ದೇಶದ ಪ್ರಸಿದ್ಧ ಮಿಠಾಯಿ ಯಾವುದು? ಹಾಂ ಸಂದೇಶ! ಅದನ್ನು ತಂದಿದ್ದರೆ ಬಹಳ ಚೆನ್ನಾಗುತ್ತಿತ್ತು!"

ಮಾಸ್ಟರಜಿಯವರು ಕೂಡಲೆ ಹೇಳಿದರು "ನಿಮ್ಮ ದೇಶದ ಮಿಠಾಯಿ ತಂದಿದ್ದಾಳೆ ಕೋಲಿಕೋತಾದಲ್ಲಿ ಎಲ್ಲ ತರದ ಮಿಠಾಯಿ-ಗಳೂ ಸಿಕ್ಕುತ್ತವೆ ರೋಶಗುಲ್ಲಾ ನಿಮಗೆ ಸೇರುತ್ತದೇನು? ಇನ್ನೊಮ್ಮೆ ಹೋದಾಗ ಬಹಳ ರೋಶಗುಲ್ಲಾ ತರುತ್ತಾಳೆ"

ಈಗ ಮಾಸ್ಟರರ ಹೆಂಡತಿಯು ತನ್ನ ಕಂಬನಿಗಳನ್ನು ಅದು ಹೇಗೆ ತಡೆದುಕೊಂಡಿದ್ದಳೇನೋ!

*

## ನಾದಿರಾ    

ನಾನು, ಎಡ್ವೊಕೇಟ್ ಶಾಮಜೀ ನಾರಾಯಣರು ಮತ್ತು ಹೃದಯನಾಥರು ಮೂವರೂ ಕಾಶ್ಮೀರಕ್ಕೆ ಹೊರಟೆವು

ಶ್ಯಾಮಜೀಯವರು ಪ್ರತಿಷ್ಠಿತರು, ಶ್ರೀಮಂತರು ಹೃದಯನಾಥರೂ ಶ್ರೀಮಂತರು, ತೆರೆದ ಹೃದಯದವರು, ಬಿಚ್ಚುಗೈಯವರು

ರಾವಳಪಿಂಡಿಗೆ ಹೋದಮೇಲೆ ಈ ವರ್ಷ ಚಳಿ ಬಹಳ ಎನಿಸಿತು ಕಾಶ್ಮೀರಕ್ಕೆ ಈಗಲೆ ಹೋಗುವ ಹಾಗಿರಲಿಲ್ಲ, ಹಿಮ ಹೆಚ್ಚಾಗಿ ಬೀಳುತ್ತಿದ್ದಿತು

ಆಗ ಶ್ಯಾಮಜೀಯವರು 'ಇಲ್ಲಿಯೆ ಹದಿನೈದು ಇಪ್ಪತ್ತು ದಿವಸ ಇರೋಣ' ಎಂದರು ಅಟಕ, ತಕ್ಷಶಿಲಾ ಮೊದಲಾದ ಪ್ರಾಚೀನ ಕಾಲದ ಸ್ಥಳಗಳನ್ನೂ ನೋಡಲಿಕ್ಕೆ ಆಗುತ್ತಿದ್ದಿತು ತಕ್ಷಶಿಲೆಯಲ್ಲ ಭೂಮಿಯಲ್ಲಿ ಹೂತು ಹೋದ ನಗರವು ಈಗ ಹೊರಗೆ ಕಾಣುತ್ತಿದೆ ಐತಿಹಾಸಿಕ ಸಂಶೋಧನ ಮಂಡಳದವರು ಆ ನಗರವನ್ನು ಅಗಿಯಿಸಿ ಹೊರಕ್ಕೆ ತೆಗೆಯಿಸಿದ್ದಾರೆ

ಹಿಂದಿನ ಜನರ ಇತಿಹಾಸವೆಂದರೆ ನನಗೆ ಆಗುವುದಿಲ್ಲ ಈ ತಂಗುಳು ಇತಿಹಾಸದಿಂದ ಈಗ ನಮಗೇನು ಪ್ರಯೋಜನ? ಇತಿಹಾಸವನ್ನು ಓದಿ ಅದನ್ನು ತಮ್ಮ ಜೀವನಕ್ಕೆ ಸರಿಹೊಂದಿಸಿಕೊಳ್ಳುವವರು ಬಹಳ ಕಡಿಮೆ ಜನರು. ಪುರಾತನ ವಿಚಾರಗಳೊಡನೆ ಈಗಿನ ವಿಚಾರಗಳ ಸಂಬಂಧವನ್ನು ಜೋಡಿಸಲಿಕ್ಕೂ, ತುಲನೆ ಮಾಡುವುದಕ್ಕೂ ಕೆಲವರು ಇತಿಹಾಸವನ್ನು ಓದಿಕೊಳ್ಳುತ್ತಾರೆ ಇತಿಹಾಸವೆಂದರೇನು? ತಲೆಯಲ್ಲಿಯೆ ತುಂಬಿಕೊಂಡು ಇಟ್ಟುಕೊಳ್ಳುವಂತಹ ವಸ್ತುವೆ ಅದು? ಪಚನಮಾಡಿಕೊಳ್ಳಲು ಬರುವಂತಹ ವಸ್ತುವಲ್ಲವೆ ಅದು? ಅದು

ನಮ್ಮ ನಾಡಿನಾಡಿಗಳಲ್ಲಿ ಪಚನವಾಗಿ, ಹರಿದು ಜೀವನರಸದಲ್ಲಿ ಕೂಡಿ-ಕೊಳ್ಳುವಂತಹ ವಸ್ತುವಲ್ಲವೆ? ಇತಿಹಾಸದಲ್ಲಿ,—ಇತಿಹಾಸದ ಅಸ್ಥಿ-ಪಂಜರದಲ್ಲಿ—ಸಂಶೋಧನೆ ಮಾಡುವವರು, ಇತಿಹಾಸವನ್ನು ರಸಾನ್ನ-ವನ್ನಾಗಿ ಮಾಡಿಕೊಳ್ಳುವುದಿಲ್ಲ, ಅದನ್ನೊಂದು ಭಾರವಾದ ಹೊರೆ-ಯನ್ನಾಗಿ ಮಾಡಿಕೊಳ್ಳುತ್ತಾರ ಆಲ್‌ಮೀರಾಗಳಲ್ಲಿಯೂ ಮಿದುಳಿನ ಮೂಲೆಗಳಲ್ಲಿಯೂ ಕೂಡಿಹಾಕುವ ಶಾಸ್ತ್ರೀಯ ಪದಾರ್ಥವೇನೊ ಅದು! ಅವರು ಇತಿಹಾಸವನ್ನು ಪ್ರಮಾಣಭೂತವನ್ನಾಗಿ ಮಾಡದೆ ಪ್ರಮಾಣಭಾರವನ್ನಾಗಿ ಮಾಡುತ್ತಾರೆ ಇದರಿಂದ ಇತಿಹಾಸಜ್ಞರ ಕೂಡ, ಇತಿಹಾಸದ ವಿದ್ಯಾರ್ಥಿಗಳ ಕೂಡ ಒಗಳಕಾಯಬೇಕೆಂದೆನಿಸು-ತ್ತದೆ ನನಗೆ ಒಮ್ಮೊಮ್ಮೆ

"ಕಾಶ್ಮೀರದಲ್ಲಿ ಹಿಮವು ಬೀಳುತ್ತಿದ್ದರೆ, ಇನ್ನಿಷ್ಟು ಒಳ್ಳೆಯ-ದಾಯಿತು ನಾವು ಅಲ್ಲಿಗೇ ಹೋಗಬೇಕು ಆ ಹಿಮ ಬೀಳುವುದನ್ನು ಅಲ್ಲಿ ನೋಡಿದರೆ ಎಷ್ಟೊ ಸಂತೋಷ!" ಎಂದೆ ನಾನು

ಶ್ಯಾಮಜಿಯವರು ಮುಗುಳುನಗೆ ಬೀರಿದರು ಅವರ ಬುದ್ಧಿ-ವಂತಿಕೆಯು ನನ್ನ ಮಾತನ್ನು ಉಪೇಕ್ಷಿಸಿ ನಗುತ್ತಿದೆಯೊ ಎನ್ನುವಂತ ನನಗೆ ಕಂಡಿತು

"ಹೃದಯನಾಥಾ, ನೀವೇನೆನ್ನುತ್ತೀರಿ?" ಎಂದು ಕೇಳಿದ ನಾನು "ಹಿಮಾಲಯವು ತಕ್ಷಶಿಲೆಗಿಂತ ಪುರಾತನವಾದುದಲ್ಲವೆ? ಹಿಮಾಲಯದ ತಲೆಯಲ್ಲಿ, ದೇಹದಲ್ಲ, ಅದಕ್ಕೂ ಹೆಚ್ಚಾಗಿ ಹೃದಯ-ದಲ್ಲ ಇತಿಹಾಸಕ್ಕಿಂತಲೂ ಎಷ್ಟೋ ಗಂಭೀರವಾದ ರಹಸ್ಯವು, ವಿಲಕ್ಷಣ ವೈಚಿತ್ರ್ಯವು ಇರುವುದಲ್ಲವೆ? ನಾವು ಚಳಿಗೆ ಮತ್ತು ಹಿಮಕ್ಕೆ ಹೆದರು-ತ್ತೇವೆ ಪ್ರಕೃತಿಯ ಆ ಸ್ವರೂಪಕ್ಕೆ ಅಂಜಿ, ನಾವು ಎಂದೂ ನೋಡಲಾರದಂತಹ ರಹಸ್ಯಮಯವಾದ, ವಿರಾಟವಾದ ವಸ್ತುವನ್ನು ನೋಡದೆ ಇಲ್ಲೇ ತಕ್ಕಿರಬೇಕು?"

"ಹೋಗಲಿ ಬಿಡಿರಿ ಆ ಮಾತು ಶ್ಯಾಮಬಾಬೂ! ತಕ್ಷಶಿಲೆಗೂ ಹೋಗುವುದು ಬೇಡ, ಕಾಶ್ಮೀರಕ್ಕೂ ಹೋಗುವುದು ಬೇಡ. ಬೆಟ್ಟದ ಅಡಿಯಲ್ಲಿರುವ ಒಂದು ಹಳ್ಳಿಗೆ ಹೋಗೋಣ! ಬೈಲುಸೀಮೆಯಿಂದ

ದೂರದಲ್ಲಿದ್ದಂತೆಯೂ ಆಗುವುದು, ಬೆಟ್ಟದ ಬಳಿಯಲ್ಲಿ ವಾಸಮಾಡಿದಂತೆಯೂ ಆಗುವುದು ಚಳಿಯೆಂದರೆ ಚಳಿಯೆ! ಅದು ನಮ್ಮ ಮೈಗೆ ತಗಲದೆ ಬಿಡುವುದಿಲ್ಲವೆಂದಬಳಿಕ, ಕೇವಲ ಉತ್ಸುಕತೆಯಿಂದ ಅಲ್ಲಿಗೆ ಹೋಗಿ,ಚಳಿಯ ಕೊರೆತಕ್ಕೆ ಗುರಿಯಾಗುವುದೆಂದರೆ ಮೂರ್ಖತನವೆ ಸರಿ!'' ಎಂದರು ಹೃದಯನಾಥರು

"ನೀವೆಲ್ಲರೂ ಅಂಜುಬುರಕರು, ಪ್ರಕೃತಿಯು ಆಟವಾಡಬೇಕು! ಆಕೆಯ ಆಟದಲ್ಲಿ ನೀವೂ ಆಟವಾಡಲು ಸಮರ್ಥರಾಗುವಂತೆ ನಿಮ್ಮನ್ನು ಸಿದ್ಧಮಾಡಿಕೊಳ್ಳಬೇಕು, ಹೆದರಬೇಡಿರಿ, ಎಲ್ಲದರಲ್ಲೂ ಸೌಂದರ್ಯವನ್ನು ನೋಡಿರಿ!" ಎಂದು ನನಗೆ ಹೇಳಬೇಕೆಂದೆನಿಸಿತು, ಆದರೆ ಹೇಳಲಿಲ್ಲ ಎಡ್ವೊಕೇಟರು ಏನೆನ್ನುತ್ತಾರೆ, ನೋಡಬೇಕೆಂದು ಅವರ ಕಡೆಗೆ ನೋಡತೊಡಗಿದ ಹೃದಯನಾಥರೂ ಅವರ ಕಡೆಗೇ ನೋಡಲಾರಂಭಿಸಿದ್ದರು

"ಊಂ, ಎಲ್ಲಾ ಸರಿ, ನೀನಿನ್ನೂ ಹುಡುಗ, ನಿನ್ನ ಮಾತಿನಂತೆಯೆ ಆಗಲಿ, ಶ್ಯಾಮಬಾಬೂ ಏನೆನ್ನುತ್ತಾರೆ' ಅತ್ತ ಕಡೆಗೆ ಸ್ವಲ್ಪ ಲಕ್ಷ್ಯವನ್ನಾದರೂ ಕೊಡು!'' ಎಂಬರ್ಥದಲ್ಲಿ ಹೇಳಿ ಸ್ವಲ್ಪ ನಕ್ಕರು

"ಕಾಶ್ಮೀರದ ಹಸಿರುಮುಡಿಯುವ ಶ್ಯಾಮಲ ವಾಸಂತಿಯ ರೂಪವು ನಮ್ಮನ್ನು ಮೋಹಗೊಳಿಸುವುದೇನೋ ಸರಿ! ಈಗ ಅವಳು, ಹಿಮದ ಶುಭ್ರಸೆಲ್ಲೆಯವನ್ನು ಹೊದ್ದುಕೊಂಡು,ನಿರಾಭರಣಳಾಗಿರುವಾಗ ಅವಳನ್ನು ನಾವು ನೋಡದೆ ಇರಬೇಕೆ? ಇತಿಹಾಸ—ಪುರಾತನತ್ವದ ಮಮತೆಯನ್ನು ಈಗ ಬಿಟ್ಟುಬಿಡೋಣ, ತೀಕ್ಷ್ಣ ಕಿರಣಗಳಿಂದ ಕೂಡಿದ, ಭವ್ಯವಾದ ವರ್ತಮಾನಕ್ಕೆ ಹೆದರೋಣ ಬೇಡ, ಅದನ್ನು ಬರಮಾಡಿಕೊಳ್ಳೋಣ , ಇದರ ಮೇಲೆ ನಿಮ್ಮ ಇಚ್ಛೆ!'' ಎಂದು ನಾನು ಹೇಳಿದೆ

"ಶ್ಯಾಮಬಾಬೂ, ನೀವು ಕವಿಗಳು" ಎಂದು ಎಡ್ವೋಕೇಟರು ನನ್ನ ವಿಷಯದಲ್ಲಿ ಸಹಾನುಭೂತಿಯನ್ನು ವ್ಯಕ್ತಗೊಳಿಸಿದರು

ಹೃದಯನಾಥರು ಗಂಗೆಯ ಬಳಿಗೆ ಹೋದರೆ ಗಂಗಾದಾಸರಾಗುತ್ತಾರೆ, ಯಮುನೆಯ ಬಳಿಗೆ ಹೋದರೆ ಯಮುನಾದಾಸರಾಗುತ್ತಾರೆ.

ಯಮುನೆಗೆ ಹೋಗುವಾಗ ಗಂಗೆಯ ಭಕ್ತಿ ಅವರ ಮಾರ್ಗದಲ್ಲಿ ಅಡ್ಡ ಬರುವುದಿಲ್ಲ ಗಂಗೆಗೆ ಹೋಗುವಾಗ ಯಮುನೆಯು ತನ್ನಷ್ಟಕ್ಕೆ ತಾನೆ ಹಿಂದೆ ಸರಿಯುತ್ತಾಳೆ. ಜಗತ್ತಿನಲ್ಲಿ ಅದೆಷ್ಟೊ ಸಜ್ಜನರು ಹೀಗೆಯೆ ಸದಿಚ್ಛೆಯುಳ್ಳವರಾಗಿಯೂ ಸದ್ಭಾವವುಳ್ಳವರಾಗಿಯೂ ಇರಬೇಕಾಗುತ್ತದೆ ಅವರಿಗೆ ಎಲ್ಲರ ಮಾತುಗಳಲ್ಲಿಯೂ ಅಲ್ಪಸ್ವಲ್ಪ ಸತ್ಯಾಂಶವು ಕಂಡುಬರುತ್ತದೆ ಅದರಲ್ಲೂ ಪ್ರಬಲರ ಮಾತು ತೀರ ಸತ್ಯವಾಗಿಯೆ ಕಾಣುತ್ತದೆ ಅವರಿಗೆ ಏಕೆಂದರೆ ಅವರಿಗೆ ಪ್ರಬಲರಿಗಿಂತಲೂ ಪ್ರಬಲರಾಗಲು ಅವಕಾಶವೆಲ್ಲಿ ದೊರೆಯುವುದು ?

" ಹೌದು ಶ್ಯಾಮಬಾಬೂ ! ನೀವು ಕವಿತೆಗಳನ್ನು ಏಕೆ ರಚಿಸುವುದಿಲ್ಲ ? ರಚಿಸಿದರೆ ಏನು ಹೇಳಲಿ ! ನಿಮ್ಮ ಕವನಗಳು ಎಲ್ಲರ ನಾಲಗೆಯ ಮೇಲೂ ನಲಿದಾಡದೆ ಇರವು ! "

''ಸರಿ, ಸರಿ'' ಎಂದು ಮುಂದೇನಾಗುವುದೂ ನೋಡಬೇಕೆಂದು ಸುಮ್ಮನಿದ್ದೆ.

ವಿಚಾರಿಸಿದ ಬಳಿಕ ಹತ್ತಿರದಲ್ಲಯೆ ಒಂದು ಹಳ್ಳಿಯಿದೆಯೆಂದು ಗೊತ್ತಾಯಿತು ಅಲ್ಲಿಗೆ ಹೋಗಬೇಕೆಂದು ನಿಶ್ಚಯವಾಯಿತು ಅದು ಬೆಟ್ಟದ ತೀರ ಅಡಿಯಲ್ಲದ್ದಿತು, ಸುಂದರವಾಗಿದ್ದಿತಲ್ಲದೆ ಅಲ್ಲಿ ನೀರು ಮತ್ತು ವನಶ್ರೀ ಇವುಗಳ ಸಮೃದ್ಧಿಗೆ ಕೊರತೆಯೆ ಇರಲಿಲ್ಲ,

ಹಳ್ಳಿಯ ಬಲಭಾಗದಲ್ಲಿ ಎತ್ತರವಾದ ಬೆಟ್ಟವಿದ್ದಿತು ಅದರ ಶಿಖರವನ್ನು ನೋಡಿದರೆ ಭಯವಾಗುತ್ತಿದ್ದಿತು, ಏಕೆಂದರೆ ಅದು ಸ್ವಲ್ಪ ಬಾಗಿದ್ದುದರಿಂದ ಯಾವಾಗ ಬಿದ್ದೀತೋ ಎಂಬ ಅಂಜಿಕೆ ನಮಗೆ ರಾತ್ರಿಯಲ್ಲ ಕಪ್ಪುಕಪ್ಪಾಗಿ ಕಾಣುವ ಆ ಎತ್ತರವಾದ ಬೆಟ್ಟವು ನಮ್ಮನ್ನು ಏನೆಂದು ತಿಳಿದುಕೊಳ್ಳುತ್ತಿದೆಯೊ ! ದೀಪಹಚ್ಚಿಕೊಂಡು, ಉರಿಮಾಡಿ, ರೊಟ್ಟಿ ಸುಟ್ಟುಕೊಂಡು, ತಿಂದು ಮಾತಾಡುವ—ಅಲೆದಾಡುವ—ಪ್ರಾಣಿಗಳು ನಾವೆಲ್ಲ ಅದರ ಅಡಿಯಲ್ಲಿ ಜೀವಿಸುತ್ತಿದ್ದೆವು ಅದರೊಳಗೆ ಕಲ್ಲುಗಳೆ ತುಂಬಿದ್ದರೂ ಮೇಲೆ ಹಸಿರು ಬಣ್ಣದ ಶಾಲು ಸುಶೋಭಿತವಾಗಿದ್ದಿತು ನೀರಿನ ರಜತಧಾರೆಗಳು ತರಂಗಿತವಾಗುತ್ತ—ಹರಿಯುತ್ತ—ಅದರಲ್ಲಿ ಆಡುತ್ತಿದ್ದುವು ಅದರ ಶರೀರದ

ಮೇಲೆ ಅದೆಷ್ಟೋ ವಿಷಧರ—ಅಮೃತಧರ ಪ್ರಾಣಿಗಳು ಓಡಾಡುತ್ತಿ-ದ್ದುವು, ಅದೆಷ್ಟೊ ಗುಣಗಳಿಂದಲೂ ರಹಸ್ಯಗಳಿಂದಲೂ ತುಂಬಿ ನಿಂತ ವನಸ್ಪತಿಗಳೂ, ಬಗೆಬಗೆಯ ಬಣ್ಣದ ಸುಗಂಧದ ಸುಮನಗಳ ಗಿಡಗಂಟಿಗಳೂ ಬೆಳೆದಿದ್ದುವು ಅನಂತ ವೈಚಿತ್ರ್ಯ, ಅನಂತ ಪ್ರಾಣ, ಅನಂತ ಕಥಾ, ಅನಂತ ಇತಿಹಾಸ, ಅಕಲ್ಪನೀಯ ಮಾನವಧನ ಇವುಗಳಿಂದ ಕೂಡಿಕೊಂಡು, ಆಕಾಶವನ್ನು ನೋಡುತ್ತ ಅದು ನಿಂತಿದ್ದಿತು ಆ ಬೆಟ್ಟವನ್ನು ಬೆಳಗಿನ ಜಾವದಲ್ಲೂ ಸಂಧ್ಯಾಸಮಯ ದಲ್ಲೂ ನಾನು ಏರಿ ಇಳಿದಾಡುತ್ತಲಿದ್ದೆ

ಏರುಏರುತ್ತಿರುವಾಗ ಅಚ್ಚರಿಯು ಬೆಳೆಯುತ್ತಿದ್ದಿತು ಗಣಿತ ಹಾಕಿ, ಭೂಮಿತಿಯ ಸಹಾಯದಿಂದ ಈ ಬೆಟ್ಟವನ್ನುಂಟುಮಾಡಿ ರಲಿಲ್ಲ ಎಲ್ಲಿ ಬೇಕಾದಲ್ಲಿ ದಿನ್ನೆ, ಎಲ್ಲಿಬೇಕಾದಲ್ಲಿ ತಗ್ಗು ! ಸ್ಥಳ ಸಿಕ್ಕಲ್ಲಿ ಬೇಕಾದ ಸಸಿಯು ಬೇಕಾದಹಾಗೆ ಸಂವರ್ಧನೆ ಹೊಂದಬಹು-ದಾಗಿದ್ದಿತು ! ಬೇಕಾದಲ್ಲಿಂದ ಬೆಟ್ಟವನ್ನು ಬಗೆದು, ಕಳಕಳ ಮಾಡುತ್ತ ನೀರು ಹೊರಬಿದ್ದು ಬರಬಹುದಾಗಿದ್ದಿತು !

ಯಾವ ಬೆಟ್ಟದ ಸೌಂದರ್ಯವು ನಮ್ಮ ಭಾಷೆಯಲ್ಲಿ ಇಳಿಯ-ದಷ್ಟು ಅಪರಿಮಿತವಾಗಿದೆಯೋ, ಯಾವುದರ ಅಡಿಯಲ್ಲಿ ನಾವು ಕೀಟಾಣುಗಳಂತೆ ಕಾಣುವೆವೊ, ಯಾವುದು ಕಲ್ಲುಗಳದಿದ್ದು ತನ್ನಿಂದ ನೀರು ಹರಿಸುತ್ತ ತನ್ನ ನೆರಳಲ್ಲಿ ನಮ್ಮನ್ನು ಪಾಲಿಸುತ್ತದೊ, ಯಾವುದು ಒಂದು ಅಳತೆಯಿಂದ ಅನುಗೊಳ್ಳದೆ ನಮ್ಮ ಅಳತೆಯ ವಿದ್ಯೆಯನ್ನೇ ಅಚ್ಚರಿಯಲ್ಲಿಯೂ ಅಪೂರ್ಣತೆಯಲ್ಲಿಯೂ ನೂಕಿ-ಬಿಡುವುದೊ, ಯಾವುದು ಹಸಿರುಹಸಿರಾಗಿದ್ದು ಅಚಲವೂ ವಿಶಾಲವೂ ದೃಢವೂ ಆಗಿರುವುದೊ, ಯಾವುದು ರಾತ್ರಿಯಂತೆ ಕಪ್ಪು ಆಗಸದಂತೆ ನೀಲವೂ ಆಗಿರುವುದೊ ಆ ಬೆಟ್ಟವನ್ನು ನಾನು ನೋಡುತ್ತಿದ್ದೆ, 'ಇದರಲ್ಲಿ ಜೀವವಿಲ್ಲವೆ ? ಇದು ನನ್ನೊಡನೆ ಏಕೆ ಮಾತನಾಡು-ವದಿಲ್ಲ ? ಇದರ ನೀರವ ಭಾಷೆಯ ಬೀಗದ ಕೈ ನನಗೇಕೆ ದೊರೆತಿಲ್ಲ ?' ಎಂದು ಯೋಚಿಸುತ್ತಿದ್ದೆ

ಕೆಂಪು, ಹಂಡಬಂಡ, ಕಪ್ಪು ಮೊದಲಾದ ಬೇರೆಬೇರೆ ಬಣ್ಣದ ಚಿಕ್ಕ ಚಿಕ್ಕ ಹಸುಗಳೂ, ಮೂರು ನಾಲ್ಕು ಬಗೆಯ ಬಣ್ಣದ ಕುರಿಗಳೂ, ಅತ್ತಿತ್ತ ಮೇಯುತ್ತ ಬೆಟ್ಟದ ಅಡಿಯಲ್ಲಿ ಹರಡಿಕೊಂಡಿವೆ ಒಂದೊಂದು ಬೆಟ್ಟದ ಶಿಖರವನ್ನೇರಿ ಗಿಡಗಂಟೆಗಳನ್ನು ಮೆಲ್ಲುತ್ತಿವೆ, ಮೇಯುತ್ತಿರುವಾಗ ಆಗಾಗ ತಲೆಯೆತ್ತಿ ತಮ್ಮ ಸುತ್ತಲೂ ನೋಡುತ್ತಿವೆ ಈ ಬೆಟ್ಟದೊಡನೆಯೆ ಅವು ತಮ್ಮ ಸಂಪೂರ್ಣ ಸಂಬಂಧವನ್ನು ಬೆಳೆಯಿಸಿಕೊಂಡು ಬಿಟ್ಟಿವೆ ದಿನಾಲು ಅವು ಮೇಯುತ್ತಿರುವುವು, ಅವುಗಳ ಕಾಲಕೆಳಗೆ ಈ ದೈತ್ಯನಂತಹ ಬೆಟ್ಟವು ಸುಮ್ಮನೆ ಬಿದ್ದುಕೊಂಡಿರುವುದು

ಆಡುಗಳ ವಿಚಾರವನ್ನಂತೂ ಕೇಳಲೇಬೇಡಿರಿ ಅವುಗಳಿಗೆ ಅಂಜಿಕೆಯೆಂದರೇನೆಂಬುದು ಗೊತ್ತೇ ಇರದು ಅವಕ್ಕೆ ಚಿಂತೆಯಿಲ್ಲ; ತೆಳುವಾದ ಕಾಲುಗಳಿವೆ, ಚಿಕ್ಕ ಖುರಗಳಿವೆ, ಎಂತಲೇ ಅವೆಂದೂ ಮಣಿಯಲಾರವು ಆಡುಗಳಲ್ಲಿ ಚಪಲತೆಯಿದೆ, ಗಟ್ಟಿತನವಿದೆ ಇದಕ್ಕೂ ಹೆಚ್ಚಿಗೇನು ಬೇಕು ಅವುಗಳಿಗೆ? ನಮ್ಮ ಕಣ್ಣುಗಳು ಕೂಡ ಎಲ್ಲಿ ನಿಲ್ಲಲು ಅಂಜುವುವೋ ಅಲ್ಲಿ ಅವು ತಮ್ಮ ಕಾಲುಗಳನ್ನಿಟ್ಟು, ಸಾವಿರಾರು ಅಡಿ ಎತ್ತರವಾದ ಬೆಟ್ಟಗಳ ಕಡಿದಾದ ಪ್ರದೇಶಗಳಲ್ಲಿ ಮೇಯುತ್ತಿರುವುವು, ಸಮ್ರಾಜ್ಞಿಯಂತೆ ಇದ್ದಲ್ಲಿಂದಲೇ ಕೆಳಗೆ ಇಣಿಕಿ ನೋಡುವುವು ಆಗೋ ನೋಡಿರಿ! ಆ ಆಡು ಹೇಗೆ ನಿಂತಿದೆ ನೋಡಿರಿ! ಹಿಂದಿನ ಎರಡೂ ಕಾಲುಗಳು ಜಾರದೆ ಹೇಗೆ ನಿಂತಿವೆಯೊ ಏನೋ! ತಮ್ಮ ಮುಂಗಾಲುಗಳನ್ನು ಕಂಟಿಯ ಮೇಲಿಟ್ಟು ಮೇಯುತ್ತಿದೆ ಅಬ್ಬಾ! 'ಎಲ್ಲಾದರೂ ಅದು ಬಿದ್ದುಬಿಟ್ಟರೆ! ಇಲ್ಲ, ಅದು ಬೀಳುವುದಿಲ್ಲ!

ಸಾಯಂಕಾಲದ ಸಮಯ ಹಳ್ಳಿಯ ಮೇಲೆ ನೆರಳು ಹರಡಿದ್ದಿತು ಬೆಟ್ಟಗಳ ತುದಿಗಳ ಮೇಲೆ ಇನ್ನೂ ಬಿಸಿಲಿದ್ದಿತು ಒಂದೆರಡೇ ನಿಮಿಷಗಳಲ್ಲಿ ಸೂರ್ಯ ಮುಳುಗಲಿರುವ ಅತ್ತಿತ್ತ ಆಡುಗಳು ಚದರಿ ಶಿಖರಗಳ ಮೇಲೆ ಮೇಯುತ್ತಿದ್ದುವು ಒಮ್ಮೆಲೆ ಬೆಟ್ಟಗಳಿಗೆ ತಾಕಲಾಡಿ ಬಂದು ಒಂದು ಸ್ವರವು ಕಿವಿಯನ್ನು ಹೊಕ್ಕಂತಾಯಿತು.

ನಾನು ಆರ್ಯಸಮಾಜದವನಾಗಿದ್ದರೆ 'ಓಹೋ ಎಲ್ಲಿಂದಲೋ ಓಂಕಾರ ಧ್ವನಿಯು ಕೇಳಬರುತ್ತಿದೆ' ಎಂದುಬಿಡುತ್ತಿದ್ದೆ. ಏಕೆಂದರೆ ಬಂದ ಸ್ವರವು ಓಂಕಾರದಂತಿದ್ದಿತು. ಇಂತಹ ಸ್ವರವನ್ನು ನಾನೆಂದೂ ಕೇಳಿರಲಿಲ್ಲ. ಅದು ಎಡೆಬಿಡದೆ ಗುಂಜಿಸುತ್ತಿದ್ದಿತು,ಅದು ಸುತ್ತಲಿನ ಬೆಟ್ಟಗಳಿಗೆ ತಾಕಲಾಡಿ, ಪ್ರತಿಧ್ವನಿತವಾಗಿ ಇನ್ನಿಷ್ಟು ಹೆಚ್ಚು ಉಚ್ಚವಾಗುತ್ತಿದ್ದಿತು ಕೊನೆಗದು ಕಡಮೆ ಕಡಮೆಯಾಗುತ್ತ ಲೀನವಾಗಿಹೋಯಿತು 'ಇದು ಯಾರ ಸ್ವರವಿರಬಹುದು" ಎಂದು ಯೋಚಿಸಿದೆ 'ದೊಡ್ಡ ದನಿಯು, ಪುರುಷನಾವನದಾದರೂ ಇದ್ದೀತು' ಎಂದುಕೊಂಡೆ. ಪುನಃ ಸ್ವಲ್ಪ ಹೊತ್ತಿನ ಬಳಿಕ ಮತ್ತೆ ಅದೇ ಬಗೆಯ ಒಂದು ಕೂಗು ಕೇಳಿಸಿತು ಒಂದೇ ಧ್ವನಿಯಿರಲಿಲ್ಲ ಈಸಲ, ಎರಡು ಮೂರು ದನಿಗಳು ಒಟ್ಟುಗೂಡಿದಂತಿದ್ದಿತು ಸ್ವರವಷ್ಟೇ ಇರಲಿಲ್ಲ, ಶಬ್ದಗಳೂ ಇದ್ದುವು, ಆರೋಹಣ, ಅವರೋಹಣಗಳೂ ಇದ್ದುವು 'ಓಂಕಾರವಲ್ಲ, ಯಾವನೋ ಒಬ್ಬ ಮಾನವನು ಕೂಗುತ್ತಿದ್ದಾನೆ' ಎಂದು ಎನಿಸಿತು ಆದರೆ ಶಂಖದಂತೆ ಇಷ್ಟು ದೊಡ್ಡದಾಗಿ ಅದಾವ ಪುರುಷನು ಕೂಗಬಲ್ಲ? ಆ ಧ್ವನಿಯಲ್ಲ ಶಂಖದಂತಹ ಕಂಠಶಕ್ತಿಯೂ ಫುಪ್ಫುಸದ ಸಾಮರ್ಥ್ಯವೂ ಅತುಲವಾಗಿದ್ದುವು. ಈ ಎತ್ತರದ ನಿಲುವಿಕೆಯ ಮನುಷ್ಯರ ಈ ದೇಶದಲ್ಲಿಯೂ ಇಷ್ಟು ದೊಡ್ಡ ದನಿಯಿಂದ ಅದಾವನು ಕೂಗಬಲ್ಲ! ಧ್ವನಿಯು ಬರುಬರುತ್ತ ಕಡಮೆಯಾಯಿತು, ಕಡಮೆಯಾದರೂ ಸ್ಪಷ್ಟವಾಗಿ ಕೇಳಬರತೊಡಗಿತು ಆಗ ನಮ್ಮ ಕಡೆಗೇ ಆ ದನಿಯು ವ್ಯಕ್ತಿ ಬರುತ್ತಿರುವಂತೆನಿಸಿತು ಇಷ್ಟು ದೊಡ್ಡ ದನಿಯಿಂದ ಹಾಡುವ ಮನುಷ್ಯನು ಹೇಗಿರಬಹುದು? ಗಡ್ಡಮೀಸೆಯುಳ್ಳ—ಎತ್ತರವಾದ—ಬಲಿಷ್ಠನಾದ ಮನುಷ್ಯನಿರಬಹುದು! ಸ್ವಲ್ಪ ಸಮಯದ ನಂತರ ಆ ಧ್ವನಿಯು ರಾಗವಾಗತೊಡಗಿತು ಯಾರೋ ಪ್ರಬಲಕಂಠದಿಂದ ಹಿಂದೀಯಲ್ಲಿ "ಬಾಬಾ ಬಾರೆಲೊ, ಬಾಬಾ, ಬಾ! ಎನ್ನ ಕಣ್ಣಮಣಿ ಗೋವಳಚಿನ್ನಾ ಬಾ,ಬಾ , ಬಾ" ಎಂದು ಹಾಡುತ್ತಿರುವಂತೆನಿಸಿತು

'ಈ ಕಾಡಿನಲ್ಲಿ, ಈ ಕತ್ತಲಿಂದ ಮುಸುಕಿದ ಬೆಟ್ಟದ ಮೇಲೆ ಪೌರುಷದಿಂದ ಕೃಷ್ಣನನ್ನು ಕರೆಯುವವರು ಯಾರು?' ಎಂದು

ಯೋಚಿಸತೊಡಗಿದೆ ದನಿಯು ಇನ್ನಿಷ್ಟು ಸಮಿಾಪ-ಸಮೀಪಕ್ಕೆ ಬರಲಾರಂಭಿಸಿತು—

ಎನ್ನ ಕಣ್ಣಮಣಿ ಕೊಳಲ ಚಿನ್ನ ನೀ ಬಾ' ಬಾ' ಬಾ'
ಕೊಳಲನೂದಿ ಮನವೆಳೆಯುವ ಗೋವಳ ಬಾ' ಬಾ' ಬಾ'

'ಇಷ್ಟೊಂದು ಮೃದುವಾದ ಧ್ವನಿಗೆ ಆ ಕೃಷ್ಣ ಮರುಳಾಗುವವನಲ್ಲವೆಂದು ಇಷ್ಟು ದೊಡ್ಡ ಧ್ವನಿಯಿಂದ ಹಾಡುತ್ತಿರಬಹುದು, ಮತ್ತು ಆ ಕೊಳಲಚಿನ್ನನು ಎಲ್ಲಿಯಾದರೂ ದೂರ ಬೆಟ್ಟದ ಮರೆಯಲ್ಲಿ ಕುಳಿತುಕೊಂಡಿರಬಹುದು, ಅವನಿಗೆ ಕೇಳಿಸಬೇಕೆಂದು ಇಷ್ಟು ದೊಡ್ಡ ದನಿಯಲ್ಲಿ ಹಾಡುತ್ತಿರಬಹುದು' ಎಂದೆನಿಸಿತು ನನಗೆ ಕೃಷ್ಣನಿಗೆ ಕೇಳಿಸಿತೊ ಇಲ್ಲವೊ ಎಂಬ ಸಂಶಯ ಬಂದುದರಿಂದಲೋ ಏನೋ ಸ್ವಲ್ಪ ತಡೆದು ಮತ್ತೆ ಹಾಡಿಗಾರಂಭವಾಯಿತು —

ಯಶೋದೆಯಣುಗನೆ ಬಾ ಬಾ—ಬಾ'
ರಾಧೆಯ ನಲುಮೆಯೆ ಬಾ ಬಾ—ಬಾ'
ಎನ್ನ ಕಣ್ಣಮಣಿ ಗೋವಳಚೆನ್ನಾ ಬಾ ಬಾ—ಬಾ'
ಕೊಳಲನೂದಿ ಮನವೆಳೆಯುವ ಮೋಹನ ಬಾ ಬಾ ಬಾ'—

ಹಾಡು ನನ್ನ ಹತ್ತಿರವೆ ಬರುವಂತೆನಿಸಿತು. ಒಮ್ಮೆಲೆ ನನಗೊಂದು ಉಚ್ಚ ಸ್ವರದ ಸಿಳ್ಳು ಕೇಳಿಸಿತು ರೈಲು ನಿಂತಿರುವುದನ್ನು ನೋಡಿ-ನೋಡಿ ಗಾರ್ಡನು ಬೇಸತ್ತು ಎರಡೆರಡು ಮೂರು ಮೂರು ಸಲ ಸಿಳ್ಳು ಹಾಕುತ್ತಿರುವಂತೆ ತಡೆತಡೆದು ಮೂರು ಸಲ ಸಿಳ್ಳು ಕೇಳಿಸಿತು ಮತ್ತೆ ಹಾಡು ಕೇಳಿಸತೊಡಗಿತು—

ಎನ್ನೆದೆಯರಸನೆ ಬಾ ಬಾ' ಬಾ ಬಾ'
ನನ್ನೊಲವನು ಸೆಳೆದಾತನೆ ಬಾ—ಬಾ'

ಹಾಡು ಇನ್ನಿಷ್ಟು ಸನಿಹಕ್ಕೆ ಬರಲುತೊಡಗಿತು ಅದು ನನ್ನ ಹತ್ತಿರ ಹತ್ತಿರ ಬಂದಹಾಗೆ ಗಾಯಕನ ಕಂಠಶಕ್ತಿಯನ್ನು ಕೇಳಿ ನಾನು ಆಶ್ಚರ್ಯಚಕಿತನಾಗುತ್ತಿದ್ದೆ

ಸ್ವಲ್ಪ ಹೊತ್ತಿನಮೇಲೆ ಸಂಗೀತವು ಬರುತ್ತಿದ್ದ ಕಡೆಯಿಂದಲೆ ಬ್ಬ ಹುಡುಗಿಯು ಬರುತ್ತಿರುವುದು ಕಂಡಿತು. ಅಸ್ತವ್ಯಸ್ತಳಾಗಿ—

ಮೈಮರೆತವಳಾಗಿ—ಬರುತ್ತಿದ್ದಳು, 'ಇಲ್ಲಿ ತನ್ನ ಹೊರತು ಯಾರೂ ಇಲ್ಲ, ಈ ಭಾಗದೊಡತಿ ತಾನೇ'ಎಂದು ತಿಳಿದೊ ಏನೊ! ದೊಡ್ಡ ದೊಡ್ಡ ಅಡಿಗಳನ್ನಿಡುತ್ತ ನಿರಾಲೋಚನೆಯಿಂದ ಬರುತ್ತಿದ್ದಳು ಅವಳು .

ನಾನು ಸ್ವಲ್ಪ ದಿಙ್ಮೂಢನಾದೆ ಅವಳು ಬರುತ್ತಿದ್ದಳು, ಹಾಡು-ತ್ತಲೆ ಬರುತ್ತಿದ್ದಳು —

ಎನ್ನ ಕಣ್ಣಮಣಿ ಗೋವಳ ಚನ್ನಾ ಬಾ ಬಾ ಬಾ !
ಕೊಳಲನೂದಿ ಮನವೆಳೆಯುವ ಮೋಹನ ಬಾ ಬಾ ಬಾ !

ನಾನು ಅವಳನ್ನು ನೋಡಿದೆ ಹುಡುಗಿಯೆಂದು ತಿಳಿಯಿತು ಆಕೆಯ ಕಂಠದಲ್ಲಿ ಈ ಘನರವವು ಎಲ್ಲಿಂದ ಬಂದಿರುವುದು ? ಚೆಲ್ಲಣ ತೊಟ್ಟಿದ್ದಾಳೆ ಮೊಣಕಾಲ ವರೆಗೂ ಬರುವಂತಹ ನಿಲುವಂಗಿಯನ್ನು ಹಾಕಿಕೊಂಡಿದ್ದಾಳೆ ಆದರೆ ಅದರ ತೋಳುಗಳು ಅಷ್ಟೊಂದು ಉದ್ದ-ವಾಗಿಲ್ಲ ತಲೆಯ ಮೇಲೆ ಬಿದ್ದು ಹೆಗಲಮೇಲಾಡುವ ಉತ್ತರೀಯ-ವೊಂದು ಹೆಸರಿಗೆ ಮಾತ್ರ ಇದೆ ಹಾಡುವಾಗ ಅವಳಿಗೆ ಆಯಾಸ-ವಾಗುವಂತೆನಿಸುತ್ತಿರಲಿಲ್ಲ ದೊಡ್ಡ ದೊಡ್ಡ ಹಜ್ಜಗಳನ್ನು ಹಾಕುತ್ತ ಹಾಡುತ್ತ ಬರುತ್ತಿದ್ದಳು ಹದಿನೇಳು ಹದಿನೆಂಟು ವರುಷದವಳಾಗಿರ-ಬಹುದು ಅವಳ ಮೈ-ಕೈ ಈ ವಯಸ್ಸಿನಲ್ಲಿ ಸರ್ವಸಾಧಾರಣವಾಗಿರು-ವಂತೆ ಇಲ್ಲ, ಸ್ವಲ್ಪ ಹೆಚ್ಚು ಧೃಷ್ಟಪುಷ್ಟವಾಗಿವೆ ಉಬ್ಬಿದೆದೆಯ ತುಂಬುಮೈಯ ಯುವತಿಯವಳು ಅವಳಿಗೆ ಮೈಮೇಲೆ ಎಚ್ಚರ ಇದ್ದಂತಿರಲಿಲ್ಲ 'ಮನುಷ್ಯರ ದೃಷ್ಟಿಯು ತನ್ನ ಕಡೆಗೆ ಬಿದ್ದೀತು, ಉತ್ತರೀಯದ ಸೆರಗನ್ನು ಎದೆಯ ಮೇಲೆ ಚೆನ್ನಾಗಿ ಹೊದ್ದುಕೊಳ್ಳ-ಬೇಕು' ಎಂಬುದರ ಅರಿವೇ ಅವಳಿಗಿದ್ದಂತೆ ಕಾಣಲಿಲ್ಲ ಅವಳು ಯುವತಿಯಾಗಿದ್ದುದು ಸರಿಯೆ! ಸುಂದರಿಯಿರಲಿಲ್ಲವೆಂದೂ ನಾನು ಹೇಳಲಾರೆ! ಒಂದೆ ಸವನೆ ಮುಂದಡಿಯನ್ನಿಡುತ್ತ ಬರುತ್ತಿದ್ದಳು, ಹಾಡುತ್ತ ಬರುತ್ತಿದ್ದಳು —

ನನ್ನೊಲವನು ಸೆಳೆದಾತನೆ ಬಾ ಬಾ !
ನನ್ನ ಕಣ್ಣ ತಣಿಸುವ ತಾರೆಯೆ ಬಾ !
ಬಾರೆಲೊ ಬಾ ಬಾ — ಬಾ ಬಾ! ಬಾರೆಲೊ ಬೇಗನೆ ಬಾ-ಬಾ!!

ನನ್ನಿಂದ ಹತ್ತು ಹೆಜ್ಜೆಗಳ ದೂರದಲ್ಲಿ ಒಮ್ಮೆಲೆ ಅವಳು ನಿಂತು-ಬಿಟ್ಟಳು, ಹಾಡೂ ನಿಂತುಹೋಯಿತು ಪುನಃ ಮುಂದೆ ಸಾಗಿದಳು ಸಾಗಿ ಹಾಗೆಯೆ ಬಂದು ನನ್ನೆದುರಿನಲ್ಲಿ ನನ್ನ ಬಳಿಯಲ್ಲಿಯೆ ನಿಂತಳು "ನೀವಾರು? ನನ್ನ ರಾಜ್ಯದಲ್ಲಿ ನೀವಾರು?" ಎಂದು ಕೇಳಬೇಕೆಂದೋ ಏನೋ!

"ಅಮ್ಮಾ ನೀನಾರು? ಈ ವೇಳೆಯಲ್ಲಿ ಇಲ್ಲಿ ನೀನೇನು ಮಾಡುತ್ತೀಯೆ?"

ತನ್ನ ಎರಡೂ ಕೈಗಳನ್ನು ನನ್ನ ಕಣ್ಣುಗಳ ಮುಂದೆ ಕುಣಿಸಿ "ತಿಳಿಯುವುದಿಲ್ಲವೆ?" ಎಂದು ಪಶ್ತೋ* ಭಾಷೆಯಲ್ಲಿ ಏನೇನೊ ಹೇಳಿದಳು ಅದರಲ್ಲಿಯ "ಮಿಾ ನಾದಿರಾ" ಎಂಬ ನುಡಿಗಳಿಂದ ಅವಳ ಹೆಸರು **ನಾದಿರಾ** ಎಂದು ಗೊತ್ತಾಯಿತು

ಅವಳೊಡನೆ ಮಾತನಾಡಬೇಕೆಂದೆನಿಸಿತು ಈ ಹಿಂದೀ ಹಾಡನ್ನು ಇಷ್ಟೊಂದು ಶುದ್ಧವಾಗಿ ಹೇಗೆ ಹಾಡಬಲ್ಲಳೆಂಬುದನ್ನು ಅರಿತುಕೊಳ್ಳ-ಬೇಕೆಂದೆನಿಸಿತು ಅವಳು ನಗುತ್ತಿದ್ದಳು ಪಶ್ತೋವಿನಲ್ಲಿ ಏನೇನೋ ಮಾತನಾಡುತ್ತಿದ್ದಳು, ಕೈಗಳಿಂದ ಹಾವಭಾವ ಮಾಡುತ್ತಿದ್ದಳು ಆದರಿಂದ ನನಗೇನೂ ಗೊತ್ತಾಗುತ್ತಿರಲಿಲ್ಲ

ಮಾತನಾಡುವಾಗ ಅವಳು ಆಗಾಗ ಅತ್ತಿತ್ತ ನೋಡುತ್ತಿದ್ದಳು ಒಂದು ಸಲ ಅವಳ ದೃಷ್ಟಿಯು ಒಂದೇ ಕಡೆಯಲ್ಲಿ ನೆಲೆನಿಂತಿತು ನಾನೂ ಅತ್ತ ಕಡೆಗೆ ನೋಡಲು ತೊಡಗಿದೆ ದೂರದಲ್ಲೊಂದು ಬೆಟ್ಟದ ತುತ್ತ ತುದಿಯಲ್ಲಿ ಆಡೊಂದು ಮೇಯುತ್ತಿದ್ದಿತು ಒಂದಿಷ್ಟು ಇತ್ತ ಒಲಿದರಾಯಿತು 'ಸದ್ಯಾಸ್ತ್ಯೃಪ್ಯಂತು' ಆಗುತ್ತಿದ್ದಿತು ಅದು ಸ್ವಲ್ಪ ಹೊತ್ತು ಸುಮ್ಮನೆ ನಿಂತು ಆ ಹುಡುಗಿ ಎರಡು ಬೆರಳುಗಳನ್ನು ಬಾಯಲ್ಲಿಟ್ಟು,ಒಂದು ಸಲ ಸಿಳ್ಳು ಹಾಕಿದಳು ಒಂದು ಸಲ ಹಾಕಿದಳು, ಎರಡು ಸಲ ಹಾಕಿದಳು, ಮೂರನೆಯ ಸಲವೂ ಆಯಿತು ಆಗ ಆಡು ತನ್ನ ಸುತ್ತಲೂ ನೋಡಿತು ಬಳಿಕ ನಾದಿರಾ ಬಹಳ ದೊಡ್ಡ

---

* ವಾಯುವ್ಯ ಸರಹದ್ದಿನ ಪ್ರಾಂತ್ಯದಲ್ಲಿಯೂ, ಅದರ ಸುತ್ತಲೂ ಪಠಾಣರು ಆಡುವ ಲಿಪಿಯಿಲ್ಲದ ಭಾಷೆಯಿದು

ದನಿಯಿಂದ ಕೂಗು ಹಾಕಿದಳು ಆ ಕೂಗಿನಿಂದ ನನ್ನ ಕಿವಿಗಳು ಗಡುಚಿಕ್ಕಿದವು ಆಡು ಮತ್ತೆ ಕಲ್ಲೊಂದರಲ್ಲಿ ಬಾಯಿಕ್ಕಲು ತೊಡಗಿದ್ದಿತು, ಅಷ್ಟರಲ್ಲಿಯೆ ಚಿಂತಯಿಂದ ಪುನಃ ಸುತ್ತಲೂ ನೋಡಿತು ಆಗ ನಾದಿರಾ ' ಪುಯೀ ಪುಯೀ ! ' ಎಂದು ಅನೇಕ ಸಲ ನುಡಿದಳು ಆದರೂ ಆಡು ಅದನ್ನು ಕೇಳಿಯೂ ಓಂತಿರುಗಿ ಇಳಿದು ಬರಲು ಬಯಸಲಿಲ್ಲ ಅದು ಕಳೆದು ಹೋದಂತಾಯಿತು

ಈಗ ನಾನು ನಾದಿರಾನ ಬಳಿಯಲ್ಲಿದ್ದರೂ ಮೊದಲಿನಂತಿರಲಿಲ್ಲ ನಾನೀಗ ಇರುವುದು ಅವಳ ಲಕ್ಷ್ಯದಲ್ಲಿ ಇದ್ದಂತಿರಲಿಲ್ಲ ಅವಳ ನೋಟ ದೂರದ ಜಟ್ಟದ ತುದಿಯಲ್ಲಿದ್ದ ಆಡಿನ ಕಡೆಗಿದ್ದಿತು ಅದನ್ನು ಬರಮಾಡಿಕೊಳ್ಳುವುದಕ್ಕಾಗಿ ತನಗೆ ಗೊತ್ತಿದ್ದ ಎಲ್ಲ ಶಬ್ದಗಳನ್ನೂ ಉಪಯೋಗಿಸಿದಳು ಆದರೂ ಆಡು ಬರಲಿಲ್ಲ ಈ ಸಲ ಅತ್ಯಂತ ವೇದನೆಯಿಂದ ಚೀರಿದಳು " ಪುಅಂ ಪುಅಂ " ಆಗ ಬಾವಿಯಲ್ಲಿ ಬೀಳಹೋಗುತ್ತಿರುವ ಬಾಲಕನನ್ನು ದೂರದಿಂದ ನೋಡುತ್ತಿರುವ ತಾಯಿ " ಬಾಂವಿ ಬಾಂವಿ ! " ಎಂದೊರಲಿದಂತೆ ನನಗೆನಿಸಿತು

ಆಡು ಹಾರಿತು ಹೊರಳುವುದು ತಿಳಿಯಲಿಲ್ಲ, ಅದರ ಕಾಲು ಜಾರಿತು ನಾನು ನೋಡುನೋಡುತ್ತಿರುವಾಗಲೆ ಅದು ಕೆಳಕ್ಕೆ ಬಿದ್ದು ಬಿಟ್ಟಿತು ಆಳವಾದ ಕಂದರವಲ್ಲಿ !

ನಾದಿರಾ ಚಿಗರಿಯಂತೆ ಹಾರಿದಳು ನಾನು ಕೂಗಿದೆ " ನಾದಿರಾ ! ನಾದಿರಾ ! " ಅವಳು ಬಂಡೆಗೆ ಬಂಡೆಗಳನ್ನು ಜಿಗಿಯುತ್ತ ಓಡಿ ಹೋಗುತ್ತಿದ್ದಳು ' ಸಾಯಂಕಾಲವಾದ ಮೇಲೆ ರಾತ್ರಿಯಾಗುವುದು, ರಾತ್ರಿಯಾದ ಮೇಲೆ ಕತ್ತಲಾಗುವುದು, ಕತ್ತಲಲ್ಲಿ ಅಂಜಿಕೆಯಾಗುವುದು ' ಎಂಬುದು ಅವಳಿಗ ಗೊತ್ತಿರಲಿ-ಲ್ಲವೆ ? ಅವಳು ಮೇಲ್ಗಡೆಗೆ ಹೋಗುತ್ತಿದ್ದಳು, ಮೇಲ್ಗಡೆಗ, ಆಕಾಶವಿದ್ದಲ್ಲಿಗೆ, ನಿರ್ಜನತೆಯಲ್ಲಿಗೆ, ಸಂಕಟವಿದ್ದಲ್ಲಗೆ, ಸ್ವಚ್ಛತಯಿ-ದ್ದಲ್ಲಿಗೆ ಹೋಗುತ್ತಿದ್ದಳು ಕೆಳಗಡೆಗೆ ನೋಡುತ್ತಿರಲಿ ಇಲ್ಲ, ಕೆಳಗಡೆಗೆಂದರೆ ಊರಿದ್ದ ಕಡೆಗೆ, ಮನುಷ್ಯರಿದ್ದ ಕಡಗೆ, ಆಶ್ರಯವಿದ್ದ ಕಡೆಗೆ ಅವಳು ಮೇಲ್ಗಡಗೆ ಹೋಗುತ್ತಿದ್ದಳು ಮೇಲ್ಗಡೆಗೆಂದರೆ

ಬೆಟ್ಟವು ಬೆಳೆದು ಬೆಳೆದು ನಿಂತಲ್ಲಿಗೆ, ಆಡು ಎಲ್ಲಿಂದ ಬಿದ್ದು ಪ್ರಾಣ ಕಳೆದುಕೊಂಡಿದ್ದಿತೊ ಅಲ್ಲಿಗೆ

ಆ ಹುಡುಗಿಗೆ ತಂದೆತಾಯಂದಿರು ಇರುವರೆ? ಅಣ್ಣ ತಮ್ಮಂದಿರು, ಅಕ್ಕ ತಂಗೆಯಂದಿರು ಇರುವರೆ? ಅವಳ ಮದುವೆ ಮಾಡುವವರು ಯಾರೂ ಇಲ್ಲವೆ? 'ಗಂಡಸೆಂಬ ರಹಸ್ಯ?' ಎಂಬುದು ಅವಳಿಗೆ ಗೊತ್ತಿರುವುದೆ? ಗಂಡಸರಿಗೆ ಉಪಕಾರವೆಂಬುದು ತಿಳಿದಿದೆಯೆ? ಆಕೆಯ ಮೊಲೆಹಾಲನ್ನು ಆಡುಗಳೆ ಕುಡಿಯುವುವೊ? ಅವಳು ಯಾರ ಮನೆಯವಳು? ಯಾವ ತಾಯಿಯ ಮಗಳವಳು? ಹದಿನೆಂಟು ವರುಷಗಳವರೆಗೂ ಅವಳು ಬೆಟ್ಟಗಳಲ್ಲಿ ಅಲೆದಾಡಿ ಕುರಿ ಆಡುಗಳನ್ನು ಮೇಯಿಸಿದ ಮಾತ್ರಕ್ಕೆ ಅವಳ ಉಪಯೋಗವಾಯಿತೆಂದು ಅವಳ ಮನೆಯವರು ತಿಳಿದಿರುವರೆ?

*      *      x      *

“ಹೃದಯನಾಥ, ಆಡು ಕುರಿಗಳೊಡನೆ ಇಷ್ಟು ಆತ್ಮೀಯಳಾಗಿರುವ ಆ ಹುಡುಗಿಗೆ ಮಾನವ ಜಗತ್ತಿನಲ್ಲಿ ಸ್ಥಾನವಿಲ್ಲವೆ? ಮಾನವ ಜಗತ್ತು ಅವಳೊಂದಿಗೆ ಯಾವ ಸಂಬಂಧವನ್ನಿಟ್ಟುಕೊಂಡಿದೆ? ಎಂಬುದನ್ನು ತಿಳಿದುಕೊಳ್ಳಬೇಕು” ಎಂದೆ ನಾನು

“ಬಿಡೂ ಬಿಡು! ಅವಳೇನು ಅಷ್ಟು ರೂಪವತಿಯಾಗಿದ್ದಾಳೆ!”

“ಅಷ್ಟು ಸುಂದರಳಲ್ಲದಿದ್ದರೂ ಒಂದು ಬಗೆಯಿಂದ ಸುಂದರಳಾಗಿದ್ದಾಳೆ”

“ನಿನಗೆ ಅವಳು ಸಿಕ್ಕರೆ, ಪಡೆದುಕೊ!”

“ನಾನು ಪಡೆದುಕೊಳ್ಳಬೇಕೆ! ಪಡೆದುಕೊಳ್ಳುವ ಮಾತೆಲ್ಲಿದೆ ಇಲ್ಲ?”

“ಪಡೆದುಕೊಳ್ಳುವ ಮಾತಿಲ್ಲದಿದ್ದರೆ ಈ ವೇದನೆಯ ಕಾರಣವೇನು?”

ಛೀ ಛೀ! ಮಾನವನಲ್ಲಿ ಎಷ್ಟು ತುಚ್ಛತೆಯು ತುಂಬಿಕೊಂಡಿದೆ! ನಾನೆಂದೆ “ಏನಾದರೂ ಕಾರಣವಿರಬಹುದು! ನೀವು ಏಳಿರಿ,

ಹೋಗೋಣ ಬನ್ನಿರಿ, ನೋಡೋಣ ಅವಳು ಸಿಕ್ಕುತ್ತಾಳೋ ಇಲ್ಲವೋ ? ”

ಬೆಟ್ಟದ ಮೇಲಿಂದ ಬಿದ್ದ ಆಡಿನ ಗತಿಯೇನಾಯಿತೆಂಬುದನ್ನೂ ನಾದಿರಾ ಏನು ಮಾಡುತ್ತಾಳೆಂಬುದನ್ನೂ ಅರಿತುಕೊಳ್ಳಬೇಕೆಂದು ತುಂಬಾ ಆಸೆ ನನಗೆ ಆದರೆ ಸರ್ವತದೊಡನೆ ನನ್ನ ಆತ್ಮೀಯತೆ ಎಲ್ಲಿ ಉಂಟಾಗಿದೆ ? ತನ್ನ ಕರುಣಕಥೆಯನ್ನು ನನೆದುರು ಹೇಗೆ ಹೇಳಬಲ್ಲುದು ಆ ನಿರ್ಜೀವ ಬೆಟ್ಟ ? ಅದರ ದಾರಿ ಕಾಲುದಾರಿಗಳ ಪರಿಚಯವು ನನಗೆಲ್ಲಿ ? ಆಗ ನಾನು ಹೃದಯನಾಥರನ್ನು ಸಂಗಡ ಕರೆದುಕೊಂಡು, ‘ಊರಲ್ಲಿ ಅವಳನ್ನು ಹುಡುಕೋಣ, ಎಂದರೆ ಸ್ವಲ್ಪ ಸಮಾಧಾನವಾದೀತು’ ಎಂದು ಭಾವಿಸಿ, ಅವರನ್ನು ಕೇಳಿದೆ ‘ಬರುತ್ತೀರಾ ?’ ಎಂದು

ಬಹಳ ಹೊತ್ತಿನ ವರೆಗೆ ವಿಚಾರಿಸಿದೆವು ಕೊನೆಗೆ ಅವಳು ದೂರದಲ್ಲಿ ತನ್ನ ಚಿಕ್ಕಪ್ಪನ ಬಳಿಯಲ್ಲಿರುತ್ತಾಳೆಂದು ಗೊತ್ತಾಯಿತು ಅವಳಿಗೆ ತಂದೆಯಿರಲಿಲ್ಲ ಸತ್ತು ಹೋಗಿದ್ದಾನೆ ಆಕೆಯ ತಾಯಿ ಬೇರೆಯ ಗಂಡನನ್ನು ಮಾಡಿಕೊಂಡಿದ್ದಾಳೆ ಆಕೆಯ ತಾಯಿಯು ರೂಪ ಅವರ ಜಾತಿಯಲ್ಲಿಯೆ ವಿರಳವಾಗಿ ಇತ್ತಂತೆ ಆಕೆಯ ಸ್ವಭಾವವೆ ಬೇರೆ, ಆಚರಣೆಯೆ ಬೇರೆ ಅವಳು ಪ್ರೇಮದಲ್ಲಿ ಸ್ವಚ್ಛಂದಳು, ಕರ್ತವ್ಯದಲ್ಲಿ ತತ್ಪರಳು, ಸಂಕಟದಲ್ಲಿ ನಿರ್ಭಯಳು, ತರ್ಕದಲ್ಲಿ ಚಪಲಳು ಈ ಹುಡುಗಿ—ನಾದಿರಾ—ಆಕೆಯ ಅವಿವಾಹಿತ ಪ್ರೀತಿಯ ಫಲವಾಗಿದ್ದಳು ಆದರೂ ಈಕೆ ತನ್ನ ತಾಯಿಗೆ ಪ್ರೀತಿಯವಳಾಗಿದ್ದಳು ಪತಿಯ ಮೇಲೆ ತನ್ನ ಅಧಿಕಾರವು ನಡೆಯುವ ವರೆಗೂ ಈ ಹುಡುಗಿಯನ್ನು ತನ್ನ ಹತ್ತಿರವಿಟ್ಟುಕೊಂಡಿದ್ದಳು, ಹುಡುಗಿಗೆ ಸ್ವಚ್ಛಂದವಾಗಿರಲು ಆಕೆ ಶಿಕ್ಷಣವಿತ್ತಳು, ವಿಪತ್ತುಗಳನ್ನು ಸಹಿಸಲು ಕಲಿಸಿದಳು ಒಂದು ದಿನ ಆಕೆ ತಾಯಿಯನ್ನು ಬಿಟ್ಟು ತನ್ನ ಚಿಕ್ಕಪ್ಪನ ಮನೆಗೆ ಬರುವಂತಹ ಪ್ರಸಂಗವು ಬಂದಿತು ಆವೊತ್ತಿನಿಂದ ಚಿಕ್ಕಪ್ಪನ ಮನೆಯಲ್ಲಿದ್ದು ಬೆಳೆಯುತ್ತಿದ್ದಳು, ಆಡು-ಕುರಿಗಳನ್ನು ಮೇಯಿಸುತ್ತಿದ್ದಳು ಮಾನವನ

ಕಠೋರವೃತ್ತಿಯ ಪರಿಚಯವೂ ಅವಳಿಗಾಗಿದೆ, ತಾಯಿಯ ಪ್ರೇಮದ ಪರಿಚಯವೂ ಅವಳಿಗಾಗಿದೆ ಇನ್ನೊಂದು ಕಡೆಯಿಂದ ಹಲವರ ತಿರಸ್ಕಾರಗಳು ತನ್ನನ್ನು ಮುತ್ತಿವೆಯೆಂಬುದರ ಕಲ್ಪನೆಯೂ ಅವಳಿಗಿದೆ ಇದಕ್ಕೂ ಹೆಚ್ಚಾಗಿ ಅವಳಿಗೇನೂ ಗೊತ್ತಿಲ್ಲ ಮನೆಯಲ್ಲ ಅವಳು ಉಣ್ಣೆಯನ್ನು ಹಿಂಜಬೇಕಾಗುತ್ತಿದ್ದಿತು ಆದರಿಂದಲೆ ಮನುಷ್ಯರ ಸಂಪರ್ಕ ಬಂದು, ಅವಳಿಗೆ ಭಾಷೆಯ ಪರಿಚಯವಾಗಿದ್ದಿತು, ಇಲ್ಲದ ಹೋಗಿದ್ದರ ಮನುಷ್ಯರೂ ಅವಳ ದೃಷ್ಟಿಯಲ್ಲ ಒಂದು ಬಗೆಯ ಪ್ರಾಣಿಗಳಾಗಿರುತ್ತಿದ್ದರು, ಆಡು ಕುರಿಗಳೇ ಮನುಷ್ಯರಾಗಿರುತ್ತಿದ್ದುವು

ನಾನು ಅವಳ ಚಿಕ್ಕಪ್ಪನ ಮನೆಗೆ ಹೋದೆ ಆಗ ನಾನು ತಲೆಯ ಮೇಲೆ ಹ್ಯಾಟು ಧರಿಸಿದ್ದ ಕಾಲಲ್ಲ ಫುಲ್‌ಬೂಟ್ಸ್ ಹಾಕಿ-ಕೊಂಡಿದ್ದೆ ಹಿಂದಿನಿಂದ ಒಬ್ಬ ಆಳುಮಗ ರಾಯಿಫಲ್ ಹಿಡಿದು-ಕೊಂಡು ಬರುತ್ತಿದ್ದ, ಅವನ ಬಳಿಯಲ್ಲಿ ಥರ್ಮಾಫ್ಲಾಸು ಒಂದು, ಕ್ಯಾಮರಾ ಒಂದು ಇದ್ದುವು ನಾನು ಅವಳ ಚಿಕ್ಕಪ್ಪನನ್ನು ಬಹಳ ಜದರಿಸಿದೆ ಅವರ ಮನೆಯು ಕಟ್ಟಿಗೆಯದಿದ್ದಿತು ಆ ಮನೆಯಲ್ಲಿ ಮನುಷ್ಯರಿಗಿಂತಲೂ ಕೋಳಿಗಳೇ ಹೆಚ್ಚಾಗಿದ್ದುವು ಅವು ' ಕೊಕ್ಕೊ ಕೊಕ್ಕ ' ಮಾಡುತ್ತ ಅತ್ತಿತ್ತ ಓಡಾಡುತ್ತಿದ್ದುವು "ಅವುಗಳ ಬೆಲೆಯೇನು ? ತತ್ತಿಗಳನ್ನು ಹೇಗೆ ಮಾರುತ್ತೀರಿ ? ಕುರಿ-ಆಡುಗಳಿಲ್ಲವೆ ? " ಎಂದು ಮಾತಿಗೆ ಮೊದಲು ಮಾಡಿದ ಕುರಿಗಳೂ ಇವೆಯೆಂದು ಗೊತ್ತಾಯಿತು

" ಎಲ್ಲಿವೆ ? ಮೇಯಲಿಕ್ಕೆ ಹೋಗಿವೆಯೊ ? ಯಾರು ಮೇಯಿಸಲು ಒಯ್ದಿದ್ದಾರೆ ? "

" ನೆರೆಯ ಒಬ್ಬ ಹುಡುಗ ಅಡವಿಗೆ ಅಟ್ಟಿಕೊಂಡು ಹೋಗಿದ್ದಾನೆ "

" ದಿನಾಲು ಅವನೇ ಅಟ್ಟಿಕೊಂಡು ಹೋಗುತ್ತಾನೋ ? "

" ಇಲ್ಲ, ಒಬ್ಬ ಹುಡುಗಿಯೂ ಇದ್ದಾಳೆ, ಜೀತದಾಳೇ ಎನ್ನಿರಿ—ಅವಳೂ ಅಟ್ಟಿಕೊಂಡು ಹೋಗುತ್ತಾಳೆ "

" ಈಗ ಅವಳಿಲ್ಲವೇನು ? ಎಲ್ಲಿಗೆ ಹೋಗಿದ್ದಾಳೆ ? "

" ಎಲ್ಲಿಗೆ ಹೋಗಿದ್ದಾಳೊ ! ಎರಡು ದಿವಸಗಳಾದುವು, ಬಂದೇ ಇಲ್ಲ ಒಂದು ಕುರಿಯೂ ಕಡಮೆಯಾಗಿದೆ ಹುಡುಗಿ ಬಹಳ ದುಷ್ಟವಿದೆ ಸಾಹೇಬ್ ! ಎಲ್ಲಿಗಾದರೂ ಹೋಗಿರಬಹುದು, ಈಗಂತೂ ಅವಳಿಗೆ ಹರಯದ ಪಿತ್ತ್ತೇರಿ ಬಿಟ್ಟಿದೆ ದಿನಾಲು ಬೇಕಾದಷ್ಟು ಹೊಡೆಯುತ್ತೇವೆ, ಬಡಿಯುತ್ತೇವೆ ಆದರೂ ಕೇಳುವುದಿಲ್ಲ ಆಕೆಗೆ ಬುದ್ಧಿಯೇ ಬರಲೊಲ್ಲದಾಗಿದೆ "

" ನಿಮಗೆ ಅವಳು ಸಂಬಂಧಿಕಳಾಗಬೇಕೇನು ? "

" ಸಂಬಂಧ ! ಅವಳೊಡನೆ ಸಂಬಂಧವೇ ? ಕುಲಹೀನೆ ! "

" ಎರಡು ದಿವಸಗಳಿಂದ ಅವಳು ಮನೆಗೇ ಬಂದಿಲ್ಲವೆನ್ನುತ್ತೀರಿಯೆ, ನೀವು ಅವಳನ್ನು ಹುಡುಕಿ ತರಲು ಯತ್ನಿಸಿದಿರಾ ? "

" ಬರಬೇಕೆಂದು ಇಚ್ಛಿಸಿದರೆ ತಾನಾಗಿಯ ಬರುತ್ತಾಳೆ " ಎಂದು ಬೈಯುತ್ತಲೆ ಹೇಳಿದ ನಾದಿರಾನ ಚಿಕ್ಕಪ್ಪ

" ಎಲ್ಲಿ ಚಳಿಯಲ್ಲಿ ಬಿದ್ದುಕೊಂಡಿದ್ದಾಳೊ ! ಏನಾಗಿದೆಯೊ ಪಾಪ ಅವಳಿಗೆ ! ಅವಳು ಸತ್ತಿರಲಿಕ್ಕಿಲ್ಲವೇ ! "

ಅಷ್ಟರಲ್ಲಿಯೆ ಆ ಮನುಷ್ಯನ ದಪ್ಪಗಿನ ಹೆಂಡತಿ ಹೊರಗೆ ಬಂದು, ಒಂದೆರಡು ಕೋಳಿಗಳನ್ನು ಹಿಡಿದುಕೊಂಡು ಒಳಕ್ಕೆ ಹೋದಳು ಅವುಗಳ ಮರಿಗಳು ಚಿಂವ್-ಚಿಂವ್‌ಗುಡುತ್ತ 'ಪ್ರೊಟೆಸ್ಟ್' ಮಾಡಿದುವು, ಆದರೇನು ಅವುಗಳ ಪ್ರಯತ್ನ ವಿಫಲವಾಯಿತು

ನಾದಿರಾನ ಚಿಕ್ಕಪ್ಪನ ಹೇಳಿಕೆಯಿಂದ ' ಅವಳು ಸತ್ತರೆ ಪೀಡೆಹೋಯಿತು, ಆದರೆ ಅವಳು ಸಾಯುತ್ತಾಳೆಲ್ಲಿ ? ಯಾವನಾದರೂ ಮಿಂಡಗಾರನ ಮನೆಯಲ್ಲಿರಬಹುದು ' ಎಂದರ್ಥವಾಗುತ್ತಿತ್ತು

ನಾನು ಯೋಚಿಸುತ್ತಿದ್ದೆ ' ನಾದಿರಾನ ವಿಷಯದಲ್ಲಿ ನನಗೇಕೆ ಇಷ್ಟು ಆತ್ಮೀಯತೆ ? ' ಎಂದು ಶಿಶುವಿನಷ್ಟು ಅಥವಾ ಪಶುವಿನಷ್ಟು ಅವಳು ನಿರ್ದೋಷಿಯಾಗಿರುವಳೆಂದು ನನಗೆನಿಸುತ್ತಿದ್ದಿತು ' ಅವಳ ಅಕಲಂಕವು ಮನುಷ್ಯನ ಎದುರಿನಲ್ಲಿ ಪ್ರಮಾಣಿತವಾಗದೆ ?

ಪ್ರತಿಷ್ಠಿತವಾಗದೆ? ನಾನು ಆಕೆಯ ಹಿತಕಕ್ಕೋಸ್ಕರ ಏನು ಮಾಡ-ಬಲ್ಲೆ? ಏನು ಮಾಡಬಲ್ಲೆ? ನಾನು ವಿವಾಹಮಾಡಿಕೊಳ್ಳ-ಬಾರದೆಂದು ಪ್ರತಿಜ್ಞೆ ಮಾಡಿದ್ದೇನೆಯೆ?' ಇವೆಲ್ಲ ವಿಚಾರಗಳಿಂದ ಮುಕ್ತನಾಗಿ, ಕೊನೆಗೆ ಆ ಮನುಷ್ಯನನ್ನು ಕೇಳಿದೆ "ಅವಳ ವಯಸ್ಸೆಷ್ಟು?"

"ಸುಮಾರು ೧೭-೧೮ ಇರಬಹುದು"

ಹತ್ತು ರೂಪಾಯಿಗಳ ನೋಟನ್ನು ಅವನಿಗೆ ಕೊಡಲು ಕೈಚಾಚಿ, "ಅವಳನ್ನು ಹುಡುಕಿಕೊಂಡು ಬಂದರೆ ಮತ್ತೆ ಇಷ್ಟು ಇನಾಮು ಸಿಗುವುದು!" ಎಂದ

ಆ ಮನುಷ್ಯನಿಗೆ ಕೋಪ ಬಂದಂತಾಯಿತು ಅವನು ನನ್ನನ್ನೇ ನೋಡುತ್ತಿದ್ದ ನನಗಕ್ಕು ನಾನು ಇನ್ನೊಂದು ನೋಟು ಹೊರಗೆ ತೆಗೆದುಕೊಟ್ಟೆ ಜೇಬಿನಲ್ಲಿಟ್ಟುಕೊಳ್ಳಬೇಕೋ ಒಗೆಯಬೇಕೋ ಎಂಬ ಯೋಚನೆ ಅವನಲ್ಲುಂಟಾಯಿತು ಮತ್ತೊಂದು ನೋಟು ನಾನವನಿಗೆ ಕೊಟ್ಟೆ ನನ್ನ ಕಡೆಗೇ ನೋಡುತ್ತಿದ್ದ ಆತ ನಾನೇನು ಮಾಡುತ್ತಿರುವೆನೆಂಬುದು ನನಗೇ ತಿಳಿಯುತ್ತಿರಲಿಲ್ಲ ನೋಟನ್ನು ಹೊರಗೆ ತೆಗೆದು ತೆಗೆದು, ಆ ಮನುಷ್ಯನಿಗೆ ರೂಪಾಯಿಗಳ ಮಹತ್ತ್ವವನ್ನು ತೋರಿಸುವುದರಲ್ಲಿ ನನಗೆ ಆನಂದವೆನಿಸುತ್ತಿದ್ದಿತು ರೂಪಾಯಿ-ಗಳು ಯಾವ ಕಡೆಯಲ್ಲಿ ಹೆಚ್ಚಾಗಿರುವುವೊ ಅಲ್ಲ ಔಚಿತ್ಯ—ಅನೌ-ಚಿತ್ಯಗಳು ಉಳಿಯುವುದಿಲ್ಲ

ನಾನು ಕೊಟ್ಟ ಹತ್ತುತ್ತು ರೂಪಾಯಿಗಳ ಮೂರು ನೋಟು-ಗಳನ್ನೂ ತೆಗೆದುಕೊಂಡು ಆ ಮನುಷ್ಯ "ಹುಡುಕಿಕೊಂಡು ಬರುತ್ತೇನೆ ರಾಯರೆ!" ಎಂದು ಹೊರಟುಬಿಟ್ಟ

"ನರಿ! ಇನ್ನೂ ಇನಾಮು ಸಿಕ್ಕುವುದು, ಹೋಗು, ಹುಡುಕಿ-ಕೊಂಡು ಬಾ!"

* * *

ನಾದಿರಾ ದೊರೆತಳು ಅವಳು ಬೆಟ್ಟದ ಪಠಾಣರುಗಳ ಸಹಾಯದಿಂದ, ಸತ್ತುಹೋಗುತ್ತಿದ್ದ ಆಡನ್ನು ಬದುಕಿಸಿಕೊಂಡು ಬರಬೇಕೆಂಬ

ಯತ್ನದಲ್ಲಿದ್ದಳು. ಅವಳಿಗೆ ಹಗಲಾದುದು, ರಾತ್ರಿ ಕಳೆದುದು, ಹಸಿವಾದುದು ಗೊತ್ತೂ ಇರಲಿಲ್ಲ. ಗೊತ್ತಾಗದಿರುವ ಸಂಭವವೂ ಇಲ್ಲದಿರಲಿಲ್ಲ.

ಆದು ಸಾಯಲೂ ಇಲ್ಲ, ಬದುಕಲೂ ಇಲ್ಲ! ಚಿಕ್ಕಪ್ಪ ಹೋಗಿ ಹರಿಣಿಯಿಂದ ಪ್ರೀತಿಯಿಂದ ಬೀಳ್ಕೊಂಡಮೇಲೆ, ಆ ಕುರಿಯನ್ನು ಎತ್ತಿಕೊಂಡು ಮನೆಗೆ ಬಂದಳು. ಮರುದಿನ ಆ ಕುರಿಯು ಸತ್ತು-ಹೋಯಿತು. ನಾದಿರಾ ಅತ್ಯಂತ ದುಃಖಿತಳಾದಳು. ಶೂನ್ಯ-ಮನಸ್ಕಳಾದಳು.

ಒಂದು ದಿನ ರಾತ್ರಿ, ಎಂಟು-ಒಂಬತ್ತು ಗಂಟೆಯಾಗಿರಬಹುದು. ನೀಲಿಯ ಬಣ್ಣದ ಚಪ್ಲು, ಮತ್ತೊಂದು ಬಣ್ಣದ ಷರ್ಟ್, ಉತ್ತರೀಯ ಧರಿಸಿಕೊಂಡು, ಸ್ವರ್ಗದಿಂದ ದೇವತೆಯೊಬ್ಬಳು ಇಳಿದು ಬಂದು ನಿಂತುಕೊಂಡಿರುವಳೋ ಎನ್ನೋ—ಎಂಬಂತೆ ನಾದಿರಾ, ನನ್ನ ಹೊರಗೆ ಬಂದವಳು ನನ್ನ ಎದುರು ನಿಂತುಕೊಂಡಳು. ನಾವು ತನ್ನಿಂದ ಬಯಸುತ್ತಿರುವುದೇನು? ತಾನು ನಮಗಾಗಿ ಮಾಡಬೇಕಾದುದೇನು? ಇದುವರೆಗೂ ಅವಳಿಗೆ ತಿಳಿಯದಂತಾಗಿದ್ದಿತು. ಈಗ ಅವಳಲ್ಲಿ ಚಂಚಲತೆಯಿರಲಿಲ್ಲ, ಸ್ವಚ್ಛಂದತೆಯಿರಲಿಲ್ಲ. ಅವಳು ಕಿಂಕರ್ತವ್ಯವಿಮೂಢಳಾಗಿ ನಿಂತಿದ್ದಳು.

"ನಾದಿರಾ!" ಎಂದೆ.

ಅವಳು ಮೊದಲಿನಂತೆ ನನ್ನ ಕಣ್ಣುಗಳೆದುರು ಕೈ ಕುಣಿಸಲಿಲ್ಲ. ಪಶ್ತೋವಿನಲ್ಲಿ ಮಾತನಾಡಲಿಲ್ಲ, ನಗಲಿಲ್ಲ. ಅವಳ ಉಡುಪನ್ನು ಕಂಡು ನನ್ನ ಹೃದಯವು ಕರಗಿತು. ಕರುಣೆಯು ಹೃದಯದಲ್ಲಿ ಮೂಡಿಬಂದಿತು. ಆ ಬಟ್ಟೆಗಳು ಒಂದು ಮೂರ್ತಿಯ ಮೇಲೆ ಹೊಚ್ಚಿದ—ತೀರ ಹಳೆಯವಾಗಿ ಗುನಿಗದಿದ—ಬಟ್ಟೆಗಳಂತೆ ಕಾಣುತ್ತಿದ್ದುವು. ಅಂತಹ ಬಟ್ಟೆಗಳನ್ನು ತೊಟ್ಟು ಅವಳು ಶಿಲಾ-ಪ್ರತಿಮೆಯಂತೆ ನಿಂತಿದ್ದಳು.

"ನಾದಿರಾ!"

ಮೌನವಾಗಿದ್ದಳು.

ನನ್ನ ಅಂತಃಕರಣದಲ್ಲಿ ಕರುಣೆಯೊಂದೆ ತುಂಬಿ ತುಳುಕ-ತೊಡಗಿತು ಈ ವನಕನ್ಯೆಯ ಮೇಲೆ ಇಂತಹ ಈ ಕೃತ್ರಿಮ ಬಟ್ಟೆಗಳೇಕೆ ? ಒಂದು ನಿಮಿಷವಾದರೂ ಇವಳು ಹಸಿರಾಗಿ—ಪ್ರಫುಲ್ಲಿತಳಾಗಿ— ಇರಲಾರಳೆ ?

" ನಾದಿರಾ, ನೀನು ಹೇಳು ! "

ಮಾತನಾಡಲಿಲ್ಲ

" ಹೋಗು ಮನೆಗೆ ! ಹೋಗಿ ಕೆಲಸಮಾಡು ! ನಾವು ಒಂದೆರಡು ದಿನಗಳಲ್ಲಿ ಹೊರಟುಹೋಗುತ್ತೇವೆ ! " ಎಂದು ನಾನು ಸ್ವಲ್ಪ ನಕ್ಕು, ನನ್ನ ಒಂದು ಬೆರಳನ್ನು ನನ್ನ ಎದೆಯ ಮೇಲಿಟ್ಟು-ಕೊಂಡು, ಇನ್ನೊಂದು ಕೈಯ ಬೆರಳಿನಿಂದ ಆಕೆಯ ವಕ್ಷಃಸ್ಥಳದ ಕಡೆಗೆ ತೋರಿಸಿ " ನಾವು ಬಹು ದೂರ ಹೋಗುತ್ತೇವೆ, ನೀನು ನಮ್ಮನ್ನು ನಿನ್ನ ಹೃದಯದಲ್ಲಿಟ್ಟುಕೊಳ್ಳುತ್ತೀಯಲ್ಲವೇ ? " ಎಂದು ಮತ್ತೆ ನಕ್ಕೆ

ಮೌನವಾಗಿದ್ದಳು

ಮೂಕಪ್ರಾಣಿಯ ಅಲಂಕೃತ—ನಿಷ್ಪ್ರಾಣ—ಪರಿಸ್ಥಿತಿಯನ್ನು ಕಂಡು, ನನ್ನ ಮನಸ್ಸು ತನ್ನಷ್ಟಕ್ಕೆ ತಾನೆ ಕಾತರವಾಯಿತು, ಕರಗಿ ನೀರಾಯಿತು

ನಾನು ನನ್ನ ಒಬ್ಬ ನಂಬುಗೆಯ ಆಳುಮಗನನ್ನು ಕರೆದು, ಅವಳನ್ನು ಮನೆಗೆ ಹಿಂತಿರುಗಿ ಕಳುಹಿಸಿದೆ

ಮರುದಿನ ನಾನು ಅವಳ ಮನೆಗೆ ಹೋಗಿಬರುತ್ತೇನೆಂದು ಹೇಳಲಿಕ್ಕೆ ಹೋದಾಗ, ಅವಳು ಹೊರಸಿನ ಮೇಲೆ ಬಿದ್ದುಕೊಂಡಿದ್ದಳು ಅವಳಿಗೆ ಅಸಹನೀಯವಾದ ಪೆಟ್ಟುಗಳು ಬಿದ್ದಿದ್ದುವು ನಿನ್ನೆಯ ರಾತ್ರಿಯಲ್ಲಿ ಆಕೆಯ ಚಿಕ್ಕಪ್ಪ ಅವಳನ್ನು ಬಹಳವಾಗಿ ಹೊಡೆದಿದ್ದ ಅವಳು ಮನೆಗೆ ಹಿಂತಿರುಗಿ ಹೋಗುತ್ತಲೆ " ಏನು ತಂದಿದ್ದೀಯೆ ಕೊಡು ! " ಎಂದು ಕೇಳಿದ್ದ ಆತ

ಅವಳಿಗೆ ಆಶ್ಚರ್ಯವಾಯಿತು, ಸುಮ್ಮಗಿದ್ದಳು

ಚಿಕ್ಕಪ್ಪನು ಅವಳು ಗಳಿಸಿದ ಹಣವನ್ನು ಪಡೆಯಲಿಕ್ಕೆಂದು, ಅವಳನ್ನು ಹೊಡೆದು ಹೊಡೆದು ಹಣ್ಣುಹಣ್ಣು ಮಾಡಿದ್ದ ಕೊಂದರೆ ರೂಪಾಯಿ ಸಿಕ್ಕಲಿಕ್ಕಿಲ್ಲವೆಂದು ಕೊಂದಿರಲಿಲ್ಲವೇನೊ! ಆದುದರಿಂದಲೇ ನಾಳೆ ಕೊಂದರಾಯಿತೆಂದು ಬಿಟ್ಟಿದ್ದನೊ ಏನೊ !

ಆಗ ನನಗೆ ಏನೂ ಹೊಳೆಯಲಿಲ್ಲ ನಾನು ಒಳಕ್ಕೆ ಹೋದೆ ಹೊರಸಿನ ಮೇಲೆ ನಾದಿರಾ ಬಿದ್ದುಕೊಂಡಿದ್ದಳು ಅವಳ ಶರೀರದ ಅಂಗಾಂಗಗಳಲ್ಲಿ ಅಲ್ಲಲ್ಲ ಬಾವು ಇದ್ದಿತು; ಅಲ್ಲಲ್ಲಿ ಗಾಯಗಳಾಗಿದ್ದುವು ಅವಳು ನನ್ನನ್ನು ಕಣ್ತೆರೆದು ನೋಡಿದಳು ಅವಳಾ ಕಣ್ಣುಗಳು ಜಿಂಕೆಯ ಕಣ್ಣುಗಳಾಗಿದ್ದುವು ಅವುಗಳಲ್ಲಿ ಅಪರಾಧ ವಿರಲಿಲ್ಲ, ಪೀಡೆಯಿರಲಿಲ್ಲ ಅವುಗಳಲ್ಲಿ ಅಪೇಕ್ಷೆಯೂ ಇರಲಿಲ್ಲ, ನಿರಪೇಕ್ಷೆಯೂ ಇರಲಿಲ್ಲ

ನಾನೆಂದೆ " ನಾದಿರಾ ! "

ನನ್ನ ಸಂಬೋಧನೆಯ ಸ್ವರವು ಕೇಳಿಸಿತೊ ಏನೊ ! ಅದು ಅವಳ ಹೃದಯವನ್ನು ಅಲುಗಿಸಿತೊ ಏನೊ !

ಅವಳ ಸನಿಹಕ್ಕೆ ಹೋಗಿ ಅವಳ ಮುಖದ ಕಡೆಗೆ ಬಾಗಿ " ನಾದಿರಾ ! " ಎಂದೆ

ಅವಳು ನನ್ನವೆರಡೂ ಕೈಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡಳು ಕಣ್ಣುಗಳಿಂದ ಕಂಬನಿಗಳು ಉದುರತೊಡಗಿದುವು ಆಗ ಅವಳಿಗೆ ದುಃಖದಿಂದ ತನ್ನ ದೇಹವೂ ಬೇಡವಾಗಿದ್ದಿತೋ ಏನೊ ! ಹರಿಣದಂತಹ ಬಟ್ಟಲುಗಣ್ಣುಗಳನ್ನು ಹನಿಗಳಿಂದ ತುಂಬಿಕೊಂಡು, ಅದಾವ ಭಾವನೆಯಿಂದ ನನ್ನ ಕಡೆಗೆ ನೋಡತೊಡಗಿದಳೋ ಹೇಳಲಾರೆ ! 'ನನ್ನನ್ನು ನೋಡತೊಡಗಿದಳು' ಎಂದು ಮಾತ್ರ ಹೇಳಬಹುದು ಆಗ ನನ್ನ ಶರೀರದ ಪ್ರತಿಯೊಂದು ಅಣು-ಅಣುವೂ ಸಾಕ್ಷಿಯನ್ನಿತ್ತಿತು " ಓಹೋ, ಇವಳು ಹೆಂಗುಸು ! ಇವಳು ಪ್ರಣಯಿನಿಯು ಎಂದಿರಲಿಲ್ಲ ! "

ನಾನು—

ನಾನು ಹಿಂತಿರುಗಿ ನೋಡಿದೆ ಆಕೆಯ ಚಿಕ್ಕಪ್ಪನ ಮುಖದ ಮೇಲೆ ದುರ್ವಿಚಾರಗಳು ಮೂಡಿದ್ದುವು ಅವನು ಮೆಲ್ಲಮೆಲ್ಲಗೆ ನನ್ನೆಡೆಗೆ ಬರುತ್ತಿದ್ದ ನಾನು ಕೈಬಿಡಿಸಿಕೊಳ್ಳಲು ಯತ್ನಿಸಿದೆ ಅವಳು ಕಪೋತಿನಿಯಂತೆ ಕಾತರಳಾಗಿ ಕೂಗಿದಳು— "ಬಾಬೂ ! ಬಾಬೂ !"

ಆಕೆಯ ಚಿಕ್ಕಪ್ಪನ ಕೈಯಲ್ಲಿ ಚೂರಿಯಿದ್ದುದು ನನಗೆ ಕಂಡಿತು ನಾನು ಒಮ್ಮೆಲೆ ಅವನನ್ನು ಬೂಟುಗಾಲಿನಿಂದ ಒದ್ದು ಬಿಟ್ಟೆ, ಅವನು ಬಿದ್ದುಬಿಟ್ಟ ಅವನ ಕಡೆಗೆ ಮತ್ತೆ ನೂರು ರೂಪಾಯಿಗಳದೊಂದು ನೋಟು ಎಸೆದು 'ತೆಗೆದುಕೊ !' ಎಂದು ನಾನು ಹೊರಟು ಬಂದೆ

ನಾನು ಹೊರಟೇನೋ ಬಂದೆ ಆದರೆ ನಾದಿರಾ ಹೆಣ್ಣೆನಿಸಿ-ಕೊಳ್ಳಲಿಕ್ಕೆ ಇದುವರೆಗೆ ಯಾರಾದರೂ ಅವಳಿಗೆ ಅವಕಾಶ ಕೊಟ್ಟಿರುವರೋ ಇಲ್ಲವೋ ನಾನರಿಯೆ 'ಅವಳ ಮಾತೃತ್ವವು ಸಫಲವಾಗಿ ಅವಳ ತೊಡೆಯು ಮಾನವಶಿಶುವನ್ನು ಎಂದಾದರೂ ಪಡೆದೀತೆ ? ಅಥವಾ ಅವಳ ತಾಯಿಪ್ರೀತಿಯೆಲ್ಲ ಆ ಕುರಿ-ಆಡು-ಮರಿಗಳಿಗಾಗಿಯೆ ಮೀಸಲಾಗಿರುವುದೋ' ಎಂದು ನಾನು ಯೋಚಿಸುತ್ತಿರುತ್ತೇನೆ

# ಗಂಡ-ಹೆಂಡತಿ    

ನ್ಯಾಯಾಧೀಶರು ದಿನಕರನಿಗೆ ಗಲ್ಲಿನ ಶಿಕ್ಷೆಯನ್ನು ವಿಧಿಸಿದರು ಅದಕ್ಕಾಗಿ ಅವನು ನಸುನಗುತ್ತ “ ಥ್ಯಾಂಕ್ಯೂ ” ಎಂದು ನ್ಯಾಯಾಧೀಶರಿಗೆ ಅಭಿನಂದನೆಗಳನ್ನರ್ಪಿಸಿದ

ಅಂದೆಯೆ ಸಾಯಂಕಾಲ ದಿನಕರನು ತನ್ನ ಕಿರುಮನೆಯಲ್ಲಿ ಎಡೆಯಾಡುತ್ತ ಯೋಚಿಸತೊಡಗಿದ “ ನಾನು ‘ ಥ್ಯಾಂಕ್ಯೂ ’ ಎಂದು ನ್ಯಾಯಾಧೀಶರನ್ನು ಏತಕ್ಕಾಗಿ ಅಭಿನಂದಿಸಬೇಕಾಗಿತ್ತು ? ಇಷ್ಟು ದಿವಸಗಳ ಬಳಿಕ ನೀನು ಜೀವಿಸಿರಲಾರೆಯೆಂದು ನಿರ್ಣಯ ಹೇಳುವವನಿಗಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಬೇಕೆ ? ನನ್ನೊಳಗೆ ನಿಜವಾಗಿ ಕೃತಜ್ಞತೆಯು ಇದೆಯೇ ? ಕೃತಜ್ಞತೆಯನ್ನು ಸಲ್ಲಿಸಲಿಕ್ಕೆ ನನಗೇನಾದರೂ ಸಂತೋಷವಾಗಿರಬೇಕಲ್ಲವೇ ? ನಾನಿಂದು ಕೃತಜ್ಞತೆಯನ್ನು ಸಲ್ಲಿಸಿದುದೆಂದರೆ ಅಸತ್ಯಾಚರಣೆಯನ್ನು ಮಾಡಿದಂತಲ್ಲವೆ ? ನಾನೆಂದ ‘ಥ್ಯಾಂಕ್ಯೂ’ ಎಂಬ ಪದಕ್ಕೆ ಏನೆಂದು ಅರ್ಥಮಾಡಬೇಕು ? ನಾನು ಅಳಬೇಕಾಗಿದ್ದಿತೇನು ಮತ್ತೆ ! ಇಲ್ಲ ! ಅದಕ್ಕಾಗಿಯೆ ನಾನು ನಕ್ಕೆನೆ ? ಇಲ್ಲ ಅಳಬೇಕೆನ್ನುವ ಅಭಿಲಾಷೆಯೂ ನನಗಿಲ್ಲ, ನಾನು ಅಳಬೇಕಾದುದೂ ಇಲ್ಲ ಹಾಂ ! ಇನ್ನು ನಾನು ಇಷ್ಟೇ ದಿವಸಗಳ ವರೆಗೆ ಬದುಕಿರಬೇಕೆಂದು ತೀರ್ಮಾನವಾಗಿದೆ ಆ ಮೇಲೆಯೂ ಸಾವು ತನ್ನಿಂದ ತಾನೆ ನನ್ನ ಬಳಿಗೆ ಸರಿಯುತ್ತ ಬರಬೇಕಾದುದಿಲ್ಲ, ನನ್ನ ಕುತ್ತಿಗೆಗೆ ಉರುಲು ಹಾಕಿ ಕೊಲ್ಲಬೇಕೆಂದು, ನನ್ನ ಪ್ರಾಣಗಳನ್ನು ಕಸಿದುಕೊಳ್ಳಬೇಕೆಂದು ವಿಧಿಸಲಾಗಿದೆ ಇದು ಸಂತೋಷಕರವಾದುದೆಂದೂ ಸುಖಕರವಾದುದೆಂದೂ ನಾನು ಹೇಳಿದರೆ ಸುಳ್ಳು ಹೇಳಿದಂತಾಗುವುದು.

ನಾನು ಜೀವಿಸಿರುವಾಗಲೆ ನನ್ನನ್ನು ಕೊಲ್ಲುವುದೆಂದರೆ ಸುಖಕರವಾದುದೇ? ಆ ಉರುಲುಗಂಬವನ್ನು ಕಂಡು ನನಗೆ ಸುಖವಾಗಬೇಕಾಗಿತ್ತು! ಅದು ನನ್ನನ್ನು ಹೆಚ್ಚಾಗಿ ಆಕರ್ಷಿಸಿಕೊಳ್ಳಬೇಕಾಗಿದ್ದಿತು! ಆದರೆ ಅದು ನನ್ನನ್ನು ಆಕರ್ಷಿಸಿಕೊಳ್ಳಲೊಲ್ಲದು ನನಗೆ ಅಪವಿತ್ರವಾಗಿ, ಅಶುಚಿಯಾಗಿ, ಕುರೂಪಿಯಾಗಿ ಅದು ಕಾಣುತ್ತಿದೆ ಅದನ್ನು ನೋಡಬೇಕೆಂಬ ಇಚ್ಛೆಯು ಕೂಡ ಇಲ್ಲ ನನಗ ಏನು ' ಮಾಗಿದ್ದರೆ ಪ ನನ್ನ ಹೇಳಲು ಬಯಸುತ್ತಿದೆಯ ' ಇಲ್ಲ! ಈ ಉರುಲಿನ ಚಿತ್ರವು ವಿಕಾರವಾಗಿ ನನ್ನ ಮನಸ್ಸು ಎಳ್ಳಷ್ಟೂ ಆಗಲು ಬಯಸುವುದಿಲ್ಲ ನಾನು ಪಿಸ್ಸರ್ಗ ಮಾಡಿದ ನಾನನನ್ನು ಮಾಡಿರುವನೆಂಬುದನ್ನೂ ನಾನು ಬಲ್ಲೆ ಅದನ್ನು ಮಾಡುವಾಗ ನನಗೆ ಈ ಫಲವು ದೊರೆಯುವುದೆಂಬುದನ್ನು ಅರಿತಿದ್ದೆ! ಗಲ್ಲು! ಇದೇನು? ಇದರ ಅರ್ಥವೆ ನನಗೆ ಚೆನ್ನಾಗಿ ಆಗಲಾರದು ಗಲ್ಲಿನ ವ್ಯಾಪಕಾರ್ಥದ ಇಷ್ಟೊಂದು ಅಂಶದ ಅರ್ಥವಾಗುತ್ತಿದ್ದಿತು "ನಾನು ಯಾರೊಡನೆ ಮಾತನಾಡುವನೊ, ಯಾರನ್ನು ಕಾಣುವನೊ, ಯಾರಿಂದ ಪ್ರೇಮವನ್ನು ಪಡೆಯುತ್ತಿರುವನೊ, ಯಾರಿಗೆ ಪ್ರೇಮವನ್ನು ಕೊಡುತ್ತಿರುವೆನೊ, ಯಾರ ಹೃದಯಮಂದಿರದಲ್ಲಿದ್ದು ಜೀವನವನ್ನು ಸುಖಕರ ಮಾಡುತ್ತಿದ್ದೆನೊ ಅವರೆಲ್ಲರೂ ನನ್ನಿಂದ ದೂರವಾಗುವರು, ಅವರೆಲ್ಲರಿಂದಲೂ ನಾನು ದೂರ-ಅತಿದೂರನಾಗಿ ಬಿಡುವೆನು, ಅವರಿಗಾಗಿ ಜೀವಿಸಿರುವುದಕ್ಕೆ ನನಗೆ ಬಾರದು! ಆ ಮೇಲೆ ನಾನೇನು? ನಿಃಶೇಷನಾಗುವೆನು, ಶೂನ್ಯವಾಗಿ ಹೋಗುವೆನು!" ಗಲ್ಲೆಂದರೆ ನನಗಾಗ ಇಷ್ಟು ಮಾತ್ರ ಭಾವನೆಯಾಗಿದ್ದಿತು ಆದುದರಿಂದ ಗಲ್ಲೆಂದರೆ ನನ್ನ ಹೃದಯವು ತಲ್ಲಣಗೊಳ್ಳುತ್ತಿರಲಿಲ್ಲ, ಇಷ್ಟೆ ಅಲ್ಲ, ಅದನ್ನು ಸ್ವೀಕರಿಸುವುದರಿಂದ 'ದುಃಖಗಳಿಂದ ಬಿಡುಗಡೆ ಹೊಂದುವೆನು, ನನಗೆ ಸುಖವು ಸಿಕ್ಕುವುದು' ಎಂದು ಎನಿಸುತ್ತಿದ್ದಿತು. ಈಗಲೂ ಹಾಗೆಯೆ ಎನಿಸುತ್ತಿದೆಯಾದರೂ ಅದನ್ನು ನೋಡಬೇಕೆನ್ನುವ ಇಚ್ಛೆ ನನ್ನಲ್ಲೇಕೆ ಉಂಟಾಗಲೊಲ್ಲದು

"ಇಂದಿನ ವರೆಗೂ—ಬಾಳಿನ ಕೊನೆಯ ದಂಡೆಗೆ ಬಂದು ತಲುಪುವ ವರೆಗೂ-—ನಾನು ನನ್ನ ಮಾತುಗಳ ಕಡೆಗೆ ಮಾತ್ರ ಲಕ್ಷ್ಯಕೊಟ್ಟಿದ್ದೇನೆ ನನಗೆ ಯಾವುದು ಸರಿಯೆನಿಸುತ್ತಿದ್ದಿತೊ! ಅದನ್ನಷ್ಟೆ ಮಾಡಿದ್ದೇನೆ, ಮಾಡಿದುದನ್ನು ಮನಃಪೂರ್ವಕವಾಗಿ ಮಾಡಿದ್ದೇನೆ, ಎಂತಲೇ ಅದರ ಪ್ರತಿಫಲವು ನನಗೆ ಸಿಕ್ಕದೆ ಇಲ್ಲ, ಸಿಕ್ಕೇ ಸಿಕ್ಕಿದೆ ಅದಕ್ಕಾಗಿ ನನಗೆ ಖೇದವು ಸ್ವಲ್ಪವೂ ಇಲ್ಲ, ಆದರೆ ಈಗ ನನಗೆ ಒಂದೇ ಒಂದು ಯೋಚನೆಯು ಬರುತ್ತಿದೆ—"ನಾನು ಕೇವಲ ನನ್ನವನಾಗಿಯೆ ಇದ್ದೇನೆ, ನನ್ನ ಆಶೆ ಆಕಾಂಕ್ಷೆಗಳಲ್ಲಿ ತನ್ನ ಆಶಾ-ಆಕಾಂಕ್ಷೆಗಳನ್ನೂ, ನನ್ನ ಭವಿತವ್ಯದಲ್ಲಿಯೆ ತನ್ನ ಭವಿತವ್ಯವನ್ನೂ, ಪ್ರೇಮವನ್ನೂ, ಜೀವನವನ್ನೂ ಒಂದಾಗಿಸಿ ಬೆರೆದು, ನನ್ನನ್ನೇ ಅವಲಂಬಿಸಿಕೊಂಡು ಜೀವಿಸುವವಳ ಕಲವು ಭಾಗವೂ ನನ್ನಲ್ಲಿದ್ದಿತು ಆವಳಿಗೆ ನಾನು ಏನನ್ನು ಸಲ್ಲಿಸಿದ? ಅವಳಿಗಾಗಿ ನಾನೇನು ಮಾಡಿದೆ? ನಮ್ಮ ಜನ್ಮಸಿದ್ಧವಾದ ಹಕ್ಕು ಯಾವುದೆಂದು ನಾನು ಬಗೆದಿದ್ದೆನೋ, ಯಾವುದು ಆದರ್ಶವೆಂದು ಅರಿತುಕೊಂಡಿದ್ದೆನೋ ಅದಕ್ಕಾಗಿಯೆ ನಾನು ನನ್ನ ಸರ್ವಸ್ವವನ್ನು ಸಮರ್ಪಣೆ ಮಾಡಲಿಲ್ಲವೆ? ನನ್ನ ಕಾರ್ಯಫಲದಲ್ಲಿ ಅವಳಿಗೆ ಅಂಶಮಾತ್ರವೂ ಸಿಕ್ಕುವುದೇನು? ಏನು ಸಿಕ್ಕಬೇಕು? ನಾನು ಅಲ್ಪಸ್ವಲ್ಪವಾಗಿ ಏನನಾದರೂ ಮಾಡುವಳ ಜೀವನದ ಈ ಕೊನೆಯ ದಂಡೆಯನ್ನು ಮುಟ್ಟುತ್ತಿರುವಾಗಲೂ, ನಾನು ನನ್ನ ಕರ್ತವ್ಯವನ್ನು ಪೂರ್ಣ ಮಾಡಿದಂತಾಯಿ [illegible] ಮಾರ್ಗವು ಉಚಿತವಾಯಿತೆ?

" ರಾಷ್ಟ್ರವಿದೆ, ಆದರ್ಶ [illegible], [illegible]ತಮಾತೆಯೂ ಇದ್ದಾಳೆ ಇದನ್ನೆಲ್ಲ ಒಪ್ಪಿದೆ [illegible] ಬಂಧಗಳನ್ನು ಕಡಿಯಬೇಕಾಗಿದೆಯೆಂಬುದನ್ನೂ ಒಪ್ಪಿದೆ ಆದರೆ ನನ್ನನ್ನು [illegible] ತಾಯಿತಂದೆಗಳಿದ್ದುದೂ ನಿಜವೇ [illegible] ಅಣ್ಣತಮ್ಮಂದಿರು-ಗಳಿಲ್ಲವೆ? ಆ ಇನ್ನೂ ಏನನ್ನೂ ಅರಿಯದ ಹಸುಳೆ ಹೆಂಡತಿ ಇಲ್ಲವೆ?

ಇವರ ದುಃಖದ ಬೇಡಿಗಳನ್ನೂ ನಾನು ಕಡಿಯಬೇಕಾಗಿಲ್ಲವೆ, ಎಂದೂ ನನಗೆನಿಸುತ್ತದೆ

" ನನಗೆ ದುಃಖವೆಷ್ಟು ಇಲ್ಲ ಎಂದೆ, ಎಷ್ಟು ತ್ರಾಸ ಇದ್ದೇನೆ ನನ್ನನ್ನು ಕಂಡು ಮರುಗುವವರು ಮರುಗಲಿ ಪಶ್ಚಾತ್ತಾಪ-ಪಡುವವರು ಪಡಲಿ ನಾನು ನಿಶ್ಚಲನಾಗಿರುತ್ತೇನೆ ಇಲ್ಲಿಂದ ನಾನು ಹಿಂತಿರುಗ ಬಯಸುವುದಿಲ್ಲ ಹಿಂತಿರುಗಬೇಕೆಂದು ನಾನಿಲ್ಲಿಗೆ ಬಂದಿಲ್ಲ ಗಲ್ಲಿನ ಶಿಕ್ಷೆ ಬರಲಿದೆ, ಬರಲಿ ನನಗೆ ಯಾವ ಚಿಂತೆಯೂ ಇಲ್ಲ 'ಸ್ವಲ್ಪ ತಾಳು, ಇದನ್ನಷ್ಟು ಮಾಡಿ ಬರುತ್ತೇನೆ', ಎಂದೂ 'ಸದ್ಯ ನೀನು ಹಿಂತಿರುಗು' ಎಂದೂ ನನ್ನ ಶಿಕ್ಷಾದೇವತೆಗೆ ಹೇಳುವ ಇಚ್ಛೆ ನನಗೆ ಸ್ವಲ್ಪವೂ ಇಲ್ಲ ಅಲ್ಲದೆ ನನ್ನ ಅದೃಷ್ಟದೊಂದಿಗೆ ಒಂದೆರಡು ಮಾತುಕತೆಗಳನ್ನೂ ನಾನು ಆಡಲು ಬಯಸುವದಿಲ್ಲ, ವಾದವಿವಾದ ಮಾಡಲು ಆಶಿಸುವುದಿಲ್ಲ ನಾನು ಮಾಡಬೇಕಾದುದನ್ನು ಮಾಡಿದ್ದೇನೆ, ನೀನು ಮಾಡಬೇಕಾದುದನ್ನು ನೀನು ಮಾಡು, ಅದಕ್ಕೆ ನಾನಂಜುವವನಲ್ಲವೆಂದು ಅದಕ್ಕೆ ಹೇಳಿಬಿಡುತ್ತೇನೆ ಭವಿಷ್ಯ-ದೊಡೆಯನ ಎದುರಲ್ಲಿ, ಅದೃಷ್ಟದೇವತೆಯ ಎದುರಲ್ಲಿ ಭಿಕ್ಷೆಯನ್ನು ನಾನೆಂದೂ ಬೇಡಲಾರೆ, ಏಕೆಂದರೆ ನಾನು ವರ್ತಮಾನಕಾಲದ ಒಡೆಯ ಮುಂದಾಗುವುದನ್ನು ಕಟ್ಟಿಕೊಂಡು ನಾನೇತಕ್ಕೆ ರೋದಿಸಬೇಕು! ಏತಕ್ಕೆ ಚಿಂತಿಸಬೇಕು! ಮುಂದೆ ಶಿಕ್ಷೆ ಇದೆಯೊ ಸ್ವರ್ಗವಿದೆಯೊ ಎಂಬುದನ್ನೂ ನಾನು ಯೋಚಿಸಬೇಕಾಗಿಲ್ಲ ನಾನು ಗಲ್ಲಿಗೇರಿಸಬೇಕಾದ ಜನರ ಕಿರುಮನೆಯಲ್ಲಿದ್ದೇನೆ ನನಗೆ ಉಚಿತ-ವೆನಿಸಿದುದನ್ನು ಮಾಡುತ್ತೇನೆ ಎಂಬುದು ಮಾತ್ರ ನಾನರಿತ ವಿಷಯ ಉಳಿದುದಾವುದೂ ನನಗೆ ಗೊತ್ತಿಲ್ಲ, ಗೊತ್ತುಮಾಡಿಕೊಳ್ಳಬೇಕೆಂಬ ಆಶೆಯೂ ನನಗಿಲ್ಲ ಬರುವುದು ಬರಲಿ, ಆಗುವುದು ಆಗಿ ಹೋಗಲಿ ಇನಾಮು ಸಿಕ್ಕುವುದಿದ್ದರೆ ಇನಾಮು ಸಿಕ್ಕಲಿ, ಗಲ್ಲು ಆಗುವುದಿದ್ದರೆ ಗಲ್ಲು ಆಗಲಿ! ಭಾಗ್ಯದೇವತೆಯು ನನ್ನ ವಿಷಯದಲ್ಲಿ ಪ್ರಸನ್ನಳೋ ಅಪ್ರಸನ್ನಳೋ ಆಗಿರುವಳೆಂದು ನಾನೇತಕ್ಕೆ ಯೋಚಿಸಬೇಕು?

"ಹಿಂತಿರುಗಬೇಕೆಂಬ ಇಚ್ಛೆಯು ನನಗಿಲ್ಲ, ನಿಜ! ಆದರೆ ತಂದೆತಾಯಂದರ, ಅಣ್ಣತಮ್ಮಂದಿರ, ಪತ್ನಿಯ ಸಲುವಾಗಿ ನಾನು ಏನನ್ನೂ ಮಾಡಿರುವುದಿಲ್ಲ, ಎಂದ ಮೇಲೆ ನಾನು ಯಾರಿಗೋಸ್ಕರವಾಗಿಯೂ ನನ್ನ ಸರ್ವಸ್ವವನ್ನೂ ಅರ್ಪಣ ಮಾಡಿಲ್ಲ-ವೆಂದಂತೆ ಆಯಿತು ನಾನು ನನ್ನನ್ನು ಸಮರ್ಪಿಸಿಲ್ಲವೆಂದಂತೆಯೂ ನನ್ನನ್ನು ನಾನು ಉಳಿಸಿಕೊಂಡಂತೆಯೂ ಆಯಿತು ನನ್ನ ಸರ್ವಸ್ವದ ತ್ಯಾಗವನ್ನು ಮಾಡಿದಂತಾಗಲಿಲ್ಲ, ಕಳೆದುಕೊಂಡಂತಾಯಿತು ನಾನು ನನ್ನನ್ನು ರಾಷ್ಟ್ರಕ್ಕೆ ಅರ್ಪಿಸಿದೆ ನಿಜ! ರಾಷ್ಟ್ರವೆಂದರೇನು ಹಾಗಾದರೆ? ನಾನು ನನ್ನನ್ನು ಆದರ್ಶಕ್ಕೆ ಸಮರ್ಪಿಸಿದ್ದೇನೆ, ನಿಜ! ಆದರ್ಶ-ವೆಂದರೇನು ಹಾಗಾದರ? ಆ ರಾಷ್ಟ್ರ, ಆ ಆದರ್ಶ, ಪತ್ನಿಯನ್ನು ಹೊರದೂಡಿಸುವಷ್ಟು ತುಚ್ಛವಸ್ತುಗಳಾಗಿವೆಯೆ? ತಂದತಾಯಂದಿರು, ಅಣ್ಣತಮ್ಮಂದಿರು ಆ ರಾಷ್ಟ್ರದ— ಆ ಆದರ್ಶದ—ಸೀಮೆಯ ಹೊರಗಿದ್ದಾರೆಯೆ? ಈ ಬಂಧುಬಳಗದವರಿಗೆ ಎಡಗೊಡದಷ್ಟು ಅವುಗಳ ಸೀಮೆಯು ಚಿಕ್ಕದಿದೆಯೆ?

"ಈಗ ಈ ಮಾತುಗಳಿಂದೇನು ಪ್ರಯೋಜನ ನನಗೆ? ನಾನು ಇನ್ನು ಹಿಂತಿರುಗುವಂತಿಲ್ಲ ಹಿಂತಿರುಗುವುದನ್ನೂ ನಾನು ಬಯಸುವುದಿಲ್ಲ ಇದು ವರೆಗೆ ನಾನು ಬಂಧು ಬಳಗದವರಿಗಾಗಿ, ಇಷ್ಟಮಿತ್ರರಿಗಾಗಿ ಏನನೂ ಮಾಡಲಿಲ್ಲ, ನಿಜ, ಈಗ ಅದನ್ನು ಚಿಂತಿಸುತ್ತ ಕುಳಿತುಕೊಳ್ಳುವುದರಿಂದೇನು ಪ್ರಯೋಜನ? ಮಾಡ-ಬೇಕಾದುದು ಅದೆಷ್ಟೊ ಇದ್ದಿತು, ನಾನು ಮಾಡಲಿಲ್ಲ! ಮನದೊಳಗೆ ಇಚ್ಛೆಗಳು ಮಿತಿಮೀರಿ ಇವೆ, ಅವು ಪೂರ್ಣವಾಗುವುದಕ್ಕಾಗಿ ಇವೆಯೆ? ಕಲ್ಪನೆಯು ಇದೆ, ಅದೇನು ಕಾರ್ಯರೂಪದಲ್ಲಿ ಪೂರ್ತಿಯಾಗಿ ಇಳಿಯುವುದಕ್ಕಿದೆಯೆ? ಇಲ್ಲ! ನಮ್ಮ ಆಶೆಆಕಾಂಕ್ಷೆಗಳು, ಕಲ್ಪನೆಗಳು ಪೂರ್ತಿಯಾಗಿ ಈಡೇರುವುದಿಲ್ಲ, ನಿಜ! ಆದರೆ ಅವು ನಮ್ಮನ್ನು ಹೇಡಿಗಳೆಂದ ತಿಳಿದು ನಮ್ಮನ್ನು ಕೆಳಗೆ ತುಳಿಯುವು-ದಕ್ಕಾಗಿ, ನಮ್ಮ ಮೇಲೆ ಅಖಂಡ ಅಧಿಕಾರವನ್ನು ನಡೆಯಿಸುವು-ದಕ್ಕಾಗಿಯೆ ಇವೆಯೆ? ಇಲ್ಲ! ಎಂದಿಗೂ ಇಲ್ಲ! ..

" ಈಗ ನನ್ನ ಹೆಂಡತಿ ಇಪ್ಪತ್ತು ವಯಸ್ಸಿನವಳಿರ ಬಹುದು ಅವಳು ಹದಿನೈದು ವರ್ಷದವಳಿದ್ದಾಗ ನಾನು ಅಮೇರಿಕೆಗೆ ಹೋದೆ, ಹದಿನೆಂಟು ವರ್ಷದವಳಾದಾಗ ಹಿಂತಿರುಗಿ ಬಂದೆ ಮಾತೃಭೂಮಿಗೆ ಅವಳು ನನ್ನನ್ನು ನೋಡಿರಲಿಲ್ಲ ಕೂಡ, ಆಕೆ ಮಾಡಿದ ಟೀ ಕುಡಿಯಲು ನಾನು ಒಳಕ್ಕೆ ಹೋದಾಗ ಆಕೆ ನನ್ನನ್ನು ನೋಡಬೇಕೆಂದಿದ್ದಳು ಅಷ್ಟರಲ್ಲಿಯೆ ನಾನು ಬಂಧಿಸಲ್ಪಟ್ಟೆ ಈಗ ಅವಳಿಗೆ ೨೦-೨೧ ವರ್ಷಗಳಾಗಿರಬಹುದು, ನಾನು ಇಲ್ಲಿ ಗಲ್ಲಿಗೇರಿ ಮುಗಿದು ಹೋಗುತ್ತೇನೆ

" ಯಾರವಳು ? ನನ್ನ ಹೆಂಡತಿ! ಹೆಂಡತಿಯೆಂದರೆ ಯಾರು ? ಯಾರೊಡನೆ ವಿವಾಹವಾಗಿದೆಯೊ ಅವಳು ! ವಿವಾಹ ? ಈ ವಿವಾಹವು ಒಂದು ಅದ್ಭುತವಾದ ತತ್ತ್ವವು ಮನುಷ್ಯನಿಂದ ನಿರ್ಮಿತವಾದ ಅನೇಕ ಸಂಸ್ಥೆಗಳಲ್ಲಿ ಇದಕ್ಕಿಂತ ಹೆಚ್ಚಿನದಾದ ಸಂಸ್ಥೆಯು ಮತ್ತೊಂದು ಯಾವುದಿದೆ ? ' ಅನ್ಯರಲಿ ಜನಿಸಿದರ್ ಅಂಗನಯ ಕರೆತಂದು ' ಒಂದು ಮಹಾ ಅದ್ಭುತ ಮಂತ್ರವನ್ನು ಉಚ್ಚಾರ ಮಾಡಿಸಿ, ಕೆಲವೊಂದು ನಿಮಿಷಗಳಲ್ಲಯೆ—ಜೀವನ ಪರ್ಯಂತರವೂ ಒಂದಾಗಿರಬೇಕೆಂದು—ಕಟ್ಟುಮಾಡಿದ ವಿಧಿಗೆ ವಿವಾಹವೆಂದು ಹೆಸರು ಈ ವಿವಾಹದ ಅರ್ಥವೆಂದರೆ ಇಷ್ಟೆ ಸತ್ತರೆ ಇಬ್ಬರೂ ಸಾಯಬೇಕು, ಜೀವಿಸಿದರೆ ಇಬ್ಬರೂ ಜೀವಿಸಿರಬೇಕು ಸುಖ-ದುಃಖಗಳಲ್ಲಿ, ಜೀವನ-ಮರಣದಲ್ಲಿ, ಲಾಭ-ಹಾನಿಗಳಲ್ಲಿ ಯಶ-ಅಪಯಶಗಳಲ್ಲಿ, ಮಾನ-ಅಪಮಾನಗಳಲ್ಲಿ ಇಬ್ಬರೂ ಸಮಭಾಗಿಗಳಾಗಿರ ಬೇಕು ವಿವಾಹವಾಯಿತು, ಆ ಹದಿನೈದು ವರ್ಷದ ಹುಡುಗಿ-ಯನ್ನು ನನ್ನೊಡನೆ ಬಂಧಿಸಿದರು, ನನ್ನ ಜೀವನದ ಜೊತೆಗಾತಿ-ಯನ್ನಾಗಿಸಿದರು ಈಗ ನಾನು ಗಲ್ಲಿನ ಅಪರಾಧಿಗಳ ಕಿರುಮನೆ-ಯಲ್ಲಿದ್ದೇನೆ, ಅವಳು ತನ್ನ ಮನೆಯಲ್ಲಿದ್ದಾಳೆ

**"... . ವಿವಾಹ ಸಂಸ್ಥೆಯನ್ನು ಮನುಷ್ಯನು ನಿರ್ಮಿಸಿದ-ನೆಂಬುದನ್ನು ಒಪ್ಪಿಕೊಂಡೆ ಇದಕ್ಕಿಂತ ಸುಂದರತರವಾದುದನ್ನು ಅವನು ನಿರ್ಮಿಸಲಿಲ್ಲವೆಂಬುದನ್ನೂ ಒಪ್ಪಿಕೊಂಡೆ ವಿವಾಹ**

ಸಂಸ್ಥೆಯ ರಕ್ಷಣೆಯಾಗದಿದ್ದರೆ ನಿನು ಮಾಡಬೇಕು? ಯಾರು ವಿವಾಹ ಧರ್ಮವನ್ನು ಪಾಲಿಸಲಾರರೋ ಅವರಿಗೇನು ಮಾಡಬೇಕು? ಇದಕ್ಕೇನಾದರೂ ಉಪಾಯವಿದೆಯೆ?

"ನಾನು ಸಾಯುವವನು! ಆದರೆ ಆ ನಿನೂ ಅರಿಯದ ಕುಮಾರಿಯ ಪತ್ನೀತ್ವವು, ನಿಷ್ಠುರ ಪತಿತ್ವದ ದಾರಿಯನ್ನು ಕಾಯುತ್ತ ಚಿರಕಾಲದವರೆಗೆ—ಬದುಕಿನ ಕೊನೆಗಾಲದವರೆಗೆ—ಕುಳಿತಿರಬೇಕೆ? ನಾನು ನನ್ನ ಕೃತಿಗಾಗಿ ಸಾಯುತ್ತಿದ್ದೇನೆ, ಈ ಗಲ್ಲು ನನ್ನ ಕಾರ್ಯಕ್ಕಾಗಿ ದೊರೆತ ಪಾರಿತೋಷಿಕವಿರಬಹುದು, ಇಲ್ಲವೆ ದಂಡನೆಯಾಗಿ ಆಗಿರಬಹುದು ಜೀವನಪರ್ಯಂತರವೂ ಕೂಡಿರಬೇಕಾದ ಯಾವಳನ್ನು ನಾನು ನನ್ನೊಡನೆ ಒಪ್ಪಿಸಿಕೊಂಡೆನೋ, ಆವಳು ನನ್ನ ಕಾರ್ಯಕ್ಕಾಗಿ ಉತ್ತರದಾಯಿನಿಯಲ್ಲ, ನನ್ನ ಈ ಕೃತಿಗಾಗಿ ಅವಳೇಕೆ ಬೇಯುತ್ತಿರಬೇಕು? ನನ್ನಿಂದ ವಿವಾಹಧರ್ಮದ ಪಾಲನೆಯಾಗಿಲ್ಲವೆಂದು ನಾನು ಒಪ್ಪಿಕೊಂಡು ಬಿಡುತ್ತೇನೆ ವಿವಾಹಧರ್ಮದ ನಿಯಮಗಳನ್ನೆಲ್ಲ ಹರಿದು, ನಾನಿಲ್ಲಿ ಗಲ್ಲಿಗೇರಿಸುವವರ ದಾರಿಯನ್ನು ಕಾಯುತ್ತ ನಿಂತಿದ್ದೇನೆ ಆದರೂ ನನ್ನ ಆ ವಿವಾಹವು ನನ್ನ ಹೊಸ ಹೆಂಡತಿಯನ್ನು ಪತಿತ್ವದ ಸುಖದಿಂದ ವಂಚಿತಳನ್ನಾಗಿಯೆ ಮಾಡುವುದಲ್ಲವೆ? ಅರಕ್ಷಣೀಯಳನ್ನಾಗಿ ಇರಿಸುವುದಲ್ಲವೆ?

"ಈ ವಿವಾಹವೆಂಬುದಾದರೂ ಏನಿದೆ? ಸರಿ! ವಿವಾಹವು ನನ್ನನ್ನು ಪತಿಯನ್ನಾಗಿ ಮಾಡಿತು, ಪತ್ನಿಗಾಗಿ ನಾನೊಂದು ದಿನವೂ ಪತಿಯಾಗಿರಕೊಡದೆಂಬುದ 'ಪತಿ' ಎಂಬುದರ ಅರ್ಥವೇನು? ನಾನು ಈ ಸಾವನ್ನು ಬೇಗನೆ ಹುಡುಕಿಕೊಂಡೆ, ಆ ನನ್ನ ಹರಯದ ಹೆಂಡತಿಗೆ ಕೊನೆಯವರೆಗೂ ಸಿಕ್ಕದ ಇರುವಂತಾದ ಪತ್ನಿಗೆ ಸದಾ ನಾನು ಆರಾಧ್ಯದೈವತವಾಗಿರಬೇಕೆಂಬುದ ವಿವಾಹದ ಆಜ್ಞೆ ನಾನಿನ್ನು ಸದೇಹ ಆರಾಧ್ಯದೈವತವಾಗದೆ ಹೋದರೂ, ದೇಹರಹಿತಸ್ಥಿತಿಯಲ್ಲಿದ್ದುಕೊಂಡು, ಆಕೆಯು ನನಗೆ ಅರ್ಪಿಸುವ ಪತ್ನೀಪ್ರೇಮವನ್ನು—ಸೇವೆಯನ್ನು—ಸ್ವೀಕರಿಸುತ್ತಿರಬೇಕು ಇದೇ ಈ ವಿವಾಹಸಂಸ್ಥೆಯ ಧರ್ಮವಲ್ಲವೆ?

" ಈ ಬಗೆಯಿಂದ, ಒಂದು ವ್ಯಕ್ತಿಯ ಕಡೆಗೆ ಒಬ್ಬಳು ಯಾವಾಗಲೂ ತನ್ನ ಮನಸ್ಸು, ಭಕ್ತಿ, ಸ್ನೇಹ ಎಲ್ಲವುಗಳನ್ನೂ ಸುರಿಯುತ್ತಿರಬೇಕೆಂದು ಹುಟ್ಟಿಸಿದ ಮಾನವನ ಈ ವಿವಾಹಸಂಸ್ಥೆಯು ಅನುಪಮವಾದುದಾಗಿದೆ. ಈಗ ಈ ದಂದುಗವನ್ನು ತಿಳಿದ ಮೇಲೆ, ನನಗೆ ವಿವಾಹಸಂಸ್ಥೆಯ ಮಹತ್ವವು ಕಂಡುಬರುತ್ತಿದೆ! ವಿವಾಹಸಂಸ್ಥೆಯು ಸಮಾಜದ ಆವಶ್ಯಕತೆಗಳೊಳಗಿಂದ ಉದ್ಭವಿಸಿದ್ದರೂ ಅದು ದಿನ-ದಿನಕ್ಕೆ ಬೆಳೆಯುವ ಮಾನವನ ಪರೋನ್ಮುಖ ವೃತ್ತಿಗಳನ್ನು ತನ್ನಲ್ಲಿ ಅಡಗಿಸಿಕೊಂಡಿದೆ. ಇಂತಹ ವಿವಾಹ ಸಂಸ್ಥೆಯಿಂದ ಅತ್ಯಾಚಾರ-ಗಳೇಕೆ ಆಗುತ್ತಿರಬೇಕು?

" ಕುಲವಂತನು ಇಷ್ಟು ಕ್ರೂರ ಹೃದಯದವನಾಗಿರಬಹುದು? ಪಶುವಿಗಿಂತಲೂ ಅವನು ಸ್ವಲ್ಪ ದೊಡ್ಡವನೆ, ಅವನು ಸುಮನಳನ್ನು ಬಯಸುತ್ತಿದ್ದರೂ ಬಯಸುತ್ತಿರಬಹುದು, ಇದರಲ್ಲಿ ಆಶ್ಚರ್ಯಕರವಾದುದೇನು? ತರುಣ! ಬಯಸಬಹುದು! ಅಸ್ವಾಭಾವಿಕವೇನು ಇದರಲ್ಲಿ! ನಾನಾದರೂ ಸಂಕೋಚವನ್ನೇತಕ್ಕೆ ಪಡಬೇಕು! ಅವನ ಮನಸ್ಸನ್ನು ನಾನೇ ಒಲಿಸುತ್ತೇನೆ.

" ಆದರೆ ಸುಮನಳನ್ನು ದಾರಿಗೆ ತರುವುದು ಹೇಗೆ? ಅವಳೇನು ನನ್ನ ಮಾತಿಗೆ ಒಪ್ಪಿಗೊಡುವಳೆ? ಕೇಳಿದರೂ ಅದನ್ನು ಕ್ಷಣಕಾಲವಾದರೂ ತನ್ನ ಮನದಲ್ಲಿಟ್ಟುಕೊಂಡಾಳೆ? ಇಲ್ಲ, ಇಲ್ಲ! ಅವಳು ನನ್ನ ಮಾತನ್ನು ಕೇಳಲಿಕ್ಕಿಲ್ಲ, ನನ್ನ ಮಾತಿಗೆ ಒಪ್ಪಿಗೆಯನ್ನು ಕೊಡಲಿಕ್ಕಿಲ್ಲ! ಅವಳು ಅಷ್ಟೊಂದು ಓದುಬರೆಹ ಬಲ್ಲವಳೂ ಅಲ್ಲ, ಕೇವಲ ಸತೀಸಾಧ್ವಿಯರ ಕತೆಗಳನ್ನೇ ಕೇಳಿದ್ದಾಳೆ, ಓದಿದ್ದಾಳೆ! ನನ್ನ ಮಾತುಗಳನ್ನು ಹೇಗೆ ಒಪ್ಪಬಹುದು ಆಕೆ?

" ನಾನು ಗಲ್ಲಿಗೆ ಏರುವುದು ಸುಮನಳ ಕುಂಕುಮವನ್ನು ಅಳಿಸುವುದೆ? ಮಂಗಲ ಸೂತ್ರವನ್ನು ಕತ್ತರಿಸುವುದೆ? ಹಾಗಾಗುವುದಾದರೆ ನನ್ನ ಮರಣವು ಕಲಂಕಿತವಾಗುವುದು! ಸರಿ! ನನ್ನ ಮರಣವು ಕಲಂಕಿತವಾಗದು! ಅವಳು

ವಿಧವೆಯಾಗಲಾರಳು ! ನಾನು ಸಾಯುತ್ತೇನಾದರೂ ಅವಳನ್ನು ವಿಧವೆಯಾಗಗೊಡುವುದಿಲ್ಲ ! ”

/ / /

ಮರುದಿನ ದಿನಕರನ ತಂದೆ ತಾಯಂದಿರು, ಅಣ್ಣ-ತಮ್ಮಂದಿರು ಆತನನ್ನು ಕಾಣುವುದಕ್ಕೆ ಬಂದರು ಅವರೊಡನೆಯೆ—ಮುಖದ ಮೇಲೆ ಉದ್ದವಾಗಿ ಸೆರಗನ್ನು ಎಳೆದುಕೊಂಡು—ಆತನ ಹೆಂಡತಿಯೂ ಬಂದಿದ್ದಳು ಎಲ್ಲರೂ ಆತನೊಡನೆ ಮಾತನಾಡಿದರು ಆದರ ಆತನ ಹೆಂಡತಿ ಸುಷಮಾ ಎಲ್ಲರ ಹಿಂದೆ ಮುದುಡಿಕೊಂಡು, ಅವಗುಂಠನವತಿ-ಯಾಗಿ, ಸುಮ್ಮನೆ ಕುಳಿತಿದ್ದಳು

ಜೀವನದ ಕೊನೆಯ ದಿನ ಮಾತನಾಡುವಂತಹದೇನೂ ಹೆಚ್ಚಾಗಿ ಉಳಿದಿರುವುದಿಲ್ಲ ಅಂದು ಜೀವನದ ವ್ಯಾಪಾರಗಳೆಲ್ಲ ಸಾವೆಂಬ ಮಹಾಘಟನೆಯ ಎದುರಿನಲ್ಲಿ ತುಚ್ಛವಾಗಿ ತೋರುವುವು ಹಾಗೆಯೆ ಇಲ್ಲಿಯೂ ಆಯಿತು ಯಾರ ಬಾಯಿಂದಲೂ ಮಾತುಗಳೆ ಹೊರಡಲೊಲ್ಲವು ಎಲ್ಲರ ಹೃದಯಗಳೂ ತುಂಬಿ ಬಂದಿದ್ದುವು ಕೊನೆಗೆ ಆ ನೀರವತೆಯನ್ನು ಸಂಹರಿಸುತ್ತ ದಿನಕರನೇ ಕೇಳಿದ “ ಹಿರಿಯಾ, ಕಾಗಿರುವೆಯಲ್ಲಾ [illegible], [illegible] ”

[illegible]

ಆಮೇಲೆ ಮತ್ತೆ ಮೊದಲಿನ ಹಾಗೆಯೆ ಶಾಂತತೆಯು ನೆಲೆಗೊಳ್ಳತೊಡ-ಗಿತು ತಮ್ಮ ವ್ಯಥೆಯನ್ನು ಯಾವ ಬಗೆಯಿಂದ ತೋರಿಸಬೇಕೆನ್ನು-ವುದು ಯಾರಿಗೂ ತೋಚದಂತಾಯಿತು

ದಿನಕರನ ತಾಯಿಯು ಎದ್ದು ಸೊಸೆಯ ಬಳಿಗೆ ಹೋಗಿ, ಆಕೆಯ ಕೊರಳಿಗೆ ತನ್ನ ಕೊರಳನ್ನು ತಗಲಿಸಿದಳು, ಅಂತಃಕರಣವು ಉಕ್ಕೇರಿ ಬಂದಿತು, ಕಂಠವು ಗದ್ಗದಿತವಾಯಿತು ಎಂದಳು “ ಏಳಮ್ಮಾ, ಹೋಗು! ಏನೇನು ಹೇಳಿಕೇಳಿಕೊಳ್ಳಬೇಕಾಗಿದೆಯೋ ಹೇಳು—ಕೇಳು ಹೋಗು ! ಇನ್ನೇಕೆ ಇಷ್ಟು ನಾಚಿಕೆ ? ”

ಸುಷಮಾ ಕುಳಿತ ಸ್ಥಳ ಬಿಟ್ಟೇಳಲಿಲ್ಲ ಅವಳ ಕೈಕಾಲುಗಳು

ತಣ್ಣಗಾಗಿದ್ದುವು ಆಗ ಎಲ್ಲರ ದುಃಖವೂ ಒತ್ತರಿಸಿ ಬಂದಿತು ಎಲ್ಲರ ಕಣ್ಣಾಲಿಗಳೂ ನೀರಿಡಿದುವು ಎಲ್ಲರೂ ಅವು ಎಲ್ಲಿ ಹೊರಬೀಳುವುವೋ ಎಂದು ಒಳಗಿಂದೊಳಗೆ ನುಂಗಿಕೊಳ್ಳಲು ಯತ್ನಿಸುತ್ತಿದ್ದರು ದಿನಕರನ ತಂದೆಯವರು ಗಡಿಯಾರದಲ್ಲಿ ನೋಡಿ "ಅಯ್ಯೋ! ಮೂರುಗಂಟೆಯಾಯಿತು!" ಎಂದು ತಮ್ಮ ಅಂಗವಸ್ತ್ರದಿಂದ ಕಂಬನಿಗಳನ್ನು ಒರಸಿಕೊಂಡು, ಶೂನ್ಯದಲ್ಲಿ ನೋಟವನ್ನು ನಿಲ್ಲಿಸಿದರು

ದಿನಕರನ ತಾಯಿ ಸುಷಮೆಯ ಕೈಹಿಡಿದು ಎಬ್ಬಿಸುತ್ತ, ನಡುಗುವ ದನಿಯಲ್ಲಿ "ಏಳಮ್ಮಾ ಏಳು! ಇನ್ನೆಂತರ ನಾಚಿಕೆ? ಒಂದೆರಡು ಗಳಿಗೆಯಲ್ಲಿ ನಿನ್ನ ದೃವದ ಕಲಶವು ಮುರಿದು ಹೋಗುವದು! ಕೊನೆಯ ಒಂದೆರಡು ಮಾತುಗಳನ್ನು ಆಡಿಕೊಂಡು ಬಿಡು!" ಎಂದಳು ಬಳಿಕ ಸುಷಮೆಯನ್ನು ಕರೆದೊಯ್ದು ದಿನಕರನ ಸನಿಹದಲ್ಲಿ ಕುಳ್ಳಿರಿಸಿದಳು, ಅವಳು ಮುದುಡಿ-ಮುದುಡಿಕೊಳ್ಳುತ್ತಲೆ ಬಂದು ಅಲ್ಲಿ ಕುಳಿತಳು

"ಮಗೂ, ಇವಳಿಗಷ್ಟು ತಿಳಿಸಿ ಹೇಳಪ್ಪಾ, ಮನೆಯಲ್ಲಿಯಾಗ ಇವಳು ಮಾತನಾಡುವದೇ ಇಲ್ಲ" ಎಂದು ದಿನಕರನ ತಾಯಿ ದಿನಕರನಿಗೆ ಹೇಳಿದಳು

ದಿನಕರನಿಗೆ ಗಲ್ಲನ್ನು ತ್ಯಜಿಸಿ ಹಿಂದಿರುಗಿ ಬರಬೇಕೆನ್ನುವ ಇಚ್ಛೆ ಈಗಲೂ ಇಲ್ಲ ಮೊದಲಿನಂತ ದೃಢವಾದ ಮನಸ್ಸಿನವನಾಗಿದ್ದಾನೆ ಆದರೂ ಮನಸ್ಸಿನಲ್ಲಿ ಹೇಗೆ ಹೇಗೆಯೋ ಆಗುತ್ತಿದೆ

ಅವನು ನಕ್ಕು "ಹುಚ್ಚಿ!" ಎಂದ

"ಇವಳನ್ನು ನೋಡಿಯಾದರೂ ನಿನ್ನ ಹೃದಯ ಕರಗಬೇಕಪ್ಪ!" ಎಂದಳು ದಿನಕರನ ತಾಯಿ

ದಿನಕರನ ತಂದೆಯವರು ಈ ನುಡಿಗಳನ್ನು ಕೇಳಿ ವ್ಯಥೆಗೊಂಡರು ಅವರು ಅತ್ಯಂತ ದುಃಖದಿಂದ ಅದೇನನ್ನೋ ನುಡಿಯುತ್ತ, ತಮ್ಮ ಬಲಗೈಯನ್ನು ಸುಷಮೆಯ ಮಸ್ತಕದ ಮೇಲಿರಿಸಿ, ಗಟ್ಟಿಯಾಗಿ ಸ್ಪಷ್ಟವಾಗಿ ನುಡಿದರು "ಅಮ್ಮಾ ಮಗೂ! ನನ್ನ ಮಗನು ವೀರ, ಕಳ್ಳನಲ್ಲ! ಕೊಳ್ಳೆಗಾರನಲ್ಲ! ಕೇಳು, ಅದೆಷ್ಟು ಜನರು ಅವನ

ಜಯಘೋಷಮಾಡುತ್ತಿದ್ದಾರೆ! ಅವನು ವೀರಸ್ವರ್ಗದ ಕಡೆಗೆ ಹೊರಟಿದ್ದಾನೆ. ಇಂತಹ ಮಕ್ಕಳು ಎಲ್ಲರಿಗೂ ಸಿಕ್ಕುತ್ತಾರೆಯೆ? ಇಂತಹ ಮಕ್ಕಳನ್ನು ಪಡೆಯುವುದಕ್ಕೂ ಭಾಗ್ಯ ಬೇಕು ಭಾಗ್ಯ! ಧೈರ್ಯ ತಾಳಮ್ಮ, ಧೈರ್ಯ ತಾಳು!" ಹೀಗೆನ್ನುವಾಗ ದಿನಕರನ ತಂದೆಯವರ ಕಣ್ಣುಗಳಿಂದ ಅಶ್ರುಧಾರೆಯು ಎಡೆಬಿಡದೆ ಹರಿಯುತ್ತಿದ್ದಿತು. ಎಲ್ಲರ ಕಣ್ಣುಗಳಿಂದಲೂ ನೀರು ಹರಿಯಲು ತೊಡಗಿದುವು, ಅಳುವನ್ನು ತಡೆಯಲಾಗಲಿಲ್ಲ. ಆದರೆ ಸುಷಮೆಯ ಮುಸುಕಿನಲ್ಲಿಯ ಕಣ್ಣೊಳಗಿಂದ ಏನು ಹರಿಯುತ್ತಿದ್ದಿತೊ ಗೊತ್ತಾಗಲಿಲ್ಲ.

ಸ್ವಲ್ಪ ಸಮಯದ ತರುವಾಯ ದಿನಕರನು ತಂದೆಯವರನ್ನು ಒಂದು ಕಡೆಗೆ ಕರೆದು "ನನಗೊಂದು ಆಶೆಯಿದೆ. ಅದನ್ನು ತಾವು ಪೂರ್ತಿಮಾಡಬೇಕು — ನನಗೆ ಗಲ್ಲಾಗುವ ಮೊದಲನೆಯ ದಿನವೆ ಕುಲವಂತನೊಡನೆ ಸುಷಮೆಯ ವಿವಾಹಮಾಡಿ ಬಿಡಿರಿ!" ಎಂದ.

"ಏನು ಹೇಳುತ್ತೀಯಪ್ಪಾ ನೀನು? ಸುಷಮಾ ಯಾರೆನ್ನುವುದು ನಿನಗೆ ಗೊತ್ತಿಲ್ಲವೇನು?"

"ಅದಾವುದನ್ನೂ ಕೇಳಬೇಡಿರಿ, ಎಲ್ಲವೂ ಗೊತ್ತಿದೆ! ಇನ್ನಾವುದರ ಇಚ್ಛೆಯೂ ನನಗಿಲ್ಲ, ಕುಲವಂತನೊಡನೆ ಸುಷಮೆಯ ವಿವಾಹವನ್ನು ನೀವು ಮಾಡದೆ ಹೋದರೆ, ನನಗೆ ಸದ್ಗತಿಯಾಗುವುದಿಲ್ಲ."

"ಹಾಗಾದರೆ ನೀನು ಸುಷಮೆಗೆ ತಿಳಿಸಿ ಹೇಳು. ಆಕೆಯು ಒಪ್ಪಕ್ಕೆ ಬಂದರೆ ಹಾಗೆಯೂ ಆಗಬಹುದು!"

ಕುಲವಂತ-ಸುಷಮೆಯರ ವಿವಾಹದ ವಿಚಾರವಾಗಿ ಮಾತನಾಡಲು, ದಿನಕರನ ತಂದೆತಾಯಂದಿರು ಬೇರೆ ಕಡೆಗೆ ಹೋದರು, ಸುಷಮೆಯೊಡನೆ ಮಾತನಾಡಲು ದಿನಕರನಿಗೆ ಏಕಾಂತವು ದೊರೆಯಿತು. ಅವನು ಅವಳನ್ನು ಕೇಳಿದ "ಸುಷಮಾ, ನನ್ನದೊಂದು ಬಯಕೆ ಇದೆ, ಅದನ್ನು ಪೂರಯಿಸುತ್ತೀಯಲ್ಲವೆ?"

ಏನದು ಹೇಳು! ಅವಶ್ಯವಾಗಿ ಅದನ್ನು ಪೂರಯಿಸಬಹುದು, ಸುಮ್ಮಗಿದ್ದಾಳೆ

"ನಾನು ನಿನಗೆ ಕೊಟ್ಟುದೆಂದರೆ ದುಃಖದ ಹಿಂದೆ ದುಃಖವನ್ನೆ "

ಮಾತನಾಡಲಿಲ್ಲ ಸುಷಮಾ

"ನನ್ನ ಬಯಕೆಯನ್ನು ಪೂರಯಿಸೆಂದು ನಾನು ಹೇಗೆ ಹೇಳಲಿ? ಇದೇನೋ, ಸಾಯುವಾಗ ಹೇಳುವವನ ಬಯಕೆಯನ್ನು ಪೂರ್ತಿಗೊಳಿಸಲು ಜನರು ಒಪ್ಪುತ್ತಾರೆ, ಇನ್ನೆಷ್ಟು ದೂರ ಇದೆ ನನ್ನ ಸಾವು?—"

ಸುಷಮಾ ಸುಮ್ಮಗೆ ಇದ್ದಾಳೆ

"ಸುಷಮಾ, ಇದನ್ನಿಷ್ಟು ಕೇಳಿ ನಾನು ಸಾಯಬೇಕೆನ್ನುತ್ತೇನೆ—"

ದಿನಕರ! ಇಂತಹ ಮಾತುಗಳನ್ನು ಇಷ್ಟು ಸಾವಕಾಶನಾಗಿ ಹೇಳಬಾರದು ಬೇಗನೆ ಹೇಳಿಬಿಡು! ಅವಳು ಅವುಗಳನ್ನು ಒಂದೇ ಗುಟುಕಿನಲ್ಲಿ ಕುಡಿದುಬಿಡಲಿ! ಇಂತಹ ವಿಷಪೂರಿತವಾದ ಮಾತನ್ನು—ಬಯಕೆಯನ್ನು—ಹೇಳಲು ತಡಮಾಡಬೇಡ, ಹೇಳಿಬಿಡು! ಸುಷಮಾ ಸುಮ್ಮಗಿರುವುದು ನೋಡು! ಅದೇನು ನೋವನ್ನು ಅವಳಲ್ಲಿ ಮನಸ್ಸು ಇದೆ: ಹೇಳಿಬಿಡು ಬೇಗ!

"ನಾನು ಒಬ್ಬೊಂಟಿಗನಾಗಿದ್ದೇನೆಂಬುದನ್ನು ಕೇಳಿ ಸಾಯಬೇಕೆನ್ನುತ್ತೇನೆ—"

ಹೇಳಿಬಿಡಯ್ಯಾ ಬೇಗ, ಸುಷಮಾ ಸುಮ್ಮಗಿದ್ದಾಳೆ!

"ಒಬ್ಬೊಂಟಿಗನಾಗಿ ಸಾಯಬೇಕೆನ್ನುತ್ತೇನೆ ನೀನು ವಿಧವೆಯಾಗಿರಲಿಕ್ಕಿಲ್ಲವೆಂಬುದನ್ನು ಕೇಳಿ ಸಾಯಬೇಕೆನ್ನುತ್ತೇನೆ "

ಸುಷಮಾ ಸುಮ್ಮಗಿದ್ದಾಳೆ

"ಕುಲವಂತನನ್ನು ನೀನು ಬಲ್ಲೆಯಾ? "

ಸುಷಮಾ ಮುಸುಕಿನೊಳಗಿಂದಲೆ ಮೆಲ್ಲಗೆ ಎಂದಳು "ನೀವು ನನಗೊಂದು ವಿಷದ ಪುಡಿಕೆಯನ್ನು ಕೊಟ್ಟು ಹೋಗಿರಿ, ಸಾಕು!"

ದಿನಕರನಿಗೆ ಮೈಮೇಲೆ ಎಚ್ಚರವೆ ಉಳಿಯದಂತಾಯಿತು ಅವನು ಅಲಿಸಿದ 'ಇದಕ್ಕೂ ಹೆಚ್ಚಿಗೆ ನನಗೇನೂ ಬೇಡ, ಇದಕ್ಕೂ

ಹುಟ್ಟಿಸಿದನ್ನು ನಾನೇನು ಬೇಡಬಲ್ಲೆ ನಿಮ್ಮಲ್ಲಿ? ಸರಿ, ಇದನ್ನೇ ಕೊಟ್ಟು ಬಿಡಿರಿ!"

ದಿನಕರನ ಹೃದಯದಲ್ಲಿ ಭೀಕರವಾದ ವೇದನೆಯೆದ್ದಿತು ಅದು ಗಂಟಲಿನ ವರೆಗೂ ಬಂದಿತು—"ನನಗೆ ಗಲ್ಲಾಗುವುದಿದೆ ಸುಷಮಾ! ಇಂದಿಲ್ಲದಿದ್ದರೆ ನಾಳೆ! ದಿನಗಳು ಇನ್ನೇನೂ ಹೆಚ್ಚಾಗಿಲ್ಲ, ಬೆರಳಿನ ಮೇಲೆ ಎಣಿಸಬಹುದು ಇಂತಹ ಸಮಯದಲ್ಲಿ ಹೀಗೆ ಕೇಳುತ್ತಿದ್ದೀಯಾ ಸುಷಮಾ?"

ದಿನಕರನ ವಾಣಿಯು ಸುಷಮೆಯನ್ನು ಭೇದಿಸಿತು ಅವಳು ನಡುಗಿದಳು "ನಿಮಗೆ ಕೈಜೋಡಿಸಿ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ ನನ್ನೊಡೆಯ, ನೀವು ನನ್ನನ್ನು ಏನೆಂದು ಬಗೆದಿರುತ್ತೀರಿ?" ಎಂದಳು

ಈ ಪ್ರಶ್ನೆಯ ಉತ್ತರವು ದಿನಕರನಿಗೆ ಬೇಗನೆ ಹೊಳೆಯಲಿಲ್ಲ ಸ್ವಲ್ಪ ಸಮಯದ ಬಳಿಕ ದಿನಕರನೆಂದ "ಏನೆಂದು ಬಗೆಯುವೆನು? ಏನೆಂದು ಬಗಯುವೆನು? ನಾನು ನಿನಗೆ ವಿಷತುಂಬಿದ ಬಟ್ಟಲು ಕೊಡುತ್ತನೆ, ನೀನು ನನ್ನೆದುರು —ನನ್ನ ಕಣ್ಣುಗಳೆದುರು—ಅದನ್ನು ಕುಡಿಯುತ್ತೀಯೆಂದು ಬಗೆದಿರುವೆನು"

"ಇದೇ ಆಜ್ಞೆಯೆ ತಮ್ಮದು?"

ದಿನಕರನು ಮಾತನಾಡಲಿಲ್ಲ

"ಹೇಳಿ, ಇನ್ನೊಂದು ಸಲ, ಇದೇ ಆಜ್ಞೆಯು ತಮ್ಮದು?"

ದಿನಕರನ ಮನಸ್ಸು ಚಿಕ್ಕದಾಗುತ್ತ ಸಾಗಿತು, ಸುಷಮೆಯ ಸ್ವರವು ಅವನನ್ನು ಅತ್ತಿತ್ತ ಹರಿಯಗೊಡದಾಯಿತೂ ಏನೊ! ಕೊನೆಗೆ ಅವನೆಂದ "ಸುಷಮಾ, ನಾನು ನಿನ್ನ ಪತಿಯಲ್ಲವೆ? ಅದಕ್ಕೋಸ್ಕರವಾಗಿಯೆ ಹೀಗೆ ಹೇಳುತ್ತಿದ್ದೇನೆ, ಕುಲವಂತನೊಡನೆ ಮದುವೆಯಾಗು!"

ಧನ್ಯೆ! ಸುಷಮಾ ಧನ್ಯ! ಪತಿಯ ಚರಣವನ್ನು ಆಕೆ ಸ್ಪರ್ಶಿಸಿದಳು ಮುಖದ ಮೇಲಿನ ಮುಸುಕನ್ನು ತೆಗೆದು "ಪರಮಾತ್ಮನಿದ್ದಾನೆ, ಅವನು ಎಲ್ಲವನ್ನೂ ನೋಡುತ್ತಾನೆ ಆದರೆ

ನನಗೆ ನೀವೇ ದೇವರು ನಿಮ್ಮನ್ನು ಬಿಟ್ಟರೆ ನನಗಾರ ದೇವರು? ಶಾಸ್ತ್ರವೂ 'ಪತಿಯೇ ನಾರಿಗೆ ದೇವ' ಎಂದು ಹೇಳುತ್ತಿದೆ ನೀವೇ ನನಗೆ ಸರ್ವಸ್ವ ನಿಮ್ಮಾಜ್ಞೆಯಂತೆ ನಡೆಯುವುದೇ ನನ್ನ ಧರ್ಮ, ನನ್ನ ಕರ್ಮ, ನನ್ನೊಡೆಯಾ!" ಎಂದಳು

ಸುಷಮಾ ದಿನಕರನು ಬದುಕಿರುವಾಗಲೆ ಕುಲವಂತನೊಡನೆ ವಿವಾಹ ಮಾಡಿಕೊಳ್ಳುವಳು, ಹೌದು ದಿನಕರನು ಬದುಕಿರುವಾಗಲೆ! ಆದರೆ ಅವಳು ವಿಷದ ಬಟ್ಟಲನ್ನು ಬಾಯಲ್ಲಿ ಹಾಕಿಕೊಳ್ಳದ ಇರುವಳೇ? ಛೆ! ಅವಳು ನಗುತ್ತ ವಿಷವನ್ನು ಕುಡಿದುಬಿಡುವಳು, ಇಡಿ ಜೀವನ ಪರ್ಯಂತವೂ ಒಂದೊಂದು ಗುಟುಕಾಗಿ ಕುಡಿಯುತ್ತಿರುವಳು

'ಶಮುಶೇರ'† ಎಂದು ಅವನ ಅಂಕಿತನಾಮ ದರೋಡೆಗಳಲ್ಲಿ, ಕವನಗಳಲ್ಲಿ ಇದೇ ಹೆಸರು ಅವನದಿದೆ ಇದೇ ಹೆಸರಿನಿಂದಲೆ ಅವನ ಪ್ರಸಿದ್ಧಿ ಶಮುಶೇರನಿಗೆ ಜನಗಳು ಹೆದರುವರು, ಅವನನ್ನು ಸ್ತುತಿಸುವರು, ಅದೆಷ್ಟೊ ಜನಗಳು ಅವನ ಉಪಕಾರ ಸ್ಮರಣೆಯನ್ನೂ ಮಾಡುವರು ಅವರಿಗೆ 'ಮೋಹನಸಿಂಗ' ಯಾರೆಂಬುದು ಗೊತ್ತಿಲ್ಲ, ಶಮುಶೇರನೆಂದರೆ ಯಾರೆಂಬುದು ಚೆನ್ನಾಗಿ ಗೊತ್ತುಂಟು

ಅವನಿಂದ ಉಪಕೃತರಾದವರೂ ಇರುವರು ದ್ವೇಷಿಸುವವರೂ ಇರುವರು ಅವರು ಎಷ್ಟೆಷ್ಟು ಜನರಿರುವರೆಂಬುದನ್ನು ಹೇಳುವುದು ಹಗುರಾದುದಲ್ಲ ಆದರೂ ಇಷ್ಟು ಹೇಳಬಹುದು ಪ್ರಪಂಚದ ಅತ್ಯಂತ ಸೂಕ್ಷ್ಮವಾದ ಅವಿಚಾರಣೀಯವಾದ ಭಾಗವೊಂದನ್ನು ಬಿಟ್ಟು, ಧನದ ಮದವೇರಿದವರನ್ನೂ ಅಧಿಕಾರದ ಮದವೇರಿದವನ್ನೂ ಒಟ್ಟಾಗಿಸಿಕೊಂಡು ಅವರ ಕಪಟ, ಕುಟಿಲನೀತಿ, ಅತ್ಯಾಚಾರ, ಒಳಸಂಚುಗಳ ಬಲದಿಂದ ಎಲ್ಲರನ್ನೂ ಮೆಟ್ಟುವ ಸ್ವಾತ್ಯತ್ವದ ಆ ನಿಂದನೀಯ ಭಾಗವೊಂದನ್ನು ಬಿಟ್ಟು ಉಳಿದವರೆಲ್ಲರೂ ಅವನಿಗೆ ಪೂಜ್ಯರು ಆದುದರಿಂದ ಅವನು ಎಲ್ಲರ ಹಿತಚಿಂತಕನು, ಎಲ್ಲರ ಸೇವಕನು

ಆದರೆ ಜಗತ್ತಿನ ಆ ಒಘನ್ಯ ಸಮ್ಮಾನಿತ ಪುರುಷರ ಗುಂಪು 'ಶಮುಶೇರನು ರಾಕ್ಷಸನು, ಪಾಪಿಯು, ದರೋಡೆಖೋರನು ಅವನು ಬದುಕಿರುವುದು ಹಿತಕಾರಿಯಲ್ಲ!' ಎಂದು ಹೇಳುತ್ತದೆ ಇದನ್ನು ಯಾರೂ ವಿರೋಧಿಸುವುದಿಲ್ಲ ದೀನರು, ಅಸಹಾಯರು, ಬಾಲಕರು, ಮುದುಕಿಯರು, ದಲಿತರು, ಪೀಡಿತರು, ಅದೆಷ್ಟೋ ದುಃಖಿಗಳು ಶಮುಶೇರನಿಂದ ಸಹಾಯವನ್ನು ಪಡೆಯುವರು, ಅವನ ಉಪಕಾರವನ್ನು ಮನ್ನಿಸುವರು ಆದರೆ ಅವನ ವಿರುದ್ಧ ಯಾರಾದರೂ ಏನನ್ನಾದರೂ ಹೇಳಿದರೆ ಅದನ್ನು ವಿರೋಧಿಸುವುದಿಲ್ಲ, ಕಿಂಚಿನ್ಮಾತ್ರವಾದರೂ ವಿರೋಧಿಸುವುದಿಲ್ಲ ಅವರೇನು ಮೂಕರೆ? ಅಂಗಹೀನರೆ? ಅವನ ಉಪಕಾರವು ಅಪರಾಧವೆಂದು ಒಪ್ಪುತ್ತಾರೆಯೆ? ಆದರೂ

† ಶಮುಶೇರ=ಕತ್ತಿ, ಖಡ್ಗ, ಕರವಾಲ.

ಶಮುಶೇರ ಅವರಿಗೆ ಉಪಕಾರಮಾಡುತ್ತಾನೆ ಆಗಾಗ್ಗೆ ಧನದಿಂದಲೂ ಬೇರೆ ಬೇರೆ ಬಗೆಯಿಂದಲೂ ನೆರವಾಗುತ್ತಾನೆ ಅವನು ಮಾಡುವು- ದಿದೆಲ್ಲವೂ ಸರಿಯೆ ಇವೊತ್ತು ಅವನನ್ನು ಗಲ್ಲಿಗೇರಿಸಿದರೂ ಸರಿಯೆ! ಅವನು ಮಾಡುವುದು ಸರಿಯಾಗಿದ್ದರೂ ಆವರು ಅವನ ವಿರೋಧಿಗಳ ವಿರುದ್ಧವಾಗಿ ಏನನ್ನೂ ಮಾಡಲಾರರು

ಅದಕ್ಕೋಸ್ಕರವೆ ಕಾಯಿದೆಯು ಹೇಳಿದುದನ್ನು ಎಲ್ಲರೂ ಒಪ್ಪಿಬಿಡುವರು ಆದರೆ ಶಮುಶೇರನಿಗೆ ಮಾತ್ರ ಈ ಕಾಯದೆಯಲ್ಲಿ ಸಂದೇಹವಿದೆ ಸಂದೇಹವಿದ್ದರೇನು? ವಿಶ್ವವು ಅದಕ್ಕೆ ತನ್ನ ಒಪ್ಪಿಗೆಯನ್ನೀಯುವುದು ಏಕೆ? ಕಾಯಿದೆಯ ಹಿಂದೆ ಪೋಲೀಸ- ರಿದ್ದಾರೆ ಆದುದರಿಂದ ವಿಶ್ವವು ಮುಂಗಾಣದೆ ಕಾಯಿದೆಯನ್ನು ಒಪ್ಪಲೇಬೇಕಾಗುವುದು ಅದರಂತೆ ನಡೆಯಲೇಬೇಕಾಗುವುದು ಇರಲಿ

ಅವನು ಎಷ್ಟು ದರೋಡೆಗಳನ್ನು ಮಾಡಿರುವನೆಂಬುದನ್ನು ಸರಕಾರೀ ಕಾಗದಪತ್ರಗಳನ್ನು ನೋಡದೆ ಗೊತ್ತಾಗದು ಆದರೆ ಅವನ ಕವನಗಳ ರೆಕಾರ್ಡು ಜನತೆಯ ಹೃದಯದಲ್ಲಿದೆ ಅವನ ಕವನಗಳು ಜನತೆಯ ನಾಲಗೆಗಳ ಮೇಲೆ ಕುಣಿಯುತ್ತಿವೆ ಅಕ್ಷರಶಃ ಶಬ್ದಶಃ ನಮಗೆ ಅವು ನೆನಪಿಲ್ಲ, ಆದುದರಿಂದ ಅವುಗಳ ಸಾರಾಂಶವನ್ನು ಇಲ್ಲಿ ಕೊಡುತ್ತೇವೆ

ಮಾನವರೆ, ಶಮುಶೇರನಿಗೆ ಏಕೆ ಹೆದರುವಿರಿ? ಅವನು ತೆಳುವಾಗಿದ್ದಾನೆ, ನೋಡಿರಿ ಅವನೆಷ್ಟು ಬಾಗಲು ಸಿದ್ಧನಿರುವ!

*  *  *

ಆದರೆ ಹುಷಾರಿ! ಅವನ ಧಾರೆಯ ಎದುರಿನಲ್ಲಿ ನಿಲ್ಲಬೇಡಿರಿ ಅವನು ನ್ಯಾಯದಂತೆ ಹದನಾಗಿದ್ದಾನೆ

*  *  *

ಶಮುಶೇರನಿಗೆ ಎರಡು ವಿಷಯಗಳು ಗೊತ್ತು ಒಂದು ಬಂಟ- ತನ, ಇನ್ನೊಂದು ಬಡತನ ಇವೆರಡೂ ಇಲ್ಲದವನು ಮಾನವನೇನು?

*  *  *

ಬಂಟನು ಶ್ರೀಮಂತಿಕೆಯನ್ನು ಜಯಿಸುವನು, ವೈಶ್ಯನು ಮೋಸಗೊಳಿಸುವನು ಬಂಟನಿಗೆ ವಂದಿಸಿರಿ, ವೈಶ್ಯನ ಶ್ರೀಮಂತಿಕೆಯನ್ನು ಕಸಿದುಕೊಳ್ಳಿರಿ

*　　*　　*

ಬಂಟನು ಶ್ರೀಮಂತಿಕೆಯನ್ನು ಒದೆಯುವನು, ವೈಶ್ಯನು ಅದಕ್ಕೆ ಅಂಟಿಕೊಳ್ಳುವನು ವೈಶ್ಯನನ್ನು ದಿಗಂಬರನನ್ನಾಗಿ ಮಾಡಿರಿ ಅವನಿಂದ ವೈಶ್ಯವೃತ್ತಿಯನ್ನು ಕಸಿದುಕೊಳ್ಳಿರಿ ಅವನನ್ನು ಮನುಷ್ಯನನ್ನಾಗಿ ಮಾಡಿರಿ

*　　*　　*

ಗೆದ್ದ ಸಮ್ರಾಟರು ಅಭಿನಂದಿತರಾಗಲಿ, ಆದರೆ ಅವರ ಬಾಲಬಡಿಯುವವರು ! ಅವರ ಪ್ರಭುತ್ವವನ್ನು ಒಪ್ಪಿಕೊಳ್ಳುವಿರೇನು ? ಸಾಯಿರಿ ಬದುಕಿರುವ ವರೆಗೂ ಕತ್ತನ್ನು ಮೇಲಕ್ಕೆತ್ತಿಕೊಂಡು ಜೀವಿಸಿರಿ ಗಂಡುಸಾಗಿರಿ

*　　*　　*

ಶಮಶೇರ, ಪುಸ್ತಕಗಳಲ್ಲ ಈ ಬಾಲಬಡಿಯುವವರ ಗುಂಪಿಗೆ 'ಅರಿಸ್ಟೊಕ್ರಸೀ' ಎಂಬ ಹೆಸರಿರುವುದನ್ನು ನೋಡಿಪ ಈ ಅರಿಸ್ಟೊಕ್ರಸಿಗೆ ಬೆಂಕಿ ಹಚ್ಚುವುದಕ್ಕಾಗಿ ಶಮಶೇರ ಜನ್ಮಿಸಿದ್ದಾನೆ ಅವನಿಗೆ ನೀವು ನೆರವಾಗಿರಿ

*　　*　　*

ಅರಿಸ್ಟೊಕ್ರಸೀ ! ನಿರ್ದಯತೆಯಿಂದ ಬಡವರ ಎದೆಯ ಮೇಲೆ ಕುಳಿತುಕೊಂಡು ಹೇಳುತ್ತಿದೆ 'ನಾನು ಅರಿಸ್ಟೊಕ್ರಸೀ!' ಎಂದು ಜನಗಳೇ, ಶಮಶೇರನೊಡಗೂಡಿ ಅದಕ್ಕೆ ಹೇಳಿರಿ "ನಿನ್ನ ಮುಖಕ್ಕೆ ಮಸಿಬಳಿಯುವೆವು" ಎಂದು

*　　*　　*

ಶಮಶೇರನು ಸರಕಾರಕ್ಕೆ ಹೇಳುವ "ನೀನು ಶಮಶೇರನಿಗೆ ಫಾಂಸೀ ವಿಧಿಸುವಿ" ಜನರಿಗೆ ಹೇಳುವ "ನೀವು ಅವನಿಗೋಸ್ಕರ ಅಳುವಿರಿ" ಇಬ್ಬರಿಗೂ ಹೇಳುವ "ಇಬ್ಬರೂ ಭ್ರಮೆಯಲ್ಲಿರುವಿರಿ"

*　　*　　*

ಶಮುಶೇರನು ಎಲ್ಲರಿಗೂ ಹೇಳುವ "ಕರುಣೆಯು ಪಾಪವು, ಅಳುವುದು ಪಾತಕವು ಅಳಬೇಡಿರಿ, ದಯನೀಯರಾಗಬೇಡಿರಿ"

* * *

ಪ್ರೀತಿಯ ಹಾಡುಗಳನ್ನು ಹಾಡುವಿರಿ ಶಮುಶೇರ ಹಾಡ-ಬೇಡಿರೆಂದು ಹೇಳುವುದಿಲ್ಲ "ಆದರೆ ಹಾಡುವ ಮೊದಲು ಆ ಮರದ ಬುಡದಲ್ಲಿ ನೂರು ನಾಲ್ಕು ದಿನಗಳಿಂದ ಹೊಟ್ಟೆಗೆ ಅನ್ನನೀರುಗಳಿ-ಲ್ಲದೆ ಕುಳಿತಿರುವ ಪರಿವಾರವನ್ನು ನೋಡಿ ಬನ್ನಿರಿ ಆ ಮೇಲೆ ಪ್ರೀತಿಯ ಹಾಡುಗಳನ್ನು ಹಾಡಬೇಕೆಂದೆನಿಸಿದರೆ ಹಾಡಿರಿ, ಪ್ರೀತಿಸಿರಿ" ಎಂದು ಹೇಳುವ

* * *

ನೀವು ನಿಮ್ಮ ಹೆಂಡಿರುಮಕ್ಕಳಲ್ಲಿ ನಿಮ್ಮನ್ನೇ ಮರೆತು ಬಿಡು-ತ್ತಿರುವಿರಿ ಪರಮಾತ್ಮನೆ ಇಲ್ಲವೇನೊ ? ಅವನೆದುರು ಉತ್ತರವೀಯ-ಬೇಕಾಗಿಲ್ಲವೇನೊ ? ಎಂಬಂತಿರುವಿರಿ

* * *

ಪ್ರೀತಿ !—ಬೇಕು ಬೇಡವೆಂದು ಯಾರು ಹೇಳುವರು ? ಆದರೆ ಮೊಟ್ಟಮೊದಲು ಬೇಕಾದುದು ಜೀವನ ಮೊದಲು ಅದನ್ನು ಹುಟ್ಟಿಸಿರಿ, ದೀನತೆಯನ್ನು ನಿರ್ಮೂಲಗೊಳಿಸಿರಿ

* * *

ಪ್ರೀತಿಯು ಬಂದರೆ ಶಮುಶೇರನೇನು ಮಾಡುವನೆಂಬುದನ್ನು ಬಲ್ಲಿರಾ ? ಅದನ್ನು ಕಾಲಕೆಳಗೆ ಮೆಟ್ಟಿಬಿಡುವನು, ಆ ಮೇಲೆ ಸ್ವಲ್ಪ ಅತ್ತುಬಿಡುವನು ಬಳಿಕ ತನ್ನ ಕೆಲಸದಲ್ಲಿ ಮಗ್ನನಾಗುವನು

* * *

ಆದರೆ ಮಾನವರೇ, ಶಮುಶೇರನು ಮೂರ್ಖನು. ಪ್ರೀತಿಯು ಮೆಟ್ಟಿದಾಕ್ಷಣಕ್ಕೆ ಸತ್ತುಹೋಗುವುದೆ ? ಮೆಟ್ಟಿದರೆ ಮೇಲಕ್ಕೆ ಏಳದೆ ಇದ್ದರೆ ಅದು ಪ್ರೀತಿಯೆ ? ಇದಕ್ಕೆ ಇನ್ನೊಂದು ಹೆಸರಿದೆ "ದುಃಖ" ಎಂದು. ಈ ದುಃಖವೇ ಶಮುಶೇರನಿಗೆ ಬೇಕಾದುದು.

* * *

ಆದರೆ ಶಮಶೇರ—ಶಮಶೇರನಾಗಿಯೆ ಉಳಿಯುವ ಪ್ರೀತಿಯು ಬರುವುದು—ಬರಲಿ ಅವನು ಹರಿದುಹೋಗಲಾರ, ತನ್ನನ್ನು ಮರೆತುಕೊಳ್ಳಲಾರ ಜಗತ್ತನ್ನು ನೆನಪಿನಲ್ಲಿಡುವ ತನ್ನ ಗುರಿಯನ್ನು ಜ್ಞಾಪಕದಲ್ಲಿಟ್ಟುಕೊಳ್ಳುವ

*　　*　　*

ಚಳಿಗಾಲದ ರಾತ್ರಿ ಬಹುದೂರದ ವರೆಗೆ ಹರಡಿದೆ ಕತ್ತಲು ಕವಿದಿದೆ. ಹವೆಯು ಹಿಮದ ಚಳಿಯಿಂದ 'ಸುಸು' ಮಾಡುತ್ತ ಅತ್ತಿಂದ ಇತ್ತ ಇತ್ತಿಂದ ಅತ್ತ ಸುಳಿಯುತ್ತಿದೆ. ಆ ಮುತ್ತಿನಂತಹ ಚುಕ್ಕೆಗಳು ನಡುಗುತ್ತ ಶಾಂತವಾದ ಅಂಧಕಾರದಲ್ಲಿ ಮಲಗಿರುವ ಜಗತ್ತನ್ನೂ ಅದು ಮಾಡುತ್ತಿರುವ ವ್ಯಾಪಾರವನ್ನೂ ನೋಡುತ್ತಿವೆ

ಎರಡು ಗಂಟೆಯಾಗಿರಬಹುದು

ದಟ್ಟವಾದ ಕಾಡು ಕಂಟಿಗಳು ಒಂದನ್ನೊಂದು ಅಂಟಿಕೊಂಡು ದೂರದ ವರೆಗೆ ಹಬ್ಬಿವೆ ಅವುಗಳೊಳಗಿಂದ ಅಸಂಖ್ಯ ಕಾಲುದಾರಿಗಳು ಒಂದನ್ನೊಂದನ್ನು ಕತ್ತರಿಸಿ ಅದೆಲ್ಲಿಯವರೆಗೊ ಹೊರಟು ಹೋಗಿವೆ. ಹಜ್ಜೆಯಿಡಲು ಸ್ಥಳ ಕಂಡಲ್ಲಿ ಒಂದು ಕಾಲುದಾರಿಯಿದೆ ಅವರೆ ಸ್ವಲ್ಪ ದೂರ ಹೋಗುತ್ತಲೆ ಅದು ಮುಗಿದುಹೋಗುತ್ತದೆ, ಮತ್ತು ಎದುರಿಗೆ ಒಂದು ಕಂಟಿಯು ಬಂದು ನಿಲ್ಲುತ್ತದೆ

ಕಾಲುದಾರಿಗಳ ಈ ಚಕ್ರವ್ಯೂಹದಲ್ಲಿ ಒಂದು ವ್ಯಕ್ತಿಯು ಹಳೆಯ ಕಂಬಳಿಯೊಂದನ್ನು ಹೊದ್ದುಕೊಂಡು ಸಿಳ್ಳುಹಾಕುತ್ತ ನಡೆದಿದೆ ಅವನ ತಲೆಯ ಮೇಲೆ ಏನೂ ಇಲ್ಲ ಕೂದಲುಗಳು ಗಾಳಿಯಲ್ಲಿ ಹಾರಾಡುತ್ತಿದ್ದವು ಜೊತೆಯಲ್ಲಿ ಸಿಳ್ಳಿನ ಸ್ವರವೂ ಹಾರುತ್ತ ಕಾಡಿನಲ್ಲಿ ಆಡಿಯಾಡುತ್ತಲಿದ್ದಿತು ಆ ವ್ಯಕ್ತಿಗೆ ಸಮಯದ ಚಿಂತೆಯಿರಲಿಲ್ಲ. ತನ್ನ ಚಿಂತೆಯೂ ಇರಲಿಲ್ಲ ಒಮ್ಮೊಮ್ಮೆ ನಸುನಗುತ್ತ ತಾರೆಗಳ ಕಡೆಗೆ ನೋಡುತ್ತ, ಇನ್ನೊಂದು ಸಲ ಕಂಟಿಗಳ ಕಡೆಗೆ ದೃಷ್ಟಿಯನ್ನು ಚೆಲ್ಲುತ್ತ ನಡೆದಿದ್ದಾನೆಯೆ ವಿನಾ ಅವನ ನೋಟ ದಾರಿಯ ಕಡೆಗೆ ಇರಲೇ ಇಲ್ಲ. ಅವನು ಎಂದಾದರೂ ದಾರಿಯ ಕಡೆಗೆ ನೋಡುವನೇನು?

ಅಕಸ್ಮಾತ್ ಅವನ ಲಕ್ಷ್ಯವು ಬೇರೆಡೆಗೆ ಹೋಯಿತು ನಿಂತ ಒಂದು ಬಿರುನುಡಿಯು ಅವನಿಗೆ ಕೇಳಬಂದಿತು "ಯಾರವರು ?"

ಸ್ವಲ್ಪ ಹೊತ್ತು ತಡೆದು ಅವನು ಕೇಳಿದ "ಏಕೆ ?"

ಪ್ರತಿಧ್ವನಿಯು ಬಂದಿತು "ಹೋಗುತ್ತಿರುವವರು ಯಾರು?"

"ತಾವಾರು ?"

"ಗ್ರೇಟ್ ಹಾರ್ಟ್ !" *.

ಗ್ರೇಟ್‌ಹಾರ್ಟರ ಹೆಸರನ್ನು ಕೇಳಿದರೆ ಜನರು ನಡುಗುತ್ತಾರೆ. ಗ್ರೇಟ್ ಹಾರ್ಟರೆಂದರೆ ಜನಗಳಿಗೆ ಎಷ್ಟು ಭಯ! ಆದರೆ ಆ ವ್ಯಕ್ತಿಯು ಹೆದರಲಿಲ್ಲ ಉತ್ತರವಿತ್ತನು "ನಾನು ಶಮಶೇರ! "

"ನಾನು ನಿನ್ನನ್ನು ಸೆರೆ ಹಿಡಿಯುತ್ತೇನೆ "

"ತಾವು ?"

"ಹೂಂ !"

"ನನ್ನ ಸೌಭಾಗ್ಯ ಆದರೆ ಬಂಧಿತನಾಗಲು ಇಚ್ಛೆಯಿಲ್ಲ ನನಗೆ "

ಒಂದು ಗುಂಡು ಹಾರಿತು

ಕರ್ನಲ್ ಗ್ರೇಟ್‌ಹಾರ್ಟರು ಗುಂಡು ಹೊಡೆಯುವುದರಲ್ಲಿ ನಿಷ್ಣಾತರು ಅವರ ಗುಂಡುಗಳು ಹುಸಿಹೋಗುವುದಿಲ್ಲ ಅವರು ಗುರಿಯಿಟ್ಟ ವಸ್ತುವು ಉಳಿಯುವುದಿಲ್ಲ ಆದರೆ ಶಮಶೇರನಿಗೆ ಗುಂಡು ತಗಲಲಿಲ್ಲ

ಶಮಶೇರನೆಂದ "ಇದೇನು ಕರ್ನಲ್ ಸಾಹೇಬರೇ ? ಗುಂಡು ತಗಲಲಿಲ್ಲವಲ್ಲ ?"

"ನಾನು ನಿನ್ನನ್ನು ಕೊಲ್ಲಲಿಚ್ಛಿಸುವುದಿಲ್ಲ ಸುಮ್ಮನೆ ಬಂಧಿತನಾಗಿಬಿಡು."

"ಕರ್ನಲ್ ಸಾಹೇಬರೆ, ಈಗಲೆ ಬಂಧಿತನಾಗುವ ಇಚ್ಛೆ ನನಗಿಲ್ಲವೆಂದು ನಾನು ಹೇಳಿದೆನಲ್ಲವೆ ?"

---

* ಗ್ರೇಟ್ ಹಾರ್ಟ್ ಎಂದರೆ ವಿಶಾಲಹೃದಯ, ಉದಾತ್ತಹೃದಯ.

" ನೋಡು, ಬಂಧಿತನಾಗದಿದ್ದರೆ ಸಾಯುವಿ. "

" ಸಾಯುವುದಕ್ಕೇಕೆ ಅಂಜಿಕೆ ? "

ಮತ್ತೊಂದು ಗುಂಡು ಉರಿಯುತ್ತ ಕರ್ನಲ್ ಸಾಹೇಬರ ಕಡೆಯಿಂದ ಬಂದು ಶಮಶೇರನ ಭುಜದೊಳಗಿಂದ ಪಾರಾಗಿ ಹೋಯಿತು ಆ ಆರುಪಾರಾದ ಸ್ಥಾನವನ್ನು ಇನ್ನೊಂದು ಕೈಯಿಂದ ಶಮಶೇರ ಮುಚ್ಚಿಕೊಂಡ ಅವನಿಗೆ ಕೇಳಿಸಿತು " ಸುಮ್ಮನೆ ನಾನು ಹೇಳಿದಷ್ಟು ಕೇಳು ಇಲ್ಲವೆ ಹೋದರೆ ನೋಡು, ಈ ಸಲ ಗುಂಡು ತಲೆಗೆ ಬಡಿಯುವುದು "

ಶಮಶೇರನೆಂದ " ಗೋವಿಂದ ! "

ಅದೆಲ್ಲಿಂದಲೊ ಇಬ್ಬರು ಬಂದು ನಿಮಿಷಾರ್ಧದಲ್ಲಿ ಶಮಶೇರನ ತಲೆಯನ್ನು ಹಾರಿಸಬೇಕೆಂದಿದ್ದ ಗುಂಡು ತುಂಬಿದ ಪಿಸ್ತೂಲನ್ನು ಕರ್ನಲ್ ಸಾಹೇಬರ ಕೈಯಿಂದ ಕಸಿದುಕೊಂಡು ಬಿಟ್ಟರು ಕರ್ನಲ್ ಸಾಹೇಬರು 'Fire! (ಫಾಯರ್)' ಎಂದರು

ಐದು ಗುಂಡುಗಳು ಒಮ್ಮೆಲೆ ಹಾರಿದುವು ಆ ಬಂದವರಿಬ್ಬರೂ ಭೂಮಿಗುರುಳಿದರು ಕೂಡಲೆ ಭೂಮಿಯೊಳಗಿಂದ ಭೂತಗಳ ಸೈನ್ಯವೆ ಎದ್ದು ಬರುತ್ತಿರುವುದೊ ಏನೊ ಎಂದನಿಸಿತು ಏನಾಗುತ್ತಿ-ದೆಯೆಂಬುದು ಯಾರಿಗೂ ತಿಳಿಯಲಿಲ್ಲ ಬಳಿಕ ಐವರು ಸಿಪಾಯಿ-ಗಳನ್ನೂ ಬಂಧಿಸಿ ಕರ್ನಲ್ ಸಾಹೇಬರ ಎದುರಿನಲ್ಲಿ ನಿಲ್ಲಿಸಲಾಯಿತು ಕರ್ನಲ್ ಸಾಹೇಬರು ತವಾಕ್ಕಾಗಿ ನಿಃಶಸ್ತ್ರರಾಗಿ ನೋಡುತ್ತ ನಿಂತು ಬಿಟ್ಟರು

" ಈ ಐವರು ಸಿಪಾಯರನ್ನೂ ಈ ಗಿಡಕ್ಕೆ ಕಟ್ಟಿಬಿಡಿರಿ " ಎಂದು ಹೇಳಿ " ಕರ್ನಲ್ ಸಾಹೆಬ್, ನನ್ನ ಸಂಗಡ ನಡೆಯಿರಿ. ನೀವು ನನ್ನ ಐವರು ಮನುಷ್ಯರನ್ನು ಕೊಲ್ಲಿಸಿರುವಿರಿ, ಅಥವಾ ಕೊಂದಿರುವಿರಿ ಆ ಐವರ ಪ್ರಾಣಕ್ಕಿಂತಲೂ ನಿಮ್ಮ ಪ್ರಾಣವು ಹೆಚ್ಚು ಬೆಲೆಯುಳ್ಳದೇನು ? " ಎಂದು ಶಮಶೇರ ಕರ್ನಲ್‌ಸಾಹೇಬರನ್ನು ಕೇಳಿದ.

ತನ್ನ ಬರಿಗೈಯನ್ನು—ಯಾವ ಕೈಯ ಭುಜದಲ್ಲಿ ಗುಂಡು ನೆಟ್ಟು ಪಾರಾಗಿದ್ದಿತೊ ಅದನ್ನು—ಕರ್ನಲ್ ಸಾಹೇಬರ ಕೈಯಲ್ಲಿ ಕುಲುಕಿಸಿ ಅವರನ್ನು ಸಂಗಡ ಕರೆದುಕೊಂಡು ಹೊರಟ

ತನ್ನ ಜನರಿಗೆ ಹೇಳಿದ "ನೀವು ಹೋಗಿರಿ, ಆದರೆ ಹುಷಾರಾಗಿರಿ ಐದು ಜನಗಳ ಕೊಲೆಯ ಪಾತಕವು ನನ್ನ ತಲೆಯ ಮೇಲಿದೆ. ಇರಲಿ, ಪರಮಾತ್ಮನಿದ್ದಾನೆ"

ಕರ್ನಲ್ ಗ್ರೇಟ್ ಹಾರ್ಟರು ಶಮಶೇರನೊಡನೆ ಮಾತನಾಡದೆ ನಡೆಯುತ್ತಿದ್ದಾರೆ ಇಬ್ಬರೂ ಯೋಚಿಸುತ್ತಿದ್ದಾರೆ . ಅದೇನು ಯೋಚಿಸುತ್ತಿದ್ದಾರೂ ?

ಸ್ವಲ್ಪ ಹೊತ್ತಿನ ನಂತರ ಶಮಶೇರನೆಂದ "ಕರ್ನಲ್ ಸಾಹೇಬ್! ಈಗ ನಾನೇನಾಗಿರುವೆನೂ ಅಪಸಿಲ್ಲದಿದ್ದರೆ ನಿಮ್ಮ ಸೇವಕನಾಗಿ ಧನ್ಯನಾಗುತ್ತಿದ್ದೆ"

ಇಬ್ಬರೂ ಪರಸ್ಪರರನ್ನು ನೋಡಿದರು

ಮತ್ತೆ ಶಮಶೇರನೆಂದ "ಸಾಹೇಬ್! ಮೊದಲು ನೀವು ಹುಸಿಗುಂಡು ಹಾರಿಸಿದಿರಿ ಆ ಮೇಲ ಭುಜಕ್ಕೆ ಗುಂಡು ಹಾಕಿದಿರಿ ನಿಮ್ಮಿಂದ ಇಂತಹ ತಪ್ಪೇಕಾಯಿತು ?"

"ತಪ್ಪು? " ಎಂದು ಕರ್ನಲ್ ಸಾಹೇಬರು ಮುಂದೆ ಮಾತನಾಡದೆ ಸುಮ್ಮಗಾದರು

"ನಿಮ್ಮ ಕಾಯಿದೆಯಲ್ಲಿ ಐವರು ಮನುಷ್ಯರ ಜೀವನಕ್ಕೇನೂ ಬೆಲೆಯಿಲ್ಲ. ನನ್ನ ಜೀವನವನ್ನಾದರೂ ಏಕೆ ಉಳಿಸಿದಿರಿ ? ನೀವು ಇಷ್ಟಪಟ್ಟಿದ್ದರೆ ಒಂದೇ ಗುಂಡಿನಿಂದ ಕೊಲ್ಲಬಹುದಾಗಿದ್ದಿತು"

ಕರ್ನಲ್ ಸಾಹೇಬರು ಉತ್ತರ ಕೊಡಲಿಲ್ಲ

"ನನ್ನ ಮೇಲೆ ದಯೆ ತೋರಿದಿರೇನು ?"

"ನಿನ್ನನ್ನು ಗಲ್ಲಿಗೇರಿಸಬೇಕಾಗಿದೆ ಆದುದರಿಂದಲೆ ಕೊಲ್ಲಲಿಲ್ಲ"

"ಕರ್ನಲ್ ಸಾಹೇಬ್, ನಿಮ್ಮಲ್ಲಿ ಜೀವಕ್ಕೇನೂ ಬೆಲೆಯಿಲ್ಲವೆ?"

"ಇಲ್ಲ . . !"

"ಏಕಿಲ್ಲ ?"

" ನಿನ್ನೊಡನೆ ವಾದಿಸಲಿಚ್ಛಿಸುವುದಿಲ್ಲ "

"ಕರ್ನಲ್ ಸಾಹೇಬ್, ನೀವು ನನ್ನ ಕೈಯಲ್ಲಿರುವಿರಿ, ತಿಳಿಯಿತೇ"

ಕರ್ನಲ್‌ಸಾಹೇಬರು ಬೆದರಿ ಹುಬ್ಬುಗಂಟಿಕ್ಕಿ ಸುಮ್ಮನೆ ನಿಂತರು

" ನಾನು ನಿಮ್ಮನ್ನು ಕೊಲ್ಲಬಲ್ಲೆ "

ಕರ್ನಲ್‌ಸಾಹೇಬರು ಉಪೇಕ್ಷೆಯಿಂದ " ಹಾ ! " ಎಂದರಷ್ಟೆ !

" ಕರ್ನಲ್ ಸಾಹೇಬ್, ನಾನು ನಿಮ್ಮನ್ನು ಕೊಂದುಬಿಟ್ಟರೆ ! "

ಕರ್ನಲ್ ಸಾಹೇಬರು ಉದಾಸೀನರಾಗಿಯೆ ನಿಂತರು

" ಕೇಳಿಸುತ್ತಿದೆಯೇನು ನಿಮಗೆ ? ನಿಮ್ಮನ್ನು ಕೊಂದು ರೆ "

ಕರ್ನಲರು ವಿಸ್ಮಯದಿಂದ ನೋಡಿದರು " ಕೊಂದರ ಏನು ಆಗುವುದು ? ಏನೂ ಇಲ್ಲ "

" ಈ ವ್ಯಕ್ತಿಯು ತನ್ನ ಜೀವನಕ್ಕೆ ಬೆಲೆ ಕೊಡಲಾರ, ಆದುದರಿಂದಲೆ ಬೇರೆಯವರ ಜೀವನಕ್ಕೂ ಬೆಲೆ ಕೊಡದೆ ಇರುವ ಅಧಿಕಾರವು ಇವನಿಗೆ ಇದೆ " ಎಂದು ಶಮಶೇರ ಮನದಲ್ಲಿಯೆ ಯೋಚಿಸಿದ

" ಎಂತಹ ಅದ್ಭುತ ಜೀವವಿದು ! ಭುಜವು ಛೇದಿತವಾಗಿದೆ, ಆದರೂ ನಗುನಗುತ್ತ ಮಾತನಾಡುತ್ತಿದ್ದಾನೆ ! " ಎಂದು ಕರ್ನಲ್ ಗ್ರೇಟ್‌ಹಾರ್ಟರೂ ಯೋಚಿಸಿದರು

" ಕರ್ನಲ್, ನೀವು ದೊಡ್ಡವರು, ನಾನು ಚಿಕ್ಕವ, ಪರ "

ಕರ್ನಲರು ರಭಸದಿಂದ " ನಾನು ನಿನ್ನೊಡನೆ ವಾದಿಸಲಿಚ್ಛಿಸುವುದಿಲ್ಲ" ಎಂದರು

" ಏಕೆ ? "

" ನೀನು ಮನುಷ್ಯನೇನು?—ಪಶು "

ಇದನ್ನು ಕೇಳಿ ಶಮಶೇರನಿಗೆ ನಗು ಬಂದಿತು ಗಟ್ಟಿಯಾಗಿ ನಗಬೇಕೆಂದೆನಿಸಿತು, ನಕ್ಕುಬಿಟ್ಟ " ನೋಡಿರಿ " ಎಂದವನೆ ಆ ಗುಂಡಿನಿಂದ ಆರುಪಾರಾದ ಭುಜದ ಮೇಲಿಟ್ಟಿದ್ದ ಹಸ್ತವನ್ನು ತೆಗೆದ ಕೂಡಲೆ ಒಂದು ಬಿಸಿಬಿಸಿಯಾದ ನೆತ್ತರಿನ ಕಾರಂಜಿಯು ಪುಟಿದು ಬಂದಿತು ಕೆಲವು ನಿಮಿಷಗಳ ಮೇಲೆ ಪುನಃ ಕೈಯನ್ನು ಆ ಗಾಯದ ಮೇಲಿಟ್ಟು ನಗುತ್ತ "ಇದ. .ಇದನ್ನು ನೋಡಿದ ಮೇಲೂ ಸುಮ್ಮಗಿರುವ

ಪ್ರವೃತ್ತಿಯು ಪಶುಗಳಲ್ಲಿ ಕಡಮೆಯಾಗಿರುತ್ತದೆ ಮನುಷ್ಯರ-ಲ್ಲಿಯೂ ಹೆಚ್ಚಾಗಿ ಇರುವುದಿಲ್ಲವೆನ್ನಬಹುದು" ಎಂದ ಶಮಶೇರ

ಕರ್ನಲ್ ಸಾಹೇಬರ ಹೃದಯವು ಕರಗಿ ಅಳುವು ಉಕ್ಕೇರಿ ಬಂದಿತು ಅವರು ತುಂಬಿ ಬಂದ ಹೃದಯದಿಂದ ನೋಡಿದರು—ಶಮಶೇರನು ಶೂರನು ನೆತ್ತರಿನೊಡನೆ ಆಡುವ ಆಟಗಾರನು ಸಂಶಾರಿ ದೃಷ್ಟಿಯಿಂದ ನೋಡಿದರೆ—ಶಮಶೇರನು ದರೋಡೆ-ಖೋರನು ಉಪೇಕ್ಷೆಯ ಭಾವದಿಂದ ಗರ್ವದಿಂದ ಸುಮ್ಮನೆ ನಿಂತರು

ಶಮಶೇರನು ನಸುನಗುತ್ತ "ಸಾಹೇಬ್, ರಕ್ತವು ಬಹಳವಾಗಿ ಹರಿಯುತ್ತದೆ ಹೇಳಿರಿ ಏನು ಮಾಡಲಿ? ಈ ಗಾಯವು ತನು ಕರುಣೆಯ ಕುರುಹು ಅಲ್ಲವೆ?"

ಕರ್ನಲ್ ಸಾಹೇಬರ ದೇಹದಲ್ಲಿ ಅತುಳವಾದ ಬಲವಿದ್ದಿತು. ಅವರು ಶಮಶೇರನನ್ನು ಗಟ್ಟಿಯಾಗಿ ಹಿಡಿದವರೆ ಕೆಳಕ್ಕೆ ಕೆಡಹಿದರು ಅವರೇನು ಮಾಡುವರೆಂಬುದನ್ನು ಶಮಶೇರನು ಅರಿಯುವಷ್ಟರಲ್ಲಿಯೆ ಅವನ ಕೈಯನ್ನು ಆ ಗಾಯದಿಂದ ಬೇರ್ಪಡಿಸಿ, ತಮ್ಮ ಷರ್ಟು ಹರಿದು ಒಂದು ತುಂಡು ಅರಿವೆಯಿಂದ ಆ ಗಾಯವನ್ನು ಕಟ್ಟಿದರು ಆಗ ಶಮಶೇರನ ತಲೆಯು ಕರ್ನಲ್ ಸಾಹೇಬರ ಎರಡೂ ತೊಡೆಗಳ ಮಧ್ಯದಲ್ಲಿದ್ದಿತು

ಶಮಶೇರನೆಂದ "ಈ ಮೋಸ!"

"ಇಂಗ್ಲಿಷ್ ಜನಗಳೆಂದರೆ ಹೀಗೆಯೆ" ಕರ್ನಲರೆಂದರು

ತಮ್ಮ ಷರ್ಟು ಹರಿದು ಈ ಗಾಯವನ್ನು ಚೆನ್ನಾಗಿ ಕಟ್ಟಿದ ಮೇಲೆ ಕರ್ನಲ್ ಸಾಹೇಬರು ಮತ್ತೆ ಅವನೊಡನೆ ನಡೆದರು.

ಒಂದು ಗುಡಿಸಲಿನ ಬಳಿ ಬಂದು ಬಾಗಿಲನ್ನು ತಟ್ಟಿ ಶಮಶೇರ-ನೆಂದ "ಖಾನ್!"

ಸ್ವಲ್ಪ ಹೊತ್ತಿನ ವರೆಗೆ ಬಾಗಿಲು ತೆರೆಯಲಿಲ್ಲ

"ನಾನು, ಮೋಹನ"

"ಸರದಾರ!" ಎಂದವನೆ ವಿಸ್ಮಯದಿಂದ ಬಾಗಿಲು ತೆರೆದು 'ಖಾನ'—"ಇವೊತ್ತು ತಾವು ಬರುವವರಿದ್ದಿಲ್ಲ" ಎಂದ,

"ಮಾನ, ನಾವು ತಿಳಿದುಕೊಂಡ ದಿನಕ್ಕಿಂತ ಮೊದಲೆ ಕರ್ನಲ್ ಸಾಹೇಬರು ಬಂದಿರುವರು ನೋಡು ಆದರೂ ಇವರಿಗೆ ನಮ್ಮ ಆತಿಥ್ಯದಲ್ಲಿ ಯಾವ ಕೊರತೆಯೂ ಆಗಕೂಡದು"

'ಮಾನ' ಸಂಭ್ರಮದಿಂದ ಹೊರಟುಹೋದ

ಕರ್ನಲರೂ ಶಮಶೇರನೂ ಕಿರುಮನೆಯನ್ನು ಸೇರಿದರು ಹುಲ್ಲು ಹಾಸಿದ್ದಿತು ಎರಡೆರಡು ಸಾಧಾರಣವಾದ ಮಂಚಗಳು ಬಿದ್ದಿದ್ದುವು. ಹಾಸಿಗೆಯೆನ್ನುವುದು ಅವುಗಳ ಮೇಲಿರಲಿಲ್ಲ ಒಂದು ಗೂಟಕ್ಕೆ ಹಸಿರು ಬಣ್ಣದ ಕಂದೀಲು ತೂಗುಹಾಕಿದ್ದಿತು ಒಂದು ಒರಬರ-ಕಾದ ಮೇಜಿನ ಮೇಲೆ ಕೆಲವು ಕಾಗದಗಳು, ಒಂದು ಡಾಯರಿ, ಒಂದು ಪೆನ್ಸಿಲ್—ಇಷ್ಟು ವಸ್ತುಗಳಿದ್ದುವು ಅದಲ್ಲದೆ, ಒಂದು ಗೂಡಿನಲ್ಲಿ ತುಲಸೀದಾಸರ ರಾಮಾಯಣದ ಚಿಕ್ಕ ಸುಂದರ ಸಂಸ್ಕರಣವು ಇದ್ದಿತು ಕಿರುಮನೆಯಲ್ಲಿ ಇವುಗಳ ಹೊರತು ಮತ್ತೇನೂ ಇರಲಿಲ್ಲ

ಕರ್ನಲ್ ಸಾಹೇಬರನ್ನು ಒಂದು ಮಂಚದ ಮೇಲೆ ಕುಳ್ಳಿರಿಸಿ ತಾನೂ ಅದರ ಮೇಲೆಯೆ ಅವರ ಬಳಿಯಲ್ಲಿಯೆ ಕುಳಿತುಕೊಂಡ ಮೇಜನ್ನು ಎಳೆದು ಇಬ್ಬರಿಗೂ ಮಧ್ಯದಲ್ಲಾಗುವಂತೆ ಇಟ್ಟುಕೊಂಡ

ಮಾನ ಹಿಂತಿರುಗಿ ಬಂದ ಮೇಲೆ ಅವನಿಗೆ "ಸಾಹೇಬರಿಗಾಗಿ ಒಳ್ಳೆ ಹಾಸಿಗೆಯನ್ನು ಸಿದ್ಧಪಡಿಸು" ಎಂದು ಹೇಳಿದ

ಕರ್ನಲ್ ಸಾಹೇಬರಿಗೆ ಹಿಂದೀ ಚೆನ್ನಾಗಿ ಬರುತ್ತದೆ ಇನ್ನು ಬಹಳ ಹೊತ್ತು ಮೌನದಿಂದ ಇರಬಾರದೆಂದು ಅವರಿಗನಿಸುತ್ತಿದೆ ಆದರೆ ಶಮಶೇರ ಅವರೊಡನೆ ರಾಜಧರ್ಮ, ಸಮಾಜಶಾಸ್ತ್ರದ ವಿಷಯಗಳನ್ನು ಕುರಿತು ಚರ್ಚಿಸಬೇಕೆನ್ನುತ್ತಾನೆ ಈ ಚರ್ಚೆಯಲ್ಲಿ ಮನಸ್ಸು ಹಾಕುವ ಇಚ್ಛೆಯಿಲ್ಲ ಕರ್ನಲ್ ಸಾಹೇಬರಿಗೆ ಅವರು ಶಮಶೇರನನ್ನು ಕುರಿತು ಯೋಚಿಸುತ್ತಿದ್ದಾರೆ "ಸಾಮಗ್ರಿಯಿದೆ, ಆದರೆ ಪರಿಸ್ಥಿತಿಯು ಅನುಕೂಲವಾಗಿರಲಿಲ್ಲ ಆದುದರಿಂದಲೆ ಇವನು ಪರಿಶೋಡೆಖೋರನಾಗಿದ್ದಾನೆ ಪಾಪ! .. ಶಿಕ್ಷಣವನ್ನು ಪಡೆದಿದ್ದರೆ ಎಷ್ಟು ಸುಂದರ ನಾಗರಿಕನಾಗುತ್ತಿದ್ದ ಇವನೀಗ!."

ಇದೇ ವೇಳೆಯಲ್ಲಿ ಶಮಶೇರನು ಎಂದುಕೊಳ್ಳುತ್ತಿದ್ದ "ಶಿಕ್ಷಣ! ಇವೊತ್ತು ಇದು ಹಿಂದುಸ್ತಾನವನ್ನು ಏನನ್ನಾಗಿ ಸಿತು! ಇದು ಹೃದಯದ ನಿಭೂತಿಯನ್ನು ಹರಿಕೊಳ್ಳುತ್ತಿದೆ, ಮಾನವನಿಗೆ ದಾಂಭಿಕತನವನ್ನು ಕಲಿಸುತ್ತಿದೆ, ವಾಸ್ತವಿಕತೆಯನ್ನು ದೂರ ಸರಿಸಿ ಅನುಕರಣವನ್ನು ಮಾಡಲು ಕಲಿಸುತ್ತಿದೆ, ದೊಡ್ಡದೊಡ್ಡ ಗ್ರಂಥಗಳನ್ನೂ ಕೋಶಗಳನ್ನೂ ತೋರಿಸಿ ಮಾನವನನ್ನು ತೊಟಿನಲ್ಲಿ ಸಿಕ್ಕಿಸುತ್ತಿದೆ ಈ ಶಿಕ್ಷಣವು ಮನುಷ್ಯನ ಭಯಂಕರವಾದ ಶತ್ರುವಾಗಿಬಿಟ್ಟಿದೆ ಇವೊತ್ತು, ಒಂದು ದೊಡ್ಡದಾದ ವಿದ್ಯೆಯಿದೆ ಅದಕ್ಕೆ 'ಕಾನೂನು' ಎಂದು ಹೆಸರು ಒಂದೊಂದು ಎರಡೆರಡು ಅಡಿ ಎತ್ತರವಾದ ಲಕ್ಷಾಂತರ ಕಾನೂನಿನ ಪುಸ್ತಕಗಳು ಜನ್ಮತಾಳಿವೆ ಕರ್ನಲ್ ಸಾಹೇಬ್, ಈ ನಿಮ್ಮ ಕಾನೂನು ವಿದ್ಯೆಯ ಉದ್ದೇಶವಾದರೂ ಏನು? ಮಾನವನ ಜನ್ಮಸಿದ್ಧ ಹಕ್ಕಾದ ಸ್ವಾತಂತ್ರ್ಯವನ್ನು ಹತ್ತಿಕ್ಕುವುದೆ ನಿಮ್ಮ ಶಿಕ್ಷಣದ ಉದ್ದೇಶವಲ್ಲವೆ? ಅನ್ಯಾಯಿಗಳನ್ನು, ಬಲಿಷ್ಠರನ್ನು ಕಲಿಯ ಮೇಲೆ ಕುಳ್ಳಿರಿಸಿಕೊಳ್ಳುವುದಕ್ಕೂ ನ್ಯಾಯನಿಷ್ಠರನ್ನು ನಿರ್ಬಲರನ್ನು ಮೆಟ್ಟುವುದಕ್ಕೂ ನಿಮ್ಮ ಶಿಕ್ಷಣದ ಉಪಯೋಗವಾಗುತ್ತಿಲ್ಲವೆ? ಸತ್ಯವನ್ನು ಕೊಲ್ಲುತ್ತಿರುವುದಿಲ್ಲವೆ ಇದರ ಬಲದಿಂದ? ನೀವು ಹೇಳಿರಿ?"

ಕರ್ನಲ್ ಸಾಹೇಬರು ಶಾಂತರಾಗಿ "ಶಮಶೇರ, ಹೆಚ್ಚು ಯೋಚಿಸಬೇಡ, ಮಾತನಾಡಬೇಡ ಸ್ವಲ್ಪ ಹಾಲು ಕುಡಿದು ಮಲಗಿಕೊ" ಎಂದರು

"ಏನು ಹೇಳುತ್ತಿರುವಿರಿ? ನೀವು ಈ ಕಾಯಿದೆಯನ್ನು ಹೇಗೆ ಸಮರ್ಥಿಸುತ್ತಿರುವಿರಿ? ಎಂದು ಕೇಳುತ್ತಿದ್ದೇನೆ ಇವೊತ್ತು ಈ ಕಾಯಿದೆಯಿಂದ ಜಗತ್ತು ಹಣ್ಣುಹಣ್ಣಾಗಿ ಹೋಗಿದೆ ಇದು ನಿಮಗೆ ಕಾಣುವುದಿಲ್ಲವೇನು? ಏನು ?"

"ಹೆಚ್ಚಿಗೆ ಮಾತನಾಡಬೇಡ. ಗಾಯವು ಹೆಚ್ಚಾದೀತು, ನೋವು ಜಾಸ್ತಿಯಾದೀತು. ಸ್ವಲ್ಪ ಸುಮ್ಮಗಿರು."

"ಏನು ಕಾಯಿದೆಯಲ್ಲಿ ಅಧಿಕಾರದ ಮದವೇ ಹೆಚ್ಚಾಗಿದೆ-ಯೆಂದೂ ಪ್ರೇಮವು ಇಲ್ಲವೆಂದೂ ನಿಮಗೆ ಕಾಣುತ್ತಿಲ್ಲವೇ? ಕಣ್ಣು-ಗಳು ಅಪರಾಧವನ್ನೇ ಹುಡುಕುತ್ತಿರುತ್ತವೆಯೆ ವಿನಾ ಸಭ್ಯತೆಯನ್ನಲ್ಲ ಅಂಕುಶವು ಪೀಡಿತರ ಮೇಲಿದೆಯೆ ವಿನಾ ಶಾಸಕರ ಮೇಲಿಲ್ಲ ಯಾತನೆಯ ಕಲ್ಲೊಂದಿದೆ ಅವರಲ್ಲಿ ಒಬ್ಬನೇ ಒಬ್ಬನು ಬೀಸುತ್ತಾನೆ. ಹತ್ತೆಂಟು ಜನರು ಅದರಲ್ಲಿ ನುಗ್ಗುತ್ತಿದ್ದಾರೆ ನೀವು ಬೀಸುವವನ ಕೈಯೇ ಇನ್ನಿಷ್ಟು ಗಟ್ಟಿಯಾಗಿ ಹಿಡಿಯುವಂತೆ ಮಾಡುತ್ತಿರುವಿರಿ, ಮತ್ತೇನನ್ನೂ ಮಾಡುತ್ತಿರುವುದಿಲ್ಲ ಅಹುದೋ ಅಲ್ಲವೋ? ಏನು ?"

"ಸುಮ್ಮನಾಗು, ನೋಡು ನಿನ್ನ ಮಾನ ಬರುತ್ತಿದ್ದಾನೆ"

ಮಾನನು ಕರ್ನಲ್ ಸಾಹೇಬರ ಪ್ರತಿಷ್ಠೆಗೆ ಯೋಗ್ಯವಾಗು-ವಂತಹ ಹಾಸಿಗೆಯನ್ನು ತಂದು ಹಾಸಿ ಕೊಡುತ್ತಾನೆ

"ಏನು, ನಿನ್ನ ಹೆಸರು 'ಮಾನ' ಏನು? ನೋಡು, ನಿನ್ನ ಸರದಾರನಿಗೆ ಹಾಲು ತೆಗೆದುಕೊಂಡು ಬಾ ಗಾಯವು ದೊಡ್ಡದಾಗಿದೆ" ಎಂದರು ಕರ್ನಲ್ ಸಾಹೇಬರು

"ಕರ್ನಲ್ ಸಾಹೇಬರು ಹಸಿದಿರುವರು, ಗೊತ್ತಾಗುವುದಿಲ್ಲ-ವೇನು? ಏನನಾದರೂ ಅವರಿಗೋಸ್ಕರ ಬೇಗ ತೆಗೆದುಕೊಂಡು ಬಾ, ಹೋಗು" ಎಂದ ಶಮುಶೇರ

ಮಾನ ಹೊರಟು ಹೋದ ಕರ್ನಲ್ ಸಾಹೇಬರೆಂದರು "ನಾನಿನ್ನು ನಿನಗೆ ಮಾತನಾಡಗೊಡುವುದಿಲ್ಲ"

"ನೀವು ಆ ಹಾಸಿಗೆಯತ್ತ ಹೋಗಿರಿ"

"ಒಲ್ಲೆ ಅದು ನನಗೆ ಬೇಡ ಗಾಯವಾದವನಿಗೆ ಅಲ್ಲಿ ಮಲ-ಗಲು ಅಧಿಕಾರವಿದೆ ನಾನಲ್ಲಿ ಮಲಗಿಕೊಳ್ಳಲು ಹೋಗಬೇಕೆ? ನಾನು ಪಶುವಲ್ಲ ನೀನು ಅದರ ಮೇಲೆ ಮಲಗಿಕೊಂಡು ವಿಶ್ರಾಂತಿ ಪಡೆ"

"ಬೇಡ."

"ಬೇಡ"

ಈ 'ಬೇಡ' ಶಬ್ದ ಕೇಳಿ ಶಮುಶೇರನ ಕಣ್ಣುಗಳಲ್ಲಿ ಒಂದೆರಡು ಹನಿಗಳು ಬಂದವು. "ಸಾಹೇಬರೇ, ನಾನು ಕಳ್ಳ, ದರೋಡೆ-

ಹೊರ, ಬಡವ ನನಗೋಸ್ಕರ ಆ ಹಾಸಿಗೆಯಿಲ್ಲ '' ಎಂದ ಶಮಶೇರ

ಕರ್ನಲ್ ಸಾಹೇಬರು ಎದ್ದು ಸುಮ್ಮನೆ ಆ ಹಾಸಿಗೆಯ ಮೇಲೆ ಹೋಗಿ ಕುಳಿತರು

ಇಬ್ಬರೂ ಮೌನದಿಂದಿದ್ದರು ಇಬ್ಬರೂ ಏನನೊ ಯೋಚಿಸುತ್ತಿದ್ದರು ಇಬ್ಬರಿಗೂ ಏನೊ ಸಿಕ್ಕಂತಾಗುತ್ತಿದ್ದಿತು ಇಷ್ಟರಲ್ಲಿ ಮಾನ ಪದ್ಧತಿಯ ಪ್ರಕಾರ ಟ್ರೇ-ಕಪ್, ಕಾಫಿ, ಟೋಸ್ಟ್ ತೆಗೆದುಕೊಂಡು ಬಂದ ಒಂದು ಬಟ್ಟಲಲ್ಲಿ ಪ್ರತ್ಯೇಕವಾಗಿ ಹಾಲನ್ನೂ ತಂದಿದ್ದ

'' ನನಗೆ ಹಸಿವಿಲ್ಲ ನಾನು ತಿನ್ನುವುದಿಲ್ಲ, ಕುಡಿಯುವುದಿಲ್ಲ'' ಎಂದರು ಕರ್ನಲ್ ಸಾಹೇಬರು

'' ಇಂತಹ ಒಣ ಒಣವಾದ ಅತಿಥಿಸತ್ಕಾರವು ಎಂದಿಗೂ ಸಿಕ್ಕಲಿಕ್ಕಿಲ್ಲ ಇದರ ಹೊರತು ನನ್ನ ಬಳಿಯಲ್ಲಿ ಇರುವುದಾದರೂ ಏನು ?'' ಎಂದ ಶಮಶೇರ

'' ಅದೇನೂ ಇಲ್ಲ ನನಗೆ ಹಸಿವಿಲ್ಲ, ಅದಕ್ಕೋಸ್ಕರ ಬೇಡ ''

''ಸಾಹೇಬ್, ನಾನು ಗಳಿಸಿದ ಹಣ ವೆಚ್ಚಮಾಡಿ ಈ ಸಾಮಾನುಗಳನ್ನು ತಂದುದಾಗಿದೆ ಸನ್ಮಾರ್ಗದಿಂದ ಬಂದ ಹಣ ವೆಚ್ಚವಾಗಿದೆ ವಿಶ್ವಾಸವಿಡಿರಿ ! ''

' ಶಮಶೇರ, ನನಗೆ ಬೇಡವಾಗಿದೆ ''

'' ಮಾನ, ಹಾಗಾದರೆ ಎಲ್ಲವನ್ನೂ ತೆಗೆದುಕೊಂಡು ಹೋಗು ನನಗೂ ಬೇಡ'' ಎಂದ ಶಮಶೇರ

ಮಾನ ತೆಗೆದುಕೊಂಡು ಹೋಗುವುದರಲ್ಲಿದ್ದ ಆಗ ಈ ಆಹತ-ಸಹೃದಯ ವ್ಯಕ್ತಿಗೆ ಆದರವನ್ನು ತೋರಿಸಲೇಬೇಕೆಂದೆನಿಸಿತು ಕರ್ನಲ್ ಸಾಹೇಬರಿಗೆ

'' ನಿನಗೆ ಬೇಕಾಗಿದೆ ಶಮಶೇರ ''

'' ಬೇಕಾಗಿಲ್ಲ ''

ಕರ್ನಲ್ ಸಾಹೇಬರು ಮರುಮಾತನಾಡದೆ ತಿನ್ನಲಾರಂಭಿಸಿದರು ಶಮಶೇರನೂ ಹಾಲು ಕುಡಿದ

ಪುನಃ ಕರ್ನಲ್ ಸಾಹೇಬರು ಶಮಶೇರನು ಕುಳಿತಲ್ಲಿಗೆ ಬಂದು, ಗಾಯದ ಪಟ್ಟಿಯನ್ನು ಚೆನ್ನಾಗಿ ಕಟ್ಟಿ ಶಮಶೇರನಿಗೆ ಮಲಗಿಕೊಳ್ಳು-ವುದಕ್ಕೆ ಒತ್ತಾಯಪಡಿಸಲಾರಂಭಿಸಿದರು ಶಮಶೇರನು ಅದಕ್ಕೆ ಎಡೆರನ್ನುಂಟುಮಾಡಲಿಲ್ಲ ತನ್ನ ಬಗಲು ಚೀಲದಲ್ಲಿದ್ದ ಪಿಸ್ತೂಲನ್ನು ಹೊರಗೆ ತೆಗೆದು ಮೇಜಿನ ಮೇಲಿಟ್ಟು "ನೀವು ನನ್ನ ಸೆರೆಯಾಳೆಂದು ತಿಳಿದಿದ್ದೆ, ಆದರೆ ನಾನೇ ನಿಮ್ಮ ಸೆರೆಯಾಳಾಗಿಬಿಟ್ಟಿದ್ದೇನೆ ಅದೇನೆ ಇರಲಿ, ನಿಮ್ಮಂತಹ ಸೆರೆಯಾಳುಗಳಿಗೆ ನಾನೇನು ಮಾಡಬಲ್ಲೆ? ನಿಮ್ಮಂತಹ ವೀರರನ್ನು ಕೊಂದು ನಾನು ಪಾಪಕ್ಕೆ ಗುರಿಯಾಗಲಾ?" ಎಂದ ಶಮಶೇರ

ಅಲ್ಪಾವಧಿಯಲ್ಲಿಯೆ ಶಮಶೇರ ಗುರು ಗುರು ನಿದ್ರೆಮಾಡಲಾ-ರಂಭಿಸಿದ

ಕರ್ನಲ್ ಸಾಹೇಬರು ತಮ್ಮ ಮಂಚದ ಮೇಲೆ ಬಂದು ಕುಳಿತರು ಆದರೆ ಮಲಗಲಿಲ್ಲ ಕಿರುಮನೆಯನ್ನು ಚೆನ್ನಾಗಿ ನೋಡಿದರು ಬಾಗಿಲ ಹೊರಗೆ ನೋಡಿದರು ಯಾವ ಕಾವಲು-ಗಾರನೂ ಇರಲಿಲ್ಲ ಯಾವ ಬಗೆಯ ಅಂಜಿಕೆಯೂ ಇರಲಿಲ್ಲ ಪಿಸ್ತೂಲನ್ನು ನೋಡಿದರು ಹೊಸ ಮಾದರಿಯದು, ಐದು ಕಾಡ-ತೂಸುಗಳದು, ಐದೂ ತುಂಬಿದ್ದುವು ನೋಡಿ ಅದನ್ನು ಮೇಜಿನ ಮೇಲೆಯೆ ಇಟ್ಟರು

ಸ್ವಲ್ಪ ಯೋಚಿಸಿ ಪೆನ್ಸಿಲ್ ಎತ್ತಿಕೊಂಡರು ಬಿಳಿ ಕಾಗದದ ಮೇಲೆ ಏನನ್ನೊ ಬರೆದರು ಜೇಬಿನೊಳಗಿಂದ ರೊಕ್ಕ ಹೊರತೆಗೆದು ಏಳೂವರೆ ಆಣೆಗಳನ್ನು ಎಣಿಸಿ ಮೇಜಿನ ಮೇಲಿಟ್ಟರು

ಮನದೊಳಗೇ ಎಂದುಕೊಂಡರು "ಶಮಶೇರ ಮತ್ತು ನಾನು ಇಬ್ಬರೂ ಗೆಳೆಯರಾಗಲಾರೆವು ಶತ್ರುತ್ವವೇ ನಮ್ಮನ್ನು ಸುತ್ತಿದೆ ಆದರೆ ಶಮಶೇರ, ನಾನು ನಿನ್ನ ವಿಷಯವಾಗಿ ತಪ್ಪು ಭಾವನೆಯನ್ನು ಮಾಡಿಕೊಳ್ಳಲಾರೆ! ಗಲ್ಲಿಗೇರಿಸುವೆ, ಆದರೂ ತಪ್ಪು ಭಾವನೆಯನ್ನು ಮಾಡಿಕೊಳ್ಳಲಾರೆ" ಮತ್ತೊಮ್ಮೆ ಕಿರುಮನೆಯಲ್ಲಿ ನಾಲ್ಕೂ ಕಡೆಗೆ ನೋಡಿ, ಆ ಗುಡಿಸಲಿನಿಂದ ಹೊರಬಿದ್ದರು.

ಅವರು ಬಾಗಿಲ ಹೊರಗೆ ಹಜ್ಜೆಯಿಡುತ್ತಲೆ ಶಮಶೇರನು ಎದ್ದವನೆ ಮೇಜನ ಮೇಲಿಟ್ಟಿದ್ದ ಚೀಟಿಯನ್ನು ನೋಡಿದ. ಅದರಲ್ಲ ಬರೆದಿದ್ದಿತು.

| | |
|---|---|
| ಬ್ರೆಡ್, ಎರಡು ಟೋಸ್ಟ | ೦-೩-೦ |
| ಬೆಣ್ಣೆ | ೦-೧-೬ |
| ಕಾಫೀ ೧॥ ಕಪ್ | ೦-೨-೬ |
| ಸಕ್ಕರೆ | ೦-೦-೬ |
| ಒಟ್ಟು | ೦ ೭-೬ |

ಇದನ್ನು ಓದಿ ಶಮಶೇರನೆಂದುಕೊಂಡ "ಅವರಿಗೆ ಆತಿಥ್ಯ ಪಡಯುವ ಅಧಿಕಾರವೂ ಇಲ್ಲವೇ?"

ಶಮಶೇರನಿಗೆ ಕಂಠವು ಬಿಗಿದುಬಂದಿತು ಮನದಲ್ಲಿಯೆ ಎಂದ "ಕರ್ನಲ್, ನಿಮಗಿಂತಲೂ ಕಡಮೆ ಸತ್ಯವಾದಿಯಿಲ್ಲವೆಂಬುದನ್ನು ಎಂದು ತಿಳಿದುಕೊಳ್ಳುವಿರಿ? ಸಮಾಜಕ್ಕಾಗಿ ನಾನು ನಿಮಗಿಂತಲೂ ಕಡಮೆ ಆವಶ್ಯಕನಾಗಿಲ್ಲ, ಕಡಮೆ ಉಪಯೋಗಿಯಾಗಿಲ್ಲ"

ಅರ್ಧ ಗಂಟೆಯೊಳಗಾಗಿ ತನ್ನ ಜನಗಳನ್ನೆಲ್ಲ ಎಬ್ಬಿಸಿ "ಬೇಗನೆ ಇಲ್ಲಿಂದ ಹೊರಡಿರಿ" ಎಂದು ಅಪ್ಪಣೆಯನ್ನಿತ್ತ ಶಮಶೇರ

ಬೆಳಗು ಆಗುವುದರೊಳಗಾಗಿ ಆ ಗುಡಿಸಲು ನಿರ್ಜನವಾಯಿತು ಶಾಂತತೆಯ ಬೀಡಾಯಿತು

ಸುಮಾರು ಹನ್ನೊಂದು ಗಂಟೆಗೆ ಪೋಲೀಸರು ಬಂದು ಅದನ್ನು ಮುತ್ತಿದರು ಪೋಲೀಸರೊಡನೆ ಸ್ವತಃ ಕರ್ನಲ್ ಗ್ರೇಟ್‌ಹಾರ್ಟರೇ ಬಂದಿದ್ದರು ಆದರೇನು? ಅಲ್ಲ ಯಾರೂ ಇರಲಿಲ್ಲ ಗುಡ್ಡದಷ್ಟು ಆಶೆಯಿರುವಲ್ಲ ಒಂದು ಇಲಿಯೂ ಇರಲಿಲ್ಲ. ಇದ್ದುಬಿದ್ದುದನ್ನು ಕಿತ್ತು-ಹಾಕಿದರು ಏನೂ ದೊರೆಯಲಿಲ್ಲ.

ಆದರೆ ಆ ಏಳೂವರೆ ಆಣೆಯ ಚೀಟಿಯೊಂದು ಸಿಕ್ಕಿತು. ಆ ಚೀಟಿಯನ್ನು ತೆಗೆದುಕೊಂಡು ಕರ್ನಲ್ ಸಾಹೇಬರು ಯಾರಿಗಾದರೂ

ಕೇಳಿಸೀತೆಂಬುದನ್ನು ಲಕ್ಷ್ಯಕ್ಕೆ ತಾರದೆ ನುಡಿದರು "ಶಮಶೇರ ಬಂಟನಷ್ಟೇ ಅಲ್ಲ, ಜಾಣನೂ ಇದ್ದಾನೆ"

*   *   *

ಕರ್ನಲ್ ಗ್ರೇಟ್ ಹಾರ್ಟರ ವಿರುದ್ಧ ದೂರುಹೇಳಲಾಗಿದೆ ಆದುದರಿಂದ ಅವರಿಗೊಂದು ಕಾಗದ ಬಂದಿದೆ ಈವೊತ್ತು ಇದರಲ್ಲಿ ಬರೆದುದು ಇಷ್ಟು "ಕರ್ತವ್ಯದಿಂದ ಚ್ಯುತವಾಗುವುದು ನಿಮ್ಮಂಥ-ವರಿಗೆ ಶೋಭಿಸುವುದಿಲ್ಲವಷ್ಟೆ ಅಲ್ಲ, ಅದು ಅತ್ಯಂತ ಖೇದಕರವಾದ ಸಂಗತಿಯಿದೆ ಚುರುಕು ಬುದ್ಧಿಯವರೂ ಜಾಣರೂ ಬಲಿಷ್ಠರೂ ಆದ ನೀವು ಇದುವರೆಗೆ ಶಮಶೇರನನ್ನು ಸೆರೆಹಿಡಿಯದೆ ಇರುವು-ದೆಂದರೇನು? ನೀವು ಇದರಲ್ಲಿ ಅಷ್ಟು ಕರ್ತೂರವಾಗಿ ವರ್ತಿಸು-ತ್ತಿಲ್ಲವೆಂದು ತಿಳಿದುಬಂದಿದೆ ಶಮಶೇರನು ಸಮಾಜಕ್ಕೆ ಎಷ್ಟು ವಿಷಪ್ರಾಯನಾಗಿದ್ದಾನೆ, ಅವನಿಂದ ಸಮಾಜದಲ್ಲಿ ಎಷ್ಟು ವಿಷವು ಹರಡುತ್ತಿದೆ, ಈ ರೀತಿ ಅವನು ಸ್ವಚ್ಛಂದನಾಗಿರುವುದು ಸಮಾಜಕ್ಕೆ ಎಷ್ಟು ಘಾತಕವಾಗಿದೆ ಎಂಬುದನ್ನೆಲ್ಲ ತಮಗೆ ತಿಳಿಸಿ ಹೇಳುವ ಆವಶ್ಯಕತೆಯಿಲ್ಲ ಒಂದು ತಿಂಗಳಲ್ಲಿ ಶಮಶೇರನನ್ನು ಬಂಧಿಸದಿದ್ದರೆ ನಿಮಗೆ ವರ್ಗಮಾಡಲಾದೀತು"

ಸಮಾಜಶಾಸ್ತ್ರದ ಜ್ಞಾನಬಲದಿಂದ, ತರ್ಕದ ಬಲದಿಂದ, ಮೇಲಧಿಕಾರಿಗಳ ದರ್ಪದ ಕಾಗದದ ಬಲದಿಂದ ಕರ್ನಲ್ ಸಾಹೇಬರು ತಮ್ಮ ಕರ್ತವ್ಯಬುದ್ಧಿಯನ್ನು ಹೆಚ್ಚು ಜಾಗೃತ ಮಾಡಿಕೊಂಡಿದ್ದಾರೆ

ಅವರು ನಿಶ್ಚಯಿಸಿಕೊಂಡಿದ್ದಾರೇನೆಂದರೆ ಸಮಾಜದ ರಕ್ಷಣೆಯ ಹೊಣೆಯು ತಮ್ಮ ಮೇಲಿದೆ ಕಾಯಿದೆಯನ್ನು ರಕ್ಷಿಸುವ ಹೊಣೆಯೂ ತಮ್ಮ ಮೇಲಿದೆ ಕಾಯಿದೆಯನ್ನು ಬೇಕುಬೇಕಾದವರ ಕೈಯಲ್ಲಿ ಕೊಡಲಿಕ್ಕಾಗುವುದಿಲ್ಲ ಅದನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳುವ ಅಧಿಕಾರಸ್ವಾತಂತ್ರ್ಯವೂ ಯಾರಿಗೂ ಇರುವುದಿಲ್ಲ. ಬೇರೆಯವರು ಕಾಯಿದೆಯನ್ನು ಬಳಸಿಕೊಳ್ಳುವುದೆಂದರೇನು? — ಅರಾಜಕತೆ, ಅನಿಯಂತ್ರಣ, ಗೊಂದಲ ಅಲ್ಲವೆ? ಈ ಗೊಂದಲವೆಂದೂ

ಶ್ರೇಯಸ್ಕರವಾಗಲಾರದು ಸೃಷ್ಟಿಯಲ್ಲಿಯೆ ಗೊಂದಲಕ್ಕೆ—ಅರಾಜ-ಕತೆಗೆ— ಎಡೆಯಿಲ್ಲ ಅಲ್ಲಿಯೂ ನಿಯಮವು ಆಳುತ್ತಿದೆ. ಶಮಶೇರನು ಬಂಟನಾಗಿದ್ದರೇನು ? ಅವನಿಗೆ ಅವಶ್ಯವಾಗಿ ಗಲ್ಲಾಗಬೇಕು

ಗುಪ್ತಚಾರನು ಸುದ್ದಿಯನ್ನು ತಂದಿದ್ದಾನೆ ಕರ್ನಲ್ ಗ್ರೇಟ್ ಹಾರ್ಟ್‌ರು ತಮ್ಮ ಆರಿಸಿದ ೧೫ ಸಿಪಾಯರೊಂದಿಗೆ ಹೋಗಿ ಆ ಮನೆಯನ್ನು ಮುತ್ತುವರು ಯಾರಿಗೂ ತಿಳಿಯದಂತೆ ಅವರು ಸ್ವತಃ ಹಿಂದುಸ್ಥಾನಿ ವೇಷಭೂಷಣಗಳಲ್ಲಿ—ಹೋಗುವರು ಅವರ ಸಿಪಾಯರೆಲ್ಲರೂ ಒಕ್ಕಲಿಗರ ವೇಷದಲ್ಲಿರುವರು

*　　　*　　　*

ಇವೊತ್ತು ಶಮಶೇರ ತನ್ನ ಒಬ್ಬ ತಾಯಿಯ ಮನೆಗೆ ಬಂದಿದ್ದಾನೆ ಅವನಿಗೆ ಅವನ ತಾಯಿಯಿಲ್ಲ, ತಂದೆಯಿಲ್ಲ ಅವನು ಚಿಕ್ಕವನಿರುವಾಗ ಅವನ ತಂದೆತಾಯಿಗಳು ಅವನನ್ನು ಬಿಟ್ಟು ಅದೆಲ್ಲಿಗೆ ಹೋದರೊ ಗೊತ್ತಿಲ್ಲ ಇಬ್ಬರೂ ಕೂಡಿಕೊಂಡು ಹೋಗಲಿಲ್ಲ. ಬೇರೆಬೇರೆ-ಯಾಗಿ ಹೋದರು ಅವರು ದೀನರಾಗಿದ್ದರು. ತಮ್ಮ ಊರಲ್ಲಿ ಉಪಜೀವನ ಸಾಗಿಸುವಂತಹ ಉದ್ಯೋಗವಾವುದೂ ದೊರೆಯ-ಲಿಲ್ಲ ಆದುದರಿಂದ ತಮ್ಮ ಭಾಗ್ಯಶೋಧನೆಗೆಂದು ಹೊರಟು-ಹೋದರು ತಮ್ಮ ಭಾಗ್ಯಶೋಧನೆಗಾಗಿಯೆ ಇಬ್ಬರೂ ಒಬ್ಬರ-ನ್ನೊಬ್ಬರು ಅಗಲಬೇಕಾಯಿತು ಆ ಮೇಲೆ ಅವರು ಒಂದೆಡೆ ಸೇರಲಿಲ್ಲ ಬಾಲಕ ಮೋಹನನು ಕೆಲವು ದಿನಗಳ ವರೆಗೆ ತನ್ನ ತಾಯಿಯ ಬಳಿಯಲ್ಲಿಯೆ ಇದ್ದ. ಒಮ್ಮೆ ಅವಳಿಗೆ ಸತತವಾಗಿ ಮೂರು ದಿನ ಹೊಟ್ಟೆಗೆ ಸಿಕ್ಕದೆ ಹೋದುದರಿಂದ, ತನ್ನ ತೊಡೆಯ ಮೇಲೆ ಮಗುವು ಸುರಕ್ಷಿತವಾಗಿರದಿದ್ದರೂ ಪರಮಾತ್ಮನ ತೊಡೆಯ ಮೇಲಾದರೂ ಇರಲೆಂದು, ಧೈರ್ಯವನ್ನು ತಂದುಕೊಂಡು ಮಲಗಿದ ಮೋಹನನನ್ನು ಅರಣ್ಯದಲ್ಲಿ ಬಿಟ್ಟು ಹೊರಟು ಹೋದಳು. ಅದೇ ಅರಣ್ಯಕ್ಕೆ ಕುಳ್ಳು-ಕಟ್ಟಿಗೆ ತರಲು ಹೋದ ಒಬ್ಬ ತಾಯಿ, ಎಚ್ಚತ್ತು ಅಳುತ್ತಿದ್ದ ಮೋಹನನನ್ನು ತನ್ನ ಮನೆಗೆ ತಂದು ಜೋಪಾನ-ಮಾಡಿದಳು. ಈ ತಾಯಿಯ ಮನೆಗೇ ಇಂದು ಶಮಶೇರ ಬಂದಿದ್ದಾನೆ.

ತಂದೆ, ತಾಯಿ, ಮಗ—ಮೂವರು ಈವೊತ್ತು ಜೀವಿಸಿರಬಹುದು ಎಂಬುದನ್ನು ಯಾರು ಬಲ್ಲರು? ಆದರೆ ಎಲ್ಲಿ? ಅದೆಷ್ಟು ದೂರದೂರದಲ್ಲಿ? ಒಬ್ಬರದು ಒಬ್ಬರಿಗೆ ಗೊತ್ತಿಲ್ಲ

ಮೂವರೂ ಒಂದೇ ರಕ್ತ, ಒಂದೆ ಪ್ರಾಣ, ಒಂದೇ ಅಸ್ತಿತ್ವದಿಂದ ಬಂಧಿತರಾದ ಪ್ರಾಣಿಗಳು, ಆದರೆ ಈ ಮೂವರ ಮಧ್ಯದಲ್ಲೂ ಭಾಗ್ಯದ ಎಂತಹ ವಿಷಮಯವಾದ ಮಹಾಸಾಗರಗಳಿವೆ! ಮೂವರೂ ಜೀವಿಸಿರುವರು, ಆದರೆ ಒಬ್ಬರಿಗೊಬ್ಬರು ಸತ್ತಂತಾಗಿ ಅಯ್ಯೊ ಬಡತನವೆ, ಅಯ್ಯೋ ದಯವೆ, ಅಯ್ಯೋ ದೇವರೆ !

ತನ್ನ ಮೇಲೆ ವಾತ್ಸಲ್ಯದ ಮಳೆಗರೆದು ತನ್ನ ಸರ್ವಸ್ವವನ್ನೂ ಕೊಟ್ಟು ಇಷ್ಟು ದೊಡ್ಡವನನ್ನಾಗಿ ಮಾಡಿದ ತಾಯಿಯ ಮನೆಗೆ, ತನ್ನ ಸಂಪೂರ್ಣ ಭಕ್ತಿಯನ್ನೂ ಸೇವೆಯನ್ನೂ ನೀಡಿ ತಾಯಿಯೆಂದು ಬಗೆದುಕೊಂಡವಳ ಮನೆಗೆ ಶಮಶೇರ ಬಂದಿದ್ದಾನೆ ತಾಯಿಯು ಮುಪ್ಪಿನಿಂದ ಅತ್ಯಂತ ಜರ್ಜರಳಾಗಿದ್ದಾಳೆ ಇತ್ತಿತ್ತಲಾಗಿ ಅದೆಷ್ಟೋ ದಿನಗಳಿಂದ ಶಮಶೇರನಿಗೆ ಈ ತಾಯಿಯ ಕಡೆಗೆ ಗಮನಕೊಡಲಾಗಿರಲಿಲ್ಲ ಅವನ ವ್ಯವಸಾಯವೆ ಅಂತಹದು, ಅಥವಾ ಅವನ ಹೆಸರೇ ಹಾಗಿದೆ ಎನ್ನಿರಿ ಎಲ್ಲ ಸಂಕಟಗಳನ್ನೂ ದುಃಖಗಳನ್ನೂ ಎದುರಿಸಲಿಕ್ಕೆ ಸಿದ್ಧನಾಗಿಯೆ — ಕಟಿಬದ್ಧನಾಗಿಯೆ ಇವೊತ್ತು ಇಲ್ಲಿಗೆ ಬಂದಿದ್ದಾನೆ ಈ ತಾಯಿ ಇನ್ನು ಬಹು ದಿವಸ ಬದುಕಲಾರಳು ತಾನೂ ಇನ್ನು ಬಹು ದಿವಸ ಬದುಕಲಾರನೆಂದು ಶಮಶೇರನೂ ನಿಶ್ಚಯಿಸಿಕೊಂಡಿದ್ದಾನೆ ಇಲ್ಲಿಗೆ ಬರುವಾಗ ತನಗೇ ತಾನು ಹೇಳಿಕೊಂಡಿದ್ದ "ಜೀವನದ ಮೋಹ! ಛಿ ಶಮಶೇರ! ನೀನು ಇಷ್ಟು ಕೀಳನೆ? ನೀನೆ ಹೇಳಿದ್ದೆಯಲ್ಲವೆ ನೀನು ಜಗತ್ತಿನ ಅತಿಥಿಯಾಗಿರಬೇಕಾಗುವುದೆಂದು ಮೂಟೆಕಟ್ಟಿಕೊಂಡು ಇಲ್ಲಿಂದ ಹೊರಡುವ ಸಮಯ ಯಾವಾಗ ಬಂದೀತೆಂಬುದನ್ನು ಹೇಳಲಿಕ್ಕಾಗುತ್ತದೆಯೆ?"

ಆದುದರಿಂದ ಶಮಶೇರನು ಇವೊತ್ತು ನಿಶ್ಚಿಂತನಾಗಿ ತಾಯಿಯ ಸೇವೆಮಾಡಲು ಬಂದಿದ್ದಾನೆ

ಶಮಶೇರನ ಸುದ್ದಿಯೇ ಬಹಳ ದಿನಗಳಿಂದ ಇಲ್ಲದುದರಿಂದ ಅವನ ತಾಯಿ ಅವನ ಮೇಲೆ ರೇಗಿದ್ದಳು. ಅವನು ಬಂದಕೂಡಲೆ ಅವನ್ನು ಇದನ್ನು ಹೇಳಿ ಚೆನ್ನಾಗಿ ಬಯ್ದುಬಿಡಬೇಕೆಂದು ಯೋಚಿಸಿದ್ದಳು. ಆದರೆ ಶಮಶೇರನು ಬರುತ್ತಲೆ ಕಂಠವು ಬಿಗಿದುಬಂದಿದ್ದರಿಂದ ಗಡಗಾದ ದನಿಯಲ್ಲಿ "ಅಮ್ಮಾ, ಹೇಗಿರುವೆಯಮ್ಮಾ?" ಎಂದ.

ಈ ನುಡಿಗಳು ಕಿವಿಗೆ ಬೀಳುತ್ತಲೆ ಅವಳು ರೇಗಬೇಕೆಂದು ಯೋಚಿಸಿದುದನ್ನು ಮರೆತು ಗದ್ಗದಳಾಗಿ ಕೇಳಿದಳು "ಎಲ್ಲಿದ್ದೆಯೋ?"

ಆ ಹಾಸ್ಯದ ಆ ಪ್ರೀತಿಯ ತುಷಾರಗಳನ್ನು ತೂರುತ್ತಿದ್ದ ತಾಯಿಯು ದಿನ ದಿನಕ್ಕೆ ಕ್ಷೀಣಳಾಗುತ್ತಿದ್ದಾಳೆಂಬುದನ್ನು ಶಮಶೇರನು ಅಲ್ಪಾವಧಿಯಲ್ಲಿಯೇ ಅರಿತುಕೊಂಡ. ಅವನು ಇನ್ನಿಷ್ಟು ಪ್ರೀತಿಯಿಂದ ಸಂಲಗ್ನಭಾವದಿಂದ ತಾಯಿಯ ಸೇವೆಯನ್ನು ಮಾಡತೊಡಗಿದ.

ರಾತ್ರಿ ಎರಡೆರಡು ಗಂಟೆಯ ವರೆಗೆ ತಾಯಿಯ ಸೇವೆ ಮಾಡುತ್ತಿದ್ದ. ಕಾಲು ಹಿಚುಕುತ್ತಿದ್ದ. ಕತೆ ಹೇಳುತ್ತಿದ್ದ, ಕತೆ ಕೇಳುತ್ತಿದ್ದ. ಕತೆ ಹೇಳುವಷ್ಟೇ ಹೌಸು ಕತೆ ಕೇಳಲಿಕ್ಕೂ ಇದ್ದಿತು ಆವಳಿಗೆ. ಇದಕ್ಕೂ ಹೆಚ್ಚಿನ ಭಾಗ್ಯ ಶಮಶೇರನಿಗೇನು ಬೇಕಾಗಿದ್ದಿತು?

ರಾತ್ರಿ ಹನ್ನೆರಡು ಗಂಟೆಯಾಗಿರಬಹುದು. ತಾಯಿಗೆ ನಿದ್ರೆ ಬರುತ್ತಿರಲಿಲ್ಲ. ಕಾಲ ಬಳಿ ಕುಳಿತು ಶಮಶೇರ ಅವಳ ಅಂಗಾಲಿಗೆ ಎಣ್ಣೆ ಹಚ್ಚಿ ತಿಕ್ಕುತ್ತಿದ್ದ. ಅವನು ಹೇಳಲಾರಂಭಿಸಿದ.

"ಅಮ್ಮಾ, ಕೇಳು. ಮಲಗೀ ಮತ್ತೆ! ನೀನು ಮಲಗಿಬಿಡಬೇಕು, ನಾನು ಹೇಳುತ್ತಲೇ ಹೋಗಬೇಕು ಹೀಗಾದೀತು ನೋಡು."

ಶಮಶೇರನು ಒಂದು ಕತೆಯನು ಹೇಳತೊಡಗಿದ "ಒಬ್ಬ ರಾಜಾ ಇದ್ದ. ಇವನಿಗೆ ಏಳು ಮಂದಿ ಮಕ್ಕಳು. ಎಲ್ಲಕ್ಕೂ ಚಿಕ್ಕವ ತನ್ನ ತಾಯಿಯನ್ನು ಹೆಚ್ಚು ಪ್ರೀತಿಸುತ್ತಿದ್ದ, ರಾಜನನ್ನು ಪ್ರೀತಿಸುತ್ತಿದ್ದಿಲ್ಲ. ರಾಜನು ಸಿಟ್ಟಾಗಿ ಅವನನ್ನು ರಾಜ್ಯದಿಂದ ಹೊರಕ್ಕೆ ತಳ್ಳಿದ. ರಾಣಿಗೆ ಬಹಳ ಬೇಜಾರು ಬಂದಿತು. ಮನದಲ್ಲಿ ನೆಮ್ಮದಿಯೆ ಇರಲಿಲ್ಲ. ಯಾವ ಕೆಲಸದಲ್ಲಿಯೂ ಅವಳ ಮನಸ್ಸು

ಕೊಡಗುತ್ತಿರಲಿಲ್ಲ ಕೊನೆಗೆ ಅವಳು ಅರಣ್ಯಕ್ಕೆ ಹೋಗಿಬಿಟ್ಟಳು ಅಲ್ಲಿ ಅವನಿಗೆ ತನ್ನ ಮಗ ಸಿಕ್ಕ ಹಿಡಿಸಲಾರದಷ್ಟು ಹರ್ಷವಾಯಿತು ಅವನಿಗೆ ಈಗ ಮಗನನ್ನು ಬಿಟ್ಟು ಅವಳು ಇರುತ್ತಿರಲಿಲ್ಲ ಮಗನನ್ನು ಎಲ್ಲಿಗೂ ಹೋಗಗೊಡುತ್ತಿರಲಿಲ್ಲ ತಾನೇ ಎಲ್ಲವನ್ನೂ ಮಾಡಿ ಅವನಿಗೆ ಉಣಿಸುತ್ತಿದ್ದಳು ಎಲ್ಲಾದರೂ ಯಾರಾದರೂ ಬಂದು ಮಗನನ್ನು ಎತ್ತಿಕೊಂಡು ಹೋಗಿಬಿಟ್ಟರೆ? ಎಂಬ ಭಯದಿಂದ ಅವಳು ಮಗನನ್ನು ಎಲ್ಲಿಗೂ ಬಿಡುತ್ತಿರಲಿಲ್ಲ ಒಂದು ದಿವಸ ರಾತ್ರಿ ಏನಾಯಿತೆಂದರೆ—ರಾತ್ರಿ ಬಹಳವಾಗಿದ್ದಿತು, ಒಬ್ಬ ದೈತ್ಯ ಎದುರಿಗೆ ಬಂದು ನಿಂತ ಅವನನ್ನು ಕಂಡರೆ ಹೆದರಿಕೆಯಾಗುತ್ತಿದ್ದಿತು ಭಯಂಕರವಾದ ಮುಖ, ಕೆಂಪಗಾದ ಕಣ್ಣುಗಳು "

ತಾಯಿ ಚಿಟ್ಟನೆ ಚೀರಿ ಮೂರ್ಛಿತಳಾಗಿ ಬಿದ್ದುಬಿಟ್ಟಳು

"ಅಮ್ಮಾ! ಅಮ್ಮಾ!!" ಎಂದು ಕೂಗಿದ ಶಮಶೇರ

ಯಾರೋ ಕೇಳಿದರು "ಶಮಶೇರ, ಈಗ ನಿನ್ನನ್ನು ಸೆರೆ ಹಿಡಿದರೇನಾಗುವುದು?"

ಶಮಶೇರ ಬಾಗಿ ನೋಡಿದ ಕರ್ನಲ್ ಗ್ರೇಟ್ ಹಾರ್ಟರು ಬಂದಿದ್ದರು ಅವನು ಬಹಳ ದೈನ್ಯದಿಂದ ಎಂದ "ಇವಳು ಸತ್ತು-ಹೋಗುವಳು"

"ದಯೆ ತೋರಿಸಬೇಕೇನು?"

"ನನಗಾಗಿ ಅಲ್ಲ"

"ಇವಳಾರು?"

"ಮಗುವಿಲ್ಲದ ತಾಯಿಯೊಬ್ಬಳು. ನನ್ನ ತಾಯಿ"

"ಓಡಿಹೋಗಲು ಪ್ರಯತ್ನಿಸುವುದಿಲ್ಲವಷ್ಟೆ?"

"ತಾಯಿಯನ್ನು ಬಿಟ್ಟು ಎಲ್ಲಿಗೂ ಓಡಿಹೋಗುವುದಿಲ್ಲ."

"ಒಳ್ಳೇದು, ನಿನ್ನ ಪಿಸ್ತೂಲು ಕೊಡು ನೀನು ರಾಕ್ಷಸ"

ಶಮಶೇರ ತನ್ನ ಪಿಸ್ತೂಲು ಕೊಟ್ಟುಬಿಟ್ಟ

"ಸರಿ, ನಾನು ಹೋಗುತ್ತೇನೆ ಇಗೋ, ತೆಗೆದುಕೊ ಇದನ್ನು ಇವಳ ತಲೆಗೆ ತಿಕ್ಕು ಇದನ್ನು, ಎಂದರೆ ಮೂರ್ಛೆ ದೂರವಾಗುವುದು ಈ ಬಾಟ್ಲಿಯಲ್ಲಿ ಟಾನಿಕ್ ಇದೆ, ಅವಳಿಗೆ ದಿನಾಲು ಹಾಲಿನೊಡನೆ ಕೊಡು, ಎಂದರೆ ಮೈಯಲ್ಲಿ ಶಕ್ತಿ ಬರುವುದು ಹೋಗುತ್ತೇನೆ" ಎಂದರು ಕರ್ನಲ್ ಸಾಹೇಬರು

ಹೊಂದರು—ಆದರ ಏಕೊ ಮತ್ತೆ ಹಿಂತಿರುಗಿ ಬಂದರು "ತಾಯಿಯ ಸೇವೆಯನ್ನು ಮುಗಿಸಿ ನನ್ನ ವಶವಾಗಿ ಬಿಡಬೇಕು ಕಂಡೆಯಾ ವಚನ ಕೊಡು ನಾನು ನಿನ್ನನ್ನು ನಂಬುತ್ತೇನೆ" ಎಂದರು

"ನನ್ನ ಪೂಜ್ಯಿತ ತಾಯಿಯ ಪಾದಗಳ ಸಾನ್ನಿಧ್ಯದಲ್ಲಿ ತಲೆಯಿಟ್ಟು ವಚನಕೊಡುತ್ತೇನೆ"

"ತಾಯಿಯ ಶುಶ್ರೂಷ ಚೆನ್ನಾಗಿ ಮಾಡು ಕಂಡೆಯಾ!"

ಕರ್ನಲ್ ಸಾಹೇಬರು ಹೊರಟು ಹೋದರು

ಔಷಧದಿಂದ ತಾಯಿಗೆ ಎಚ್ಚರ ಬಂದಿತು ಕಣ್ಣುಗಳನ್ನು ಹಿಗ್ಗಿಸಿ ಮಗೂ ಮಗೂ! ಅವನೆಲ್ಲಿಗ ಹೋದ?" ಎಂದು ಕೇಳಿದಳು

"ಯಾರಮ್ಮಾ?"

"ಅವನೇ, ನಿನ್ನ ಕತ್ತೆಯೊಳಗಿನ ದೈತ್ಯ! ಭಯಂಕರವಾದ ಮುಖ! ಕೆಂಪುಕಂಪಾದ ಕಣ್ಣುಗಳು! ಅವನನ್ನು ನೋಡಿ ನಾನು ಹೆದರಿದೆ ಮಗೂ ಅವನು ನಿನ್ನನ್ನು ಕರೆದೊಯ್ಯಲು ಬಂದಿರಲಿಲ್ಲವೆ?"

"ಅಮ್ಮಾ, ನಾನು ಕತೆ ಮರೆತು ಬಿಟ್ಟಿದ್ದೆ ಅವನು ದೈತ್ಯನಿಲ್ಲ, ದೇವನಿದ್ದ" ಎಂದ ಶಮಶೇರ

* * *

ಕರ್ನಲ್ ಸಾಹೇಬರು ಮನೆಯಿಂದ ಹೊರಗೆ ಬಂದು ತಮ್ಮ ಜನರನ್ನೆಲ್ಲ ಒಟ್ಟುಗೂಡಿಸಿದರು "ಇಲ್ಲಿ ಯಾವ ಪರೋಡೆಯೋನೂ ಇಲ್ಲ ನಡೆಯಿರಿ" ಎಂದರು

ಸಿಪಾಯರು ರಾತ್ರಿಯನ್ನು ಸುಖವಾಗಿ ಕಳೆದಿದ್ದರು ಕರ್ನಲ್ ಸಾಹೇಬರೊಡನೆ ಹೊರಡಲು ಸಿದ್ಧರಾದರು ಇದೇ ಕಾಲದಲ್ಲ ಕರ್ಕಶ ಧ್ವನಿಯು ಕೇಳಬಂದಿತು "ಗೇಟ್ ಸಾಹೇಬ!"

ಕರ್ನಲ್ ಸಾಹೇಬರು ಬಾಗಿ ನೋಡಿದರು ಸರ್ ಸ್ಯಾವೇಜ್* ಸಾಹೇಬರು ಬಂದಿದ್ದರು

ಕರ್ನಲ್ ಸಾಹೇಬರು "ಓಹೊ, ತಾವೆ!" ಎಂದರು

"ಹೌದು ನಾನೇ"

"ಅಪ್ಪಣೆ ?"

"ಶಮಶೇರ ಮನೆಯಲ್ಲಿ ಇಲ್ಲಿವನು ?"

"ಒಳಗೆ ನನಗಾರೂ ದರೋಡೆಖೋರರು ಸಿಕ್ಕಲಿಲ್ಲ"

"ಸುಳ್ಳಾಡುತ್ತೀರಾ ?"

"ನಾನು ಸುಳ್ಳಾಡುತ್ತಿರುವುದಿಲ್ಲ"

"ನಡೆಯಿರಿ ಹಾಗಾದರೆ ನನ್ನ ಸಂಗಡ ಒಳಗೆ"

ಕರ್ನಲ್ ಸಾಹೇಬರು ಸರ್ ಸ್ಯಾವೇಜ್ ಸಾಹೇಬರ ಸಂಗಡ ಒಳಗೆ ಹೋದರು

ಮತ್ತಿಷ್ಟು ಪ್ರೇಮದಿಂದ, ಉತ್ಸಾಹದಿಂದ, ಯೋಚನೆಯಿಂದ ತಾಯಿಯ ಕಾಲು ತಿಕ್ಕುತ್ತ ಅದೇ ಕತೆಯನ್ನು ಮುಗಿಸುತ್ತಿದ್ದ ಅವನನ್ನು ನೋಡುತ್ತಲೆ ಸ್ಯಾವೇಜ್ ಸಾಹೇಬರೆಂದರು "ಗ್ರೇಟ್ ಹಾರ್ಟ್, ಯೂ ಟ್ರೇಟರ್‡, ಇವನು ಶಮಶೇರನಲ್ಲದೆ ಮತ್ತಾರು ?"

ಇವನು ನನಗೆ ಶಮಶೇರನೆಂದು ಗೊತ್ತಿಲ್ಲ ಇವನೊಬ್ಬ ತನ್ನ ತಾಯಿಯ ಮಗನಿರುವನೆಂದೂ ದರೋಡೆಖೋರನಿರಲಿಕ್ಕಿಲ್ಲವೆಂದೂ ಭಾವಿಸಿದೆ.

ತಾಯಿಯು ಇವರಿಬ್ಬರ ಧ್ವನಿಯನ್ನು ಕೇಳಿ, ಆಕೃತಿಗಳನ್ನು ನೋಡಿ ಬೆಚ್ಚಿದಳು ಬಾಯಿಂದ ಶಬ್ದಗಳೇ ಹೊರಡದಾದುವು ಮೂಕಳಾಗಿ ಮೂಢಳಾಗಿ ಇವರನ್ನು ನೋಡುತ್ತಿದ್ದಳು ಸ್ಯಾವೇಜ್ ಸಾಹೇಬರ ಉರಿಮೋರೆಯನ್ನು ನೋಡಿ ನಡುಗಿದಳು ಒಮ್ಮೆಲೆ

---

* ಸ್ಯಾವೇಜ್ ಎಂದರೆ ಕಾಡು, ಸಂಸ್ಕೃತಿಹೀನ

‡ ಮೋಸಗಾರ

ಹಾಸಿಗೆಯ ಮೇಲೆ ಎದ್ದು ಕುಳಿತವಳೆ ಶಮಶೇರನನ್ನು ಬಿಗಿಯಾಗಿ ಅಪ್ಪಿಕೊಂಡು "ಮಗೂ!" ಎಂದಳು

ಸ್ಯಾವೇಜರು ರಿವಾಲ್ವರಿನ ಗುರಿಯನ್ನು ಅವನ ಕಡೆಗೆ ಹಿಡಿದು "ಶಮಶೇರ, ಅವಳನ್ನು ಬಿಟ್ಟು ಬೇರೆಯಾಗು ಆ ಮುದುಕಿಯನ್ನು ನಾನು ಕೊಲ್ಲಲಿಚ್ಛಿಸುವುದಿಲ್ಲ" ಎಂದರು

ಶಮಶೇರನೆಂದ "ಸ್ವಲ್ಪ ತಾಳಿರಿ!"

ತಾಯಿಯು ಶಮಶೇರನನ್ನು ತನ್ನ ನೆರಗನಿಂದ ಮುಚ್ಚಿಕೊಳ್ಳಲು ಯತ್ನಿಸುತ್ತಿದ್ದಳು

ಕರ್ನಲ—Sir, he would surrender

(ಸರ್, ಅವನು ವಶನಾಗುವ)

ಸ್ಯಾವೇಜ್—You devils both! Get away you traitor (ನೀವಿಬ್ಬರೂ ರಾಕ್ಷಸರು ದೂರ ಸರಿ ಇಲ್ಲಿಂದ, ಕಪಟಿ)

ಕರ್ನಲ್—Sir, mind, you don't kill him

(ಸರ್, ಹುಷಾರಿ, ಅವನನ್ನು ಕೊಲ್ಲಬೇಡಿರಿ)

ಸ್ಯಾವೇಜ್—You infidel! Away with you and your pity (ಕೃತಘ್ನ, ದೂರ ಸರಿ, ನಿನ್ನ ದಯೆ ತೆಗೆದುಕೊಂಡು ದೂರ ಹೋಗು)

ಕರ್ನಲ್ ಸಾಹೇಬರು ಸ್ಯಾವೇಜರನ್ನು ತಡೆಯಲಿಕ್ಕೆಂದು ಮುಂದುವರಿದಿದ್ದರೂ ಇಲ್ಲವೂ ರಿವಾಲ್ವರಿನ ಕುದುರೆಯು ಜಗ್ಗಿತು ಬೆಂಕಿಯ ಜ್ವಾಲೆಯು ಹೊರಟಿತು ಆದರೇನು? ಗುರಿಯು ಸ್ವಲ್ಪ ಸೂಟ್ಟಾಗಿದ್ದಿತು ಗುಂಡು ಶಮಶೇರನಿಗೆ ತಾಕದೆ ಆ ಜರ್ಜರಿತ ತಾಯಿಯ ಪಕ್ಕೆಲುಬುಗಳನ್ನು ಪುಡಿಮಾಡುತ್ತ ಪಾರಾಗಿ ಹೋಯಿತು ಕ್ಷಣದ ತೀರ ಚಿಕ್ಕಭಾಗದ ವರೆಗೆ ಒದ್ದಾಡಿ, ಶಮಶೇರನ ಮುಟ್ಟಿಗಿದ್ದ ಆ ಒಬ್ಬ ಕ್ಷೀಣಕಾಯಳಾದ ತಾಯಿಯೂ ತಣ್ಣಗಾದಳು. ಶಮಶೇರನು ವೇದನೆಯಿಂದ ಕೂಗತೊಡಗಿದ "ಅಮ್ಮಾ! ಅಮ್ಮಾ!!" ಕೊಂಚ ಹೊತ್ತಿನ ಮೇಲೆ ಸ್ವಲ್ಪ ಸಮಾಧಾನ ಹೊಂದಿದವನಾಗಿ ಎಂದ "ದುಷ್ಟ, ಇದನ್ನೇನು ಮಾಡಿಬಿಟ್ಟಿ?"

ಸ್ಯಾವೇಜರಿಗೆ ದುಃಖ ಪ್ರಕಟಿಸಲು ಬಿಡುವೆಲ್ಲಿದ್ದಿತು? ಶಮಶೇರನು ಬದುಕಿಕೊಂಡುದನ್ನು ನೋಡಿ ಎರಡನೆಯ ಫಾಯರದ ಸಿದ್ಧತೆ ಮಾಡಲಾರಂಭಿಸಿದ್ದರು ಆದರೂ ಸ್ವಲ್ಪ ಹಿಂಜರಿದರು. ಕರ್ನಲ್ ಸಾಹೇಬರು ದಿಙ್ಮೂಢರಾಗಿ ನಿಂತು ಶಮಶೇರನನ್ನು ನೋಡುತ್ತಿದ್ದರು

ಶಮಶೇರ ಇನ್ನಿಷ್ಟು ಸಮಾಧಾನ ಹೊಂದಿದವನಾಗಿ ಎಂದ "ಹೋಗಿರಿ, ಸಾಹೇಬರೇ ಹೋಗಿರಿ! ನನ್ನ ತಾಯಿ ನನಗಿನ್ನು ಸಿಕ್ಕಲಾರಳು ಹೋಗಿರಿ"

ಸ್ಯಾವೇಜ್— Get ready, I fire

( ತಯಾರಾಗು ಗುಂಡು ಹಾಕುವೆ )

ಶಮಶೇರ— ಹೋಗಿರಿ, ಸುಮ್ಮನೆ ನನ್ನಿಂದ ಹತ್ಯಮಾಡಿಸಿ-ಕೊಳ್ಳಬೇಡಿರಿ ಹೊರಟುಹೋಗಿರಿ

ಸ್ಯಾವೇಜ್— Talk away, dog I blow you up in a second

( ಬೊಗಳುತ್ತಿರು ನಿಮಿಷಾರ್ಧದಲ್ಲಿ ನಿನ್ನನ್ನು ಹಾರಿಸಿಬಿಡುವೆ. )

ಶಮಶೇರ—ಇದು ಮೂರನೆಯ ಸಲ ಹೇಳುತ್ತೇನೆ—ಸುಮ್ಮನೆ ಹೊರಟುಹೋಗಿರಿ

ಸ್ಯಾವೇಜ್ — Oh, it gets late Let me finish

( ತಡವಾಗುತ್ತಿದೆ ಬೇಗನೆ ನಿನ್ನನ್ನು ಮುಗಿಸಿಬಿಡುವೆ )

ಶಮಶೇರನು ತಾಯಿಯ ಬಿಸಿಬಿಸಿಯಾದ ರಕ್ತದಲ್ಲಿ ಕೈ ಎದ್ದಿ-ಕೊಂಡು ಕೆರಳಿದ ಸಿಂಹದಂತೆ ಸ್ಯಾವೇಜ್ ಸಾಹೇಬರ ಮೇಲೆ ಹಾರಿದ ರಿವಾಲ್ವರಿನ ಕುದುರೆ ಜಗ್ಗುವುದರಲ್ಲಿದ್ದಿತು, ಅಷ್ಟರಲ್ಲಿ ಸ್ಯಾವೇಜರ ಕೈಯಿಂದ ಶಮಶೇರ ರಿವಾಲ್ವರ್ ಕಸಿದುಕೊಂಡ

ಸ್ಯಾವೇಜ್— You Colonel, what the devil are you staring at ?

(ಕರ್ನಲ್, ಏನು ನೋಡುತ್ತಿದ್ದೀಯೊ !)

ಸ್ಯಾವೇಜರನ್ನು ಕೆಳಕ್ಕೆ ಕೆಡಹಿ ಅವರ ಎದೆಯ ಮೇಲೆ ಕುಳಿತು ರಿವಾಲ್ವರ್ ಅವರ ಹಣೆಗೆ ಗುರಿಯಿಟ್ಟು ಶಮಶೇರ ಎಂದ.

" ಸಾಹೇಬರೆ, ನೀವು ಸಾಯಬೇಕೆನ್ನುತ್ತಿದ್ದಿರಿ ಸಾಯಿರಿ ನನ್ನ ಜೀವನದಲ್ಲಿಯೆ ಇದು ಮೊದಲನೆಯ ಕೊಲೆಯಾಗುವುದು "

ಕರ್ನಲ್ ಸಾಹೇಬರು ಎಚ್ಚತ್ತಂತಾಗಿ " ಶಮುಶೇರ್, ಖಬರ-ದಾರ!' ಎಂದರು

ಶಮುಶೇರ ಸ್ಟ್ಯಾವೆಂಜರನ್ನು ಕೆಳಗೆ ಮೆಟ್ಟಿಯೆ ಇದ್ದ ಕರ್ನಲರ ಕಡೆಗೆ ನೋಡಿ " ಏನು ಕರ್ನಲ್ ಸಾಹೇಬರೆ? " ಎಂದ

" ಶಮುಶೇರ, ಅವರನ್ನು ಕೊಲ್ಲಬೇಡ "

" ಕರ್ನಲ್ ಸಾಹೇಬರೆ, ಇವನು ಕೊಲೆಗಡಕ ನನ್ನ ತಾಯಿ-ಯನ್ನು ಕೊಂದಿದ್ದಾನೆ "

" ಹೌದು, ನಿನ್ನ ತಾಯಿ ಹಿಂತಿರುಗಿ ಬರಲಾರಳು ಇವರನ್ನು ಕೊಂದರೂ ಬರಲಾರಳು "

" ಕರ್ನಲ್, ಇವನು ನನ್ನ ತಾಯಿಯನ್ನು ಕೊಂದಿದ್ದಾನೆ, ನನ್ನ ತಾಯಿಯನ್ನು! ಇದನ್ನು ನೀವು ಅರಿಯಲಾರಿರಾ? "

" ಶಮುಶೇರ! ನೀನು ಗಂಡಸಲ್ಲವೆ? ಕಂಬನಿಗಳನ್ನು ಒರಸಿಕೊ. ಬಿಡು ಈ ಮೋಹವನ್ನು ಏಳು, ಕೊಲೆಪಾತಕವನ್ನು ಕಟ್ಟಿಕೊಳ್ಳ-ಬೇಡ "

" ಕರ್ನಲ್, ನೀವು ಮತ್ತಿಷ್ಟು ನನ್ನನ್ನು ರೇಗಿಗೆ ಎಬ್ಬಿಸುತ್ತಿ-ರುವಿರೇಕೆ? "

" ಛೀ! ಶಮುಶೇರ! "

" ಸುಮ್ಮಗಿರಿ, ಕರ್ನಲ್ ಸಾಹೇಬರೇ ಸುಮ್ಮಗಿರಿ! ನಾನು ಇವನನ್ನು ಕೊಲ್ಲುವೆ, ಜೀವಿಸಗೊಡಲಾರೆ "

" ಶಮುಶೇರ್, ನಾನೊಂದು ಮಾತು ಹೇಳುತ್ತೇನೆ, ಕೇಳು. ಇವರಿಗೆ ಒಬ್ಬ ತಾಯಿ ಇದ್ದಾಳೆ ಅವಳು ಮನೆಯಲ್ಲಿ ತನ್ನ ಮಗ 'ಈಗ ಬರಬಹುದು ಆಗ ಬರಬಹುದು' ಎಂದು ದಾರಿಕಾಯುತ್ತಿರ-ಬಹುದು ನೀನು ಇವರನ್ನು ಕೊಂದರೆ ಇವರ ತಾಯಿಯ ಗತಿ-ಯೇನಾಗಬಹುದು ಶಮುಶೇರ? "

ಶಮಶೇರ ಸ್ವಲ್ಪ ನಿಧಾನಿಸಿದ ಅದೇನು ಎನಿಸಿತೊ “ ಅಯ್ಯೋ, ಕರ್ನಲ್ ! ” ಎಂದು ಕೂಗಿ ರಿವಾಲ್ವರನ್ನು ಒಂದು ಕಡೆ ಬಿಸಾಟಿವ ಸ್ಯಾವೇಜರನ್ನು ಬಿಟ್ಟುಬಿಟ್ಟ ತನ್ನ ಎರಡೂ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ ತಾಯಿಯ ಎದೆಯಿಂದ ಹರಿಯುತ್ತಿರುವ ಬಿಸಿಬಿಸಿಯಾದ ನೆತ್ತರಿನಲ್ಲಿ ಹೊರಳಾಡಿ ಹೊರಳಾಡಿ ಎನ್ನಲಾರಂಭಿಸಿದ “ ಅಮ್ಮಾ, ಕೇಳು ಕೇಳು ನಾನು ಇನ್ನೆಂದಿಗೂ ಯಾರನ್ನೂ ಕೊಲ್ಲುವದಿಲ್ಲ ”

*　　　　*　　　　*

ಸ್ಯಾವೇಜ್ ಸಾಹೇಬರು ಎದ್ದು ನಿಂತರು ಬಟ್ಟೆಗಳನ್ನು ಕೊಡವಿ ಸ್ವಚ್ಛಮಾಡಿಕೊಂಡರು ಈಗ ಅವರಿಗೆ ನೇರವಾಗಿ ಮನೆಗೆ ಹೋಗಬೇಕೆಂದೆನಿಸುತ್ತಿದ್ದಿತು ತನ್ನ ತಾಯಿಯಿಂದ ತನಗೇನೂ ಲಾಭವಾಗದಿದ್ದರೂ ಈವೊತ್ತು ಈ ಪ್ರಾಣರಕ್ಷಣೆಯ ಲಾಭವು ಮಾತ್ರ ಆಯಿತು ಬಹಳ ದೊಡ್ಡ ಲಾಭವಾಯಿತು ಯೋಚಿಸತೊಡಗಿದರು “ ಮನೆಗೆ ಹೋಗಿ ತಾಯಿಗೆ ಈ ಹಿಂದುಸ್ಥಾನೀ ಮನುಷ್ಯನ ಮೂರ್ಖ-ತನವನ್ನು ಬಣ್ಣಿಸುವೆ ” ಎಂದು ಹೊರಟರು ಆದರೆ ಕರ್ನಲ್ ಸಾಹೇಬರು ಅವರನ್ನು ತಡೆದು “ ಶಮಶೇರನನ್ನು ಸೆರೆಹಿಡಿಯಬೇಕು ಈಗ ಸೆರೆಹಿಡಿಯುವ ಸಮಯ ಬಂದಿದೆ ” ಎಂದರು

ಶಮಶೇರನು ಸ್ವಲ್ಪ ಶಾಂತಚಿತ್ತನಾದ ಮೇಲೆ ಕರ್ನಲ್ ಸಾಹೇಬರು ಅವನ ಬಳಿಗೆ ಹೋಗಿ “ ನಡೆ ಶಮಶೇರ, ಈಗ ನಮ್ಮ ಸಂಗಡ ನಡೆ ಈಗ ನಿನ್ನನ್ನು ಸೆರೆಹಿಡಿಯುವ ಸಮಯ ಬಂದಿದೆ ” ಎಂದರು

“ ಸಾಹೇಬರೆ, ತಾಯಿಯ ಕ್ರಿಯಾಕರ್ಮ ಮಾಡಬೇಕಾಗು-ವದು ”

“ ಶಮಶೇರ, ಜಗತ್ತಿನ ಮೋಹವನ್ನು ಬಿಟ್ಟು ಹೊರಡು ತಡ ಮಾಡಬೇಡ ”

“ ಸಾಹೇಬರೆ, . . .. ಸಾಹೇಬರೆ, ಜಾತಿ !.. . ... ಮತ್ತು ತಾವು........ ”

“ ನಾವು ಕ್ರಿಶ್ಚಿಯನ್ನರು ಮತ್ತು ನೀನು ಹಿಂದೂ, ಇಷ್ಟೇ ಅಲ್ಲವೆ? ಛೀ, ಇವರ ಮೋಹವೂ ನಿನಗಿದೆಯೆ? ಜೀವದ ಮೋಹ ಬಿಟ್ಟರೂ ಜಾತಿಯ ಮೋಹವಿದೆಯೆ! ”

“ ಸಾಹೇಬರೆ, ಇದನ್ನು ಬಿಡುವುದು ನನ್ನಿಂದಾಗದು ”

“ ಆಗದು? ನೀನು ಗಂಡುಸೆಂದು ತಿಳಿಯುತ್ತಿದ್ದೆ, ನಾನು ಹಾಗೆ ತಿಳಿಯುವುದು ತಪ್ಪಾಗುವುದೇನು? ಇಲ್ಲ, ನಾನು ನಿನ್ನನ್ನು ನಿರ್ಬಲನಾಗಗೊಡಲಾರೆ ಸಿಪಾಯರೆ! ಮೂವರೂ ಇತ್ತ ಬನ್ನಿರಿ ಇವನನ್ನು ಸೆರೆಹಿಡಿಯಿರಿ ”

ಶಮಶೇರ ತಾಯಿಯ ಪಾದಕ್ಕೆ ಹಣೆ ತಿಕ್ಕಿ, ಬಳಿಕ ತನ್ನ ಎರಡೂ ಕೈಗಳನ್ನು ಮುಂದೆ ನೀಡಿದನು ಎರಡೂ ಕೈಗಳಲ್ಲಿ ಬೇಡಿಗಳು ಬಿದ್ದುವು. ಐವರು ಸಿಪಾಯರು ಹಗ್ಗ ಹಚ್ಚಿ ಅವನನ್ನು ಬಿಗಿದು ಹಿಡಿದರು ಕೈದಿಯು ಹೊರಹೊರಟಾಗ ಒಂದು ಮೆರವಣಿಗೆಯೆ ಹೊರಟಂತೆ ಕಾಣುತ್ತಿದ್ದಿತು ಹತ್ತು ಸಿಪಾಯರು ಮುಂದೆ, ಹತ್ತು ಸಿಪಾಯರು ಹಿಂದೆ, ಐವರು ಸಿಪಾಯರು ಸಂಗಡ ಇದ್ದರು ಎಲ್ಲಕ್ಕೂ ಮುಂದೆ ಸ್ಯಾವೇಜ್ ಸಾಹೇಬರು ಕುದುರೆಯ ಮೇಲೆ ಕುಳಿತು ಸಾಗಿದ್ದರು, ಎಲ್ಲಕ್ಕೂ ಹಿಂದೆ ಕರ್ನಲ್ ಸಾಹೇಬರು ಕುದುರೆಯ ಮೇಲೆ ಕುಳಿತು ಹೊರಟಿದ್ದರು

ಕೈದಿಯು ಅಳುತ್ತಿರಲಿಲ್ಲ ಕರ್ನಲ್ ಸಾಹೇಬರೂ ಅಳುತ್ತಿರಲಿಲ್ಲ

ಸ್ಯಾವೇಜರಿಗೆ ಅಹಂಕಾರ ಬಂದಿದ್ದಿತು ಯೋಚಿಸುತ್ತಿದ್ದರು “ ಈ ವಿಜಯದ ಬಣ್ಣನೆಯನ್ನು ಹೇಗೆ ಮಾಡಬೇಕು? ಇದಕ್ಕೆ ಹೇಗೆ ಪ್ರಕಟನೆಯನ್ನು ಕೊಡಬೇಕು? ಶಮಶೇರನನ್ನು ಬಂಧಿಸುವುದು ಯಾರಿಗಾದರೂ ಸಾಧ್ಯವಿದ್ದಿತೆ? ಸಾಧ್ಯವಿದೆಯೆ? ”

* * *

ಬೆಳಗಾಗಿದೆ ಸೂರ್ಯನು ಅಷ್ಟೇ ರಕ್ತವರ್ಣನೂ ಅಷ್ಟೇ ಬಿಸಿಯೂ ಆಗಿದ್ದಾನೆ ಗಾಳಿಯೂ ಅಷ್ಟೇ ವೇಗದಿಂದ ಸುಳಿದಾಡುತ್ತಿದೆ. ಚಳಿಯೂ ಅಷ್ಟೇ ಇದೆ ಆದರೆ ಈವೊತ್ತು ರಾತ್ರಿಯು ಹೆಚ್ಚು ಹೆಚ್ಚು

ಅತ್ಯಂತ ತೋರುತ್ತದೆ ಏಕೆಂದರೆ ಭೂಮಿಯು ಪ್ರತಿದಿನಕ್ಕಿಂತಲೂ ಈವೊತ್ತು ಹೆಚ್ಚು ಹಸಿಯಾಗಿದೆ. ಮರಗಳೂ ಹೆಚ್ಚು ಕಣ್ಣೀರು ಸುರಿಸಿದ್ದುವೇನೊ

ಮೆರವಣಿಗೆಯು ಸಾಗಿದೆ.

ನದಿಯ ಸೇತುವೆಯು ಬಂದಿದ ನೀರಿಗೆ ಕೊರತೆಯಿಲ್ಲ ಬಿಸಿಲೂ ಬಲಿತಿದೆ ಇಲ್ಲಿ ಸ್ವಲ್ಪ ವಿಶ್ರಮಿಸುವುದೊಳ್ಳಿತು.

ಸ್ಯಾವೇಜರ ಸಂತೋಷಕ್ಕೆ ಪಾರವೆ ಇಲ್ಲ ಅವರು ತಮ್ಮ ಪೌರುಷವನ್ನು ಹೊಗಳಿಕೊಳ್ಳುವುದರಲ್ಲಿ ತಲ್ಲೀನರಾಗಿಬಿಟ್ಟಿದ್ದಾರೆ ಆದೇನನೊ ಗಾಳಿಯಲ್ಲಿ ಗೋಪುರ ಕಟ್ಟುತ್ತಿದ್ದಾರೆ ಕರ್ನಲ್ ಸಾಹೇಬರು ಬೇಕೆಂತಲೆ ಕೈದಿಯ ಕಡೆಗೆ ಗಮನ ಕೊಡಲಿಚ್ಛಿಸುತಿಲ್ಲ ರಕ್ಷಕರ ವಶದಲ್ಲಿ ಸುರಕ್ಷಿತನಾಗಿದ್ದಾನೆ

ಕೈದಿಗೆ ನೀರಡಿಕೆಯಾಗಿದೆ ಅವನು ನೀರು ಕುಡಿಯಬೇಕೆನ್ನುತ್ತಾನೆ ರಕ್ಷಕರ ಪರೀಕ್ಷೆಯ ಕಾಲವು ಬಂದೊದಗಿದೆ ಆದರೂ ಅವರು ತಮ್ಮ ಕರ್ತವ್ಯವನ್ನು ಜಾಗರೂಕತೆಯಿಂದ ಪಾಲಿಸುತ್ತಿದ್ದಾರೆ. ಶಮಶೇರನನ್ನು ಸೆರೆಯಲ್ಲಿ ಒಯ್ಯುವುದು ಸಾಮಾನ್ಯವಾದ ಅಧಿಕಾರವಲ್ಲವೆಂಬುದನ್ನು ಅವರು ಬಲ್ಲರು ಆದುದರಿಂದಲೆ ಅವರು ಹಗ್ಗವನ್ನು ಚೆನ್ನಾಗಿ ಬಿಗಿದು ಹಿಡಿದುಕೊಂಡಿದ್ದಾರೆ ಬೇಡಿಗಳನ್ನು ಇನ್ನೊಂದು ಸಲ ಜಗ್ಗಿ ಜಗ್ಗಿ ನೋಡಿದ್ದಾರೆ ಎಲ್ಲವೂ ಬಿಗಿಯಾಗಿವೆ ಒಂದೊಂದೆ ಹಜ್ಜೆಯನ್ನು ಮೆಲ್ಲಗೆ ಇಡುತ್ತ ಅಳೆದು ಅಳೆದು ಹಾಕುತ್ತ ಸಾಗಿದ್ದಾರೆ ೧೭ ಜನಗಳ ತೀಕ್ಷ್ಣವಾದ ಏಕಾಗ್ರವಾದ ದೃಷ್ಟಿಯಲ್ಲಿ ಶಮಶೇರನು ನೀರು ಕುಡಿಯಲು ಹೊರಟಿದ್ದಾನೆ ಸಿಪಾಯರು ಅತ್ಯಂತ ಜಾಗರೂಕತೆಯಿಂದ ಅವನನ್ನು ನದಿಯ ಕಡೆಗೆ ಒಯ್ಯುತ್ತಿದ್ದಾರೆ

ದಂಡೆಯ ಬಳಿಗೆ ಒಯ್ದರು ಕೈದಿಯು ನೀರಿನಲ್ಲಿ ಹಜ್ಜೆಯಿಟ್ಟು ನೀರು ಕುಡಿಯಲು ಬಾಗಿದ— ಆದರೆ, ಏನಾಯಿತು!

ಮುಷ್ಟಿಗಳು ಹಾಗೆಯೆ ಗಟ್ಟಿಯಾಗಿ ಬಂಧಿತವಾಗಿವೆ. ಬೇಡಿಗಳನ್ನು ಹಿಗ್ಗಿಸಿದಂತೆ ಕಾಣುವುದಿಲ್ಲ ಹದಿನೇಳು ಜನಗಳ ಕಣ್ಣುಗಳೂ ಅವನ

ಮೇಲಿವೆ ಆದರೇನು? ನೋಡುನೋಡುವಷ್ಟರಲ್ಲಿ ಮಾಟ ಮಾಡಿದಂತೆ ಬೇಡಿಗಳು ಕಳಚಿಬಿದ್ದಿವೆ ಕೈದಿಯು ನೀರಿನಲ್ಲಿ ಅದೃಶ್ಯನಾಗಿದ್ದಾನೆ!

ಕೈದಿ ಫರಾರಿಯಾದ! ಕೈದಿ ಓಡಿಹೋದ!!

'ಕೈದಿ ಓಡಿ ಹೋದ'ಎಂಬ ಗುಲ್ಲು ನಾಲ್ದೆಸೆಗಳನ್ನೂ ವ್ಯಾಪಿಸಿತು ಕೈದಿ ಓಡಿ ಹೋದ ಅದನ್ನು ಮಾಡಿರಿ, ಇದನ್ನು ಮಾಡಿರಿ, ಓಡಿರಿ, ಹಿಡಿಯಿರಿ ಎಂಬ ಸೊಲ್ಲಿನಿಂದ ಭೂಮ್ಯಾಕಾಶಗಳು ಒಂದಾದುವು ಆದರೆ ಆ ಬೆಳಗಿನಲ್ಲಿ ಆ ತಣ್ಣಗಿನ ನೀರಿನಲ್ಲಿ ಮುಳುಗುವುದು ಯಾರಿಗೂ ತೋಚಲಿಲ್ಲ ಇಷ್ಟು ವೇಳೆಯಲ್ಲಿ ಕೈದಿಯು ಅದೆಲ್ಲಿಯೊ ಹೋಗಿಬಿಟ್ಟಿದ್ದ ನೀರಿನಲ್ಲಿ ಕೈದಿಯನ್ನು ಹುಡುಕಬೇಕೆಂದು ಸಿಪಾಯಿ ಸಿದ್ಧರಾದರು ಅದೇ ಸಮಯಕ್ಕೆ ಇಷ್ಟು ಹೊತ್ತಿನ ಮೇಲೆ ನೀರಿನಲ್ಲಿ ಹುಡುಕುವುದು ವ್ಯರ್ಥವೆಂದೆನಿಸಿತು

ಈ ಗುಲ್ಲು ಎದ್ದ ಕಾಂತವ ಗುಪಷ್ಟರಲ್ಲಿ ಸ್ಯಾವೇಜ್ ಸಾಹೇಬರು ಮಾಡುತ್ತಿದ್ದ ಮನದೊಳಗಿನ ಮಂಡಿಗೆಗಳೂ ಪುಡಿಪುಡಿಯಾದುವು ಅವರ ಸಂತೋಷಗಳು ರೋಷವನ್ನು ಪರಿಣಮಿಸಿದುವು ಆ ರೋಷವು ಕರ್ನಲ್ ಸಾಹೆಬರ ಕಡೆಗೆ ಹರಿಯಿತು

"ಕರ್ನಲ್, ನೀನು ಕೈದಿಗೆ ಓಡಿಹೋಗಗೊಟ್ಟೆಯೇಕೆ?"

"ನಾನು? ಏನೂ ಇಲ್ಲ"

"ಹಾಗಾದರೆ ಅವನು ಓಡಿಹೋದುದು ಹೇಗೆ?"

"ರಾಕ್ಷಸರ ಸಹಾಯದಿಂದ ಓಡಿಹೋದನೋ ಏನೋ!"

"ರಾಕ್ಷಸ! ರಾಕ್ಷಸನೊಡನೆ ಗೆಳೆತನವಿದೆಯೆ ಅವನಿಗೆ?"

"ಇರದೆ ಏನು?"

"ಕರ್ನಲ್, ಅವನು ಮಹಾ ರಕ್ತಪಿಪಾಸು"

"ಸರ್, ಅವನು ನಿಮ್ಮನ್ನು ಕೊಂದೇತೀರುವೆನೆನ್ನುತ್ತಿದ್ದ"

"ಆಂ?"

"ಹೌದು ,ಸರ್, ನೀವು ಅವನ ತಾಯಿಯನ್ನು ಕೊಂದಿರಿ, ಸರಿಮಾಡಲಿಲ್ಲ. ಅವನು ಏನನಾದರೂ ಕೆಡುಕನ್ನು ಮಾಡಿಯೆ ಮಾಡುವನು"

“ಹಃ! ನಾವು ಅಂಜುವವೇನು’.. ಆದರೆ ಈ ಅರಣ್ಯ ಕ್ಷೇಮಕರವಾದುದಲ್ಲ. ನಾವು ಇಲ್ಲಿಂದ ಬೇಗನೆ ಹೊರಟುಹೋಗಬೇಕು ”

ವಿಶ್ರಾಂತಿಯು ಅದೆತ್ತೊ ಹೊರಟುಹೋಯಿತು ಸ್ಯಾವೇಜ್ ಸಾಹೇಬರು ಭರದಿಂದ ಮನೆಗೆ ಹೊರಟುಹೋದರು

* * *

ಕರ್ನಲ್ ಗ್ರೇಟ್ ಹಾರ್ಟರಿಗೆ ವರ್ಗವಾಗಿದೆ, ಬರ್ಮಾದ ಅವುದೂ ಒಂದು ಜಿಲ್ಲೆಗೆ ಕಳುಹಲಾಗಿದೆ ಅವರ ಸ್ಥಳದಲ್ಲಿ ಇನ್ನೊಬ್ಬ ಅಧಿಕಾರಿಗಳು ಬಂದಿರುವರು ಅವರು ತಮ್ಮ ಅಂಕಿತವನ್ನು A Fairish (ಎ ಫೇರಿಷ್) ಎಂದು ಹಾಕುತ್ತಾರೆ, ಆದರೆ ಅವರ ಹೆಸರು ಮಾತ್ರ ಇದಲ್ಲ ಅವರು ಇಂಗ್ಲೀಷರಿಗಿಂತಲೂ ಇಂಗ್ಲೀಷರಾಗಿದ್ದಾರೆ ಅವರಿಗಿಂತಲೂ ಹೆಚ್ಚಾಗಿ ಕುಡಿದು ಹಿಂದುಸ್ಥಾನಿಯನ್ನಾಡುತ್ತಾರೆ. ಅವರಿಗಿಂತಲೂ ಹೆಚ್ಚು ಜೋರಿ ಊಟ ಮಾಡುತ್ತಾರೆ ಆದರೆ ಅವರಷ್ಟು ಮಾತ್ರ ಇವರು ಕೆಂಪಗಿಲ್ಲ, ಇದೊಂದೇ ಅವರಲ್ಲಿದ್ದ ಕೊರತೆ ಅವರನ್ನು ಹಿಂದುಸ್ಥಾನಿಗಳೆಂದು ಯಾರಾದರೂ ತಿಳಿದುಕೊಂಡರೆ ಅವರಿಗೆ ಅದು ಸರಿಬರುವುದಿಲ್ಲ

ಈ ಹೊಸ ಅಧಿಕಾರಿಗಳು ಯಾರರಿರುವರೊ ಇನ್ನೂ ಹೇಳಲಾಗದಿದ್ದರೂ ಹುಷಾರಾಗಿದ್ದಾರೆ ಎಂದು ಹೇಳಬಹುದು ಈ ಹುಷಾರಿತನಕ್ಕೇ ಅವರಿಗೆ ಅಧಿಕಾರ ಸಿಕ್ಕಿದ್ದು. ಅವರು ತಮ್ಮ ಆಯುಷ್ಯದಲ್ಲಿ ಒಂದೇ ಒಂದು ಸಲ ಎಂದೂ ಊಟಮಾಡಿಲ್ಲ, ಆದರೆ ಒಂದೇ ಒಂದು ಸಲ ಗುಂಡು ಹಾರಿಸಿದ್ದಾರೆ ಈಗಿರುವಷ್ಟು ಆಗ ಸಂಕಟಗಳಿರಲಿಲ್ಲ ನಾ ಸೀ ಎನ್ನುವ ದರೋಡೆಕೋರರನ್ನೂ ಹಿಡಿಯುವ ಶ್ರೇಯಸ್ಸು ಅವರಿಗೆ ದೊರೆತಿದೆ ಈ ಪ್ರಸಿದ್ಧಿಯಿಂದಲೇ ಅವರನ್ನು ಇಲ್ಲಿಗೆ ಕಳುಹಲಾಗಿದೆ.

ಇಲ್ಲಿಗೆ ಬಂದಂದಿನಿಂದ ಅವರು ತಮ್ಮ ಬಂಗಲೆ ಬಿಟ್ಟು ಹೊರಬಿದ್ದಿಲ್ಲ ಬಂಗಲೆಯ ಸುತ್ತಲೂ ಕಾವಲಿದೆ ಅವರು ತಿರು-

ಗಾಡಲಿಕ್ಕೆ ಹೊರಟರೂ ಅವರನ್ನು ಕಾಯುವುದಕ್ಕೆಂದು ಅನೇಕ ಸಿಪಾಯರೂ ಹೊರಡುತ್ತಾರೆ. ಈ ಅಧಿಕಾರಿಗಳಿಗೆ ಒಂದೇ ಒಂದು ಯೋಚನೆಯಿದೆ. ಅದರಲ್ಲಿ ಅವರು ಮಗ್ನರಾಗಿರುತ್ತಾರೆ. ತಾವು ಶಮಶೇರನ ಬಲೆಗೆ ಬೀಳದಿದ್ದರೆ ಶಮಶೇರನನ್ನು ಬಲೆಯಲ್ಲಿ ಹಾಕದೆ ಬಿಡಲಿಕ್ಕಿಲ್ಲವೆಂಬ ವಿಶ್ವಾಸವು ಅವರಿಗಿದೆ.

ರಾತ್ರಿ ೧೧ ಗಂಟೆಯಾಗಿರಬಹುದು. ಒಬ್ಬ ವ್ಯಕ್ತಿ ಫೇರಿಶ್ ಸಾಹೇಬರನ್ನು ಕಾಣಲಿಕ್ಕೆ ಬಂದಿದ್ದಾನೆ. ಅವನನ್ನು ಅವರು ತಮ್ಮ ಸ್ವಂತದ ಕಿರುಮನೆಯಲ್ಲಿ ಕುಳ್ಳಿರಿಸಿಕೊಂಡು ಮಾತನಾಡುತ್ತಿದ್ದಾರೆ.

"ಹೇಳು, ಏನಾಯಿತು?"

"ಆಗದು, ನನ್ನಿಂದಾಗದ ಕೆಲಸ ಅದು"

"ಆಗುವುದಿಲ್ಲ'. ಏಕೆ?"

"ಅವನು ನನ್ನ ಗೆಳೆಯ, ಸಾಹೇಬರೆ"

"ಗೆಳೆಯನಿರುವುದರಿಂದಲೆ ನಿನಗೆ ಈ ಕೆಲಸ ಸುಲಭಸಾಧ್ಯವಾದುದು"

"ಸಾಹೇಬರೆ, ಜನರು ನನ್ನನ್ನು ಬದುಕಗೊಡಲಿಕ್ಕಿಲ್ಲ"

"ಅವನೇನು ಜನರಿಗೆ ಇಷ್ಟು ಪ್ರಿಯನಾಗಿರುವನೇ?"

"ಅವನಿಂದ ಸ್ವಲ್ಪವಿಷ್ಟು ಸ್ವಲ್ಪ ಉಪಕಾರವನ್ನು ಪಡೆಯದ ಊರವರೂ ಯಾವುದಿದೆ ಸಾಹೇಬರೆ?"

"ಹಾಗಾದರೆ ನಿನ್ನಿಂದ ಆಗುವುದಿಲ್ಲವೆ?"

"ಆಗಲಾರದು ಸಾಹೇಬರೆ"

"ನೋಡು, ಹತ್ತುಸಾವಿರ ರೂಪಾಯಿಯೆಂದರೆ ಕಡಿಮೆಯಲ್ಲ. ಅಲ್ಲದೆ ನಿನಗೆ ಭೂಮಿಯನ್ನು ಕೊಡಿಸುವೆ"

"ಬೇಡಿರಿ"

"ಬೇಡ? ಜೇಲಿನಲ್ಲಿ ಹಾಕಿಸಿಬಿಡುವೆ ನೋಡು."

"ಒಳ್ಳೆಯದು, ಇನ್ನೂ ಹತ್ತು ನಿಮಿಷ ಅವಕಾಶ ಕೊಡುತ್ತೇನೆ ಯೋಚಿಸಿ ಹೇಳು" ಎಂದು ಫೇರಿಶ್ ಸಾಹೇಬರು ಹೊರಗೆ ಹೋದರು

ಸಾಹೇಬರು ಹೊರಟುಹೋದ ಮೇಲೆ ಆ ವ್ಯಕ್ತಿ ಯೋಚಿಸ-ತೊಡಗಿತು "ಏನು ಆ ಕಣ್ಣುಗಳು ಇಂದು ಕಾಣಲಾರವೆ? ನಾನಿಲ್ಲಿಗೆ ಬಂದಸಲಕ್ಕೊಮ್ಮೆ ಅದಾವ ನೆಪದಿಂದಲೊ ನನ್ನ ಕಣ್ಣಿಗೆ ಬಿದ್ದು ಹೋಗುತ್ತಿದ್ದಳು ಏನು ಇವೊತ್ತು ಅಪ್ರಕಟಳಾಗಿಯೆ ಇರು-ವಳೇನು ?"

ಸ್ವಲ್ಪ ಹೊತ್ತಿನಲ್ಲ ಮೆಲ್ಲಗೆ ಬಾಗಿಲ ತೆರೆದು ಬುಲೇಕಾ ಒಳಗೆ ಬಂದಳು ಆ ವ್ಯಕ್ತಿಯೊಡನೆ "ನಾನು ನಿಮ್ಮೊಡನೆ ಮಾತನಾಡ-ಬೇಕೆನ್ನುತ್ತೇನೆ" ಎಂದಳು

ವ್ಯಕ್ತಿಯು ಮಾತನಾಡಲಿಲ್ಲ

"ನೀವು ಶಮಶೇರನನ್ನು ಬಲ್ಲಿರೇನು ?"

"ಬಲ್ಲೆ"

"ಅವನು ಹೇಗಿದ್ದಾನೆ ?"

ಬುಲೇಕಾ ಬೇಗನೆ ಮಾತುಮುಗಿಸಲಿಲ್ಲ ಒಂದೊಂದಾಗಿ ಕೇಳಿ ಎಲ್ಲವನ್ನೂ ಅರಿತುಕೊಂಡಳು ಪ್ರತಿಯೊಂದು ಉತ್ತರಕ್ಕೂ ಅವಳಲ್ಲಿ ಉದ್ವಿಗ್ನತೆಯು ಬೆಳೆಯತೊಡಗಿತು ಕೊನೆಗೆ ಕೇಳಿಯೇ ಬಿಟ್ಟಳು "ಅವನ ಮನೆಯವಳು ಹೇಗಿದ್ದಾಳೆ ?"

"ಅವನ ಮನೆಯವಳು ಇಲ್ಲ"

"ಅವನು ಮದುವೆಯಾಗಿಲ್ಲವೆ ?"

"ಇಲ್ಲ"

"ಅವನು ಹಾಗೆಯೆ ಇದ್ದಾನೆಯೆ ? ."

"ಹೆಂಗುಸರೆಂದರೆ ಅವನಿಗೆ ಹೆದರಿಕೆ"

ಉಸಿರು ಬಿಡದೆ ಕೇಳಿದಳು "ನೀವು ಅವನ ಗೆಳೆಯರೇನು ?

"ಅಹುದು, ನನಗೆ ಆತನ ಪರಿಚಯವಿದೆ"

"ನೀವು ನನ್ನ ಗೆಳೆತನವನ್ನು ಬಯಸುವಿರೇನು ?"

ಆ ವ್ಯಕ್ತಿಯ ರೋಮರೋಮದಲ್ಲಿ ಬಯಕೆಯು ಕೊನರಿತು ನಾಚಿಕೆಯಿಂದ ಸ್ತಬ್ಧನಾದ

ಜುಲೇಕಾ ಒಮ್ಮೆಲೆ ಆ ವ್ಯಕ್ತಿಯ ಕೈಹಿಡಿದು "ನಿಮಗೆ ನನ್ನ ಗೆಳೆತನ ಬೇಡವೆ?"

ವ್ಯಕ್ತಿಯು ಸುಮ್ಮನಾಗಿದ್ದಿತು

"ನನ್ನದೊಂದು ಮಾತನ್ನು ನಡೆಯಿಸುವಿರಾ?"

" ?"

"ನಡೆಯಿಸುವಿರಾ?"

ವ್ಯಕ್ತಿಯು ತನ್ನ ಅಂತಃಕರಣಪೂರ್ವಕವಾದ ಒಪ್ಪಿಗೆಯನ್ನು ಕಣ್ಣುಗಳಲ್ಲಿ ತುಂಬಿಕೊಂಡು ಮೆಲ್ಲಮೆಲ್ಲನೆ ರೆಪ್ಪೆಗಳನ್ನು ಮೇಲ್ಮಾಡಿ ನೋಡಿದನು — ಯೌವನದ ವಸಂತಮಾಸದಲ್ಲಿ ಕಮಲದ ಈ ಮೊಗ್ಗೆಯು ಅದೆಷ್ಟು ಸುಂದರವಾಗಿ ಮನೋಹರವಾಗಿ ಅರಳುತ್ತಿರುವುದು!

"ನಡೆಯಿಸುವೆಯಾ? ನೋಡು, ಶಮಶೇರನನ್ನು ನನಗೆ ತಂದುಕೊಡು ಅವನು ಹೇಗಿರುವನು?... ಅವನು ಹೇಗೆ ಗಲ್ಲನ್ನೇರುವನು? ಎಂಬುದನ್ನು ನೋಡುವೆನು"

* * *

ಫೇರಿಶ್ ಸಾಹೇಬರು ಬಂದು ಕೇಳಿದರು "ಹೇಳು ಜೈಲು ಬೇಕೊ ಅಥವಾ ?"

"ಸಾಹೇಬರೆ, ಕೆಲಸ ಕಠಿನವಾದುದು. ಆದರೂ ನೋಡುವೆ ಆದರೆ ೧೫೦೦೦ ರೂಪಾಯಿ ಕೊಡಿಸಿರಿ."

"ಒಳ್ಳೇದು"

* * *

ಫೇರಿಶ್ ಸಾಹೇಬರ ಮಹಾ ಅಸ್ತ್ರವೆಂದರೆ ಹಿರಿಯ ಮಗಳಾದ ಜುಲೇಕಾ ಅವಳೊಡನೆ ತಮ್ಮ ಭಾಗ್ಯವನ್ನು ಅಂಟಿಸಿಕೊಳ್ಳಬೇಕೆಂದವರೆಲ್ಲರನ್ನೂ ಅನಳು ಸುಟ್ಟು ಭಸ್ಮಮಾಡಿದ್ದಾಳೆ. ಆದರೂ ಅವಳು ಹೆಂಗುಸು. ತನ್ನಲ್ಲಿರುವ ಬೆಂಕಿಯನ್ನು ಯಾರಾದರೂ ನೀರು ಮಾಡ-

ಬೇಕೆಂದು ಬಯಸುತ್ತಾಳೆ ನೀರಾಗಿ ತರಂಗಿತವಾಗಿ ಆನಂದದಿಂದ ಪ್ರವಹಿಸಲಿಚ್ಛಿಸುತ್ತಾಳೆ ಅವಳು ಉರಿಯುತ್ತಾಳೆ ತಣ್ಣಗಿನ ನೀರು ಅವಳಿಗೆ ಬೇಕಾಗಿದೆ. ಕುಡಿಯುವುದಕ್ಕೆ ನೀರು ಅವಳಿಗೆ ಬೇಕಾಗಿಲ್ಲ ನಂದುವುದಕ್ಕೆ ಅವಳು ನೀರನ್ನು ಬಯಸುತ್ತಾಳೆ ಯಾರಾದರೂ ಹಿಮದ ಸ್ವರೂಪವಾಗಿ, ತನ್ನಲ್ಲಿಯ ಬೆಂಕಿಯನ್ನು ನಂದಿಸುವ ನೀರಿನ ಹೊಳೆಯಾಗಿ ತನ್ನ ಬಳಿ ಬರಲೆಂದು ಬೇಡುತ್ತಾಳೆ ಆದುದರಿಂದಲೆ ಅವಳು ಎಲ್ಲರ ಮೇಲೂ ತನ್ನ ಬೆಂಕಿಯ ಪ್ರಯೋಗವನ್ನು ಮಾಡುತ್ತಾಳೆ. ಅದುವೆ ಅವಳು ಅನಾಯಾಸವಾಗಿ ಫೇರಿಶ್ ಸಾಹೇಬರ ಒಂದು ದೊಡ್ಡ ಅಸ್ತ್ರವಾಗಿದ್ದಾಳೆ

ವರ್ಗದಿಂದ ವರ್ಗಕ್ಕೆ ಹಾರುತ್ತ ಬಿ ಎ ದ ವರೆಗೆ ಬಂದಿದ್ದಾಳೆ ಇದೇ ರೀತಿಯಾಗಿ ಅವಳೆಲ್ಲಿಯ ವರೆಗೆ ಓದುವಳೊ, ಅದಾವ ತರಗತಿಯ ವರೆಗೆ ಹೋಗುವಳೊ—ಇದಾರಿಗೂ ಗೊತ್ತಿಲ್ಲ ತನ್ನ ಒಡತಿಯು ತಾನೇ ಆಗಿದ್ದಾಳೆ ಅಯ್ಯೋ ಅವಳಿಗೆ ಒಡೆಯನಾರೂ ಸಿಕ್ಕುತ್ತಿಲ್ಲ!

ತಂದೆಯ ಮೇಲೆ ಅಧಿಕಾರ ನಡೆಯಿಸುತ್ತಾಳೆ, ಕಾದಂಬರಿಗಳನ್ನು ಓದುತ್ತಾಳೆ, ಪರೀಕ್ಷೆಗಳಲ್ಲಿ ಉತ್ತೀರ್ಣಳಾಗುತ್ತಾಳೆ ಇದರ ವಿನಾ ಅವಳೇನನ್ನೂ ಮಾಡುತ್ತಿರುವುದಿಲ್ಲ

* * *

ತಾಯಿಯ ಅಂತಿಮ ಕ್ರಿಯೆಗಳನ್ನು ತೀರಿಸಿದ ಮೇಲೆ ಶಮಶೇರ ಅದೃಶ್ಯನಾಗಿದ್ದಾನೆ, ಅಗಮ್ಯನಾಗಿದ್ದಾನೆ, ಶಾಂತನಾಗಿದ್ದಾನೆ ದಟ್ಟವಾದ ಅರಣ್ಯಗಳಲ್ಲಿ ಅವನು ವಾಸಿಸುತ್ತಾನೆ ಯಾವ ಗಲಾಟೆಯನ್ನೂ ಮಾಡುತ್ತಿರುವುದಿಲ್ಲ ಆದರೆ ಅವನು ಈಗ ಹೊಲಸುಹೊಲಸಾಗಿ ಕಾಣುತ್ತಾನೆ ಬಾಡಿದಂತೆ ಕಾಣುತ್ತಾನೆ ಆದರೂ ನೋಡಲಿಕ್ಕೆ ಸುಂದರನಾಗಿದ್ದಾನೆ ಈವೊತ್ತು ಹಳ್ಳಿಯಲ್ಲಿರುವ ತನ್ನ ಗೆಳೆಯ ಸಜನಸಿಂಹನ ಮನೆಗೆ ಬಂದಿದ್ದಾನೆ ಸಜನಸಿಂಹನು ಶಿಕ್ಷಿತ ಸುಸಂಸ್ಕೃತ ವ್ಯಕ್ತಿಯಿಗುವುದರಿಂದ ಎಲ್ಲರ ಆದರಕ್ಕೂ ವಿಶ್ವಾಸಕ್ಕೂ ಪಾತ್ರನಾಗಿದ್ದಾನೆ.

ಮನೆಯ ಒಳಗೆ ಇಬ್ಬರೂ ಎದುರುಬದುರಾಗಿ ಮಂಚದ ಮೇಲೆ ಕುಳಿತಿದ್ದಾರೆ ಶಮಶೇರನೆಂದ "ಸಜನ, ನನ್ನ ತಾಯಿ ತೀರಿದಳು! ಅವಳು ನನಗೆ ಹೇಗಿದ್ದಳೆನ್ನುವುದು ಗೊತ್ತಿದೆಯೆ ನಿನಗೆ!"

"ಶಮಶೇರ, ಈಗ ಆದುದನ್ನು ಚಿಂತಿಸುವುದರಿಂದೇನು ಪ್ರಯೋಜನ? ಪರಮಾತ್ಮನ ಇಚ್ಛೆ! ದುಃಖಿತನಾಗಬೇಡ!"

"ಇಂದಿನ ವರೆಗೆ ಬಹುಕಾಲ ಜೀವಿಸಿದಂತಾಯಿತು ಇನ್ನಾರಿಗೋಸ್ಕರ ಜೀವಿಸಲಿ!"

"ಶಮಶೇರ, ನೀನು ಇನ್ನೂ ಬಹು ದಿವಸ ಬದುಕಬೇಕು"

"ಪುಣ್ಯವೆ ನಷ್ಟವಾಗಿ ಹೋದ ಮೇಲೆ ನಾನು ಜೀವಿಸಿಯಾದರೂ ಏನು? ಪುಣ್ಯ ನಷ್ಟವಾದ ಮೇಲೆ ಜೀವಿಸಿರಲು ಯತ್ನಿಸುವುದೆಂದರೆ ವಿಡಂಬನೆಯೆ ಸರಿ ತಾಯಿ ನನ್ನ ಪುಣ್ಯದ ಪ್ರತಿಮೆಯಾಗಿದ್ದಳು ಅವಳು ಹೊರಟುಹೋದಳು! ಗೆಳೆಯರಿದ್ದಾರೆ, ಅವರಿಗಾದರೂ ಎಲ್ಲಿಯ ವರೆಗೆ ಕಷ್ಟಕೊಡಲಿ? ಪುಣ್ಯವೇ ನಷ್ಟವಾದ ಮೇಲೆ ಅವರ ಗೆಳೆತನವಾದರೂ ಎಲ್ಲಿಯ ವರೆಗೆ ಇದ್ದೀತು? ಸಜನ್, ಜೀವನದ ಪುಣ್ಯವನ್ನು ಕಳೆದುಕೊಂಡು, ರಸಹೀನನಾಗಿಯೂ, ಸ್ನೇಹಹೀನನಾಗಿಯೂ, ಉದ್ದೇಶಹೀನನಾಗಿಯೂ, ಜೀವನಹೀನನಾಗಿಯೂ ದಿನಗಳನ್ನು ಕಳೆಯುವುದರಿಂದೇನು ಲಾಭ? ಸಜನ್, ಸರಕಾರಕ್ಕೆ ನಾನು ಬೇಕಾಗಿದ್ದೇನೆ, ನರಕದಲ್ಲಿಯೂ ನಾನು ಬೇಕಾಗಿರುವೆನೊ ಏನೊ ಸಜನ್, ಒಳ್ಳೆಯ ಮತ್ತು ಕೆಡುಕು ದಿನಗಳ ಹೊಣೆಯು ಸರಕಾರದ ತಲೆಯ ಮೇಲಿದೆಯೆಂಬುದನ್ನು ನೀನು ಬಲ್ಲೆ. ಸಜನ್, ವಾದಿಸಬೇಡ ಒಂದೇ ಒಂದು ಮಾತು ಹೇಳಗೊಡು"

"ಶಮಶೇರ ಏನು ಬೊಗಳುತ್ತಿರುವೆ?"

"ನಾನೆಂದಾದರೂ ಬೊಗಳಿರುವೆನೆ? .. ನಾನು ಇದನ್ನು ಮನಃಪೂರ್ವಕವಾಗಿ ಹೇಳುತ್ತಿದ್ದೇನೆ"

"ಏನು, ನೀನು ಮಿತ್ರಹೀನನಾಗಿರುವುದಿಲ್ಲವಲ್ಲ?"

"ಸಜನ್, ನಾನು ಮಿತ್ರರಿಗೆ ಬೇಕಾಗಿರಲಿಕ್ಕಿಲ್ಲ. ನನ್ನ ಮಿತ್ರತ್ವವು ಅವರಿಗೆ ಭಾರವಾಗಿರಬಹುದು"

ಸಜನ್ ಸ್ವಲ್ಪ ಬೆದರಿದ

"ಸಜನ್, ನನ್ನ ಬಳಿಯಲ್ಲಿ ಏನೂ ಇಲ್ಲವೆಂಬುದನ್ನು ನೀನು ಬಲ್ಲೆ ಒಂದು ಮನೆಯಿದೆ ಅದರಲ್ಲಿ ಒಬ್ಬ ಬಡವ ವಾಸಿಸುತ್ತಿದ್ದಾನೆ ಹೌದು, ಇನ್ನೊಂದು ವಸ್ತು ನನ್ನ ಹತ್ತಿರವಿದೆ ಅದನ್ನು ನಾನು ನಿನಗೆ ಕೊಡಬೇಕೆಂದಿದ್ದೇನೆ ನನಗೆ ನಿನ್ನ ಹೊರತು ಇನ್ನಾರಿದ್ದಾರೆ ಹೇಳು ?"

"ಈವೊತ್ತು ನೀನಿಷ್ಟು ದುಃಖಿತನೇಕಾಗಿರುವೆ ಶಮಶೇರ ?"

"ನನ್ನ ಹತ್ತಿರ ೧೦,೦೦೦ ರೂಪಾಯಿಗಳಿವೆ ನಿನ್ನ ಹೊರತು ಅವನ್ನು ನಾನಾರಿಗೂ ಕೊಡುವುದಿಲ್ಲ ಕಂಡೆಯಾ"

" ?"

"ನೋಡು, ಒಲ್ಲೆನೆನಬೇಡ ಸ್ವೀಕರಿಸು ನನಗೆ ಈ ಜಗತ್ತಿನಿಂದ ಬಿಡುಗಡೆ ಮಾಡು."

ಸಜನಸಿಂಹನ ಕಣ್ಣುಗಳಿಂದ ಕಂಬನಿಗಳು ಸುರಿಯತೊಡಗಿದುವು ಅವನು ಗಟ್ಟಿಯಾಗಿ ಎಂದ "ಶಮಶೇರ, ನಾನು ೧೫೦೦೦ ರೂಪಾಯಿ ಬೆಲೆ ನಿನಗೆ ಕಟ್ಟಿ ಬಂದಿದ್ದೇನೆ, ನಿನಗೆ ಗೊತ್ತೋ ?"

"ಇನ್ನಿಷ್ಟು ಒಳಿತಾಯಿತು ನನ್ನ ಗೆಳೆಯನಿಗೆ ೫೦೦೦ ರೂಪಾಯಿಗಳು ಹೆಚ್ಚು ಸಿಕ್ಕುವವು"

ಸಜನಸಿಂಹನ ಅಳುವು ಉಕ್ಕಿಬಂದಿತು

ಶಮಶೇರನು ಸಮಾಧಾನಪಡಿಸಿದ "ಸಜನ್, ದುಃಖಿತನಾಗಬೇಡ. ನಿನಗೆ ಮೋಸದ ತಿರಸ್ಕಾರವಿದೆ. ನನಗೂ ಹಾಗೆಯೆ ಆದರೆ ಇದು ಮೋಸವಲ್ಲ ಸಮಾಧಾನವೆನಿಸದಿದ್ದರೆ ಈ ರೂಪಾಯಿಗಳನ್ನು ದೀನರಿಗಾಗಿ ವೆಚ್ಚಮಾಡು ನಿಜವಾಗಿಯೂ ಆ ರೂಪಾಯಿಗಳು ಅವರವೇ, ಅವರಿಗಾಗಿಯೇ ಇವೆ."

ಸಜನಸಿಂಹ ಅಳುತ್ತ್ತಅಳುತ್ತ "ನೀನು ಒಂದಾಗ ನಾನು ಯೋಚಿಸುತ್ತಿದ್ದೆ— ನಿನ್ನನ್ನು ಹೇಗೆ ಹಿಡಿದುಕೊಡಲಿ? ಆಗ ನನ್ನ ಮೇಲೆ ವಜ್ರಾಘಾತವೇಕಾಗಲಿಲ್ಲ?" ಎಂದ

"ಆ ವಿಚಾರವನ್ನು ಇಷ್ಟು ಭಯಂಕರವಾದ ರೂಪವಲ್ಲ ಕಾಣಬೆಡ ನಾನು ನೋಡುವ ರೂಪದಲ್ಲಿಯೆ ನೋಡು ನಾನು ಸಾಯಬೇಕಾಗಿದೆ, ಇಂದಿಲ್ಲದಿದ್ದರೆ, ನಾಳೆ ಸಾಯಲೇಬೇಕು ಸರಕಾರವು ನನ್ನನ್ನು ಹುಡುಕದೆ ಬಿಡದು ಅದಕ್ಕೆ ದೊಡ್ಡದೊಡ್ಡ ಕೈಗಳಿವೆ ಗುಪ್ತಚಾರರಿದ್ದಾರೆ ಇನ ದರೂ ನಾನು ಸಾಯಲೇಬೇಕಲ್ಲವೆ? ಸಂಕಾರದ ಕೈಯಲ್ಲ ಸಿಕ್ಕು ಸತ್ತರೆ ಸ್ವಲ್ಪವಿಲ್ಲ ಸ್ವಲ್ಪ ನಾನು ಉಪಕಾರಮಾಡಬಹುದು ನಿನ್ನ ಮುಖಾ ತರ ನಾನು ಸರೆಯಾಳಾಗದಿದ್ದರೆ ಆ ರೂಪಾಯಿಗಳು ಯಾರ ಕೈಗೆ ಹತ್ತುತ್ತವೂ ಏನೊ! ನನ್ನ ಮಿತ್ರರಿಗೆ ಸಿಕ್ಕರೆ ಬಹಳೇ ಒಳಿತು ಅವನು ಅವುಗಳ ಉಪಯೋಗವನ್ನು ಚೆನ್ನಾಗಿ ಮಾಡಬಹುದು"

ಸಜನಸಿಂಹ ಅತ್ಯಂತ ದುಃಖಿತನಾಗಿ "ಅಯ್ಯೋ, ಶಮಶೇರ" ಎಂದನಿಷ್ಟೆ ಮುಂದ ಬಾಯಿಂದ ಮಾತುಗಳೇ ಹೊರಡಲಿಲ್ಲ

ಶಮಶೇರನೆಂದ "ದುಃಖಿಸಬೆಡ ವ್ಯರ್ಥವಾಗಿ ನಾನು ಬಹಳವಾಗಿ ಯೋಚಿಸಿದ್ದೇನ ನನಗೆ ಬೆರೆ ಮಾರ್ಗವೆ ಕಾಣುವುದಿಲ್ಲ ಪಾಪದ ಕಲ್ಪನೆಯನ್ನು ಮನದಲ್ಲಿ ತರಬೇಡ ವಿಶ್ವಾಸಘಾತ ಮಾಡುತ್ತಿರುವೆನೆಂದು ಭಾವಿಸಬೇಡ ಗೆಳೆಯನ ಬಯಕೆಯನ್ನೆ ಪೂರ್ತಿಗೊಳಿಸುತ್ತಿರುವೆನೆಂದು ತಿಳಿದುಕೋ ಸತ್ತ ಮೇಲೆ ಉಳಿಯಲಾರದಂತಹ ಇಚ್ಛೆಯನ್ನು ಪೂರ್ತಿಗೊಳಿಸುತ್ತಿರುವೆಯೆಂಬುದನ್ನು ಮರೆಯಬೇಡ. ನಾನೇಕೆ ಸಾಯಬಯಸುವೆನೆಂಬುದನ್ನು ಯೋಚಿಸುತ್ತಿರುವೆಯೇನು? ಸಾವನ್ನು ಬಯಸುವುದು ಲಜ್ಜಾಸ್ಪದವಾದುದು ಅದು ಅಂತಹ ತುಚ್ಛ ವಸ್ತುವು ಬಯಸುವಂತಹ ವಸ್ತುಗಳು ಎರಡೆ. ಒಂದು ಜೀವನ, ಇನ್ನೊಂದು ಮೋಕ್ಷ ಸಾವು ಮೋಕ್ಷವಲ್ಲ ಆದುದರಿಂದ ನಾನು ಸಾವನ್ನು ಅಪೇಕ್ಷಿಸುವುದಿಲ್ಲ ಆದರೆ ಸಾವು ಮೋಕ್ಷದ ಮಾರ್ಗದಲ್ಲಿ ಅಡ್ಡಬರುವುದೇಕೆ? ಅವನ್ನೂ ನಾನು

ಅಂಗೀಕರಿಸುವೆನು ಅದನ್ನು ಮುಂದೂಡಲಿಚ್ಛಿಸುವುದಿಲ್ಲ ಈಗ ಸಾಯುವ ಸಮಯ ಬಂದಿದೆ ಈಗ ನನಗೆ ಅದಕ್ಕೋಸುಗ ದುಃಖವಿನಿತಿಲ್ಲ ನಾನು ಸಾಯುವುದರಿಂದ ಜನಗಳಿಗೆ ದುಡ್ಡು ಸಿಕ್ಕುವುದು, ನನಗೆ ಪರಮಾರ್ಥವು ದೊರಯುವುದು ವಿಶ್ವಕ್ಕೆ ಹಣವು ಸಿಕ್ಕು ಅದು ಸುಖಿಯಾಗಿರಬೇಕೆಂದೇ ಸಾವು ಬರುವುದು ಪರಮಾತ್ಮನು ಅವನ್ನು ಕಳುಹುವನು ಧನ್ಯವಾದಗಳೊಡನೆ ಅದನ್ನು ಸ್ವೀಕರಿಸಿ ವ್ಯಕ್ತಿಯು ಮುಂದರಿಯಬಾರದೇಕೆ ? ಆ ಕಾರ್ಯದಲ್ಲಿ ಅವನ ಮಿತ್ರರೂ ಅವನಿಗೆ ನೆರವಾಗಬಾರದೆ ಕೆ ? ತನ್ನ ಮಿತ್ರರಿಗೆ ಇಂತಹ ಸಮಯದಲ್ಲಿ ನೆರವಾದರೆ ಪಾಪದ ಗ್ಲಾನಿಯು ಸುಟ್ಟುಹೋ-ಗುವುದು ಇದರ ಹೊರತು ಬೆರೊಂದು ಉಪಾಯವಿಲ್ಲ ನಾನು ಮೋಹನನಾಗಿದ್ದೆ ನಾನನ್ನು ಒಂದು ಕ್ಷಣವಾದರೂ ಮುಂದ ಹೂಡಲು ಇಚ್ಛಿಸಿದೆನೆ ? ಚಿಂತಿಸಿದನೆ ? ನೀನು ಮಿತ್ರನಾಗಿದ್ದೆ ಮೃತ್ಯುವಿನ ಪರನೂ ಅವನಿಗೆ ನೆರವಾಗಬಾರದೇ ? ”

ಸಜನಸಿಗೆ ದುಃಖವು ಮರಕಳಿಸಿತು ಒತ್ತರಿಸಿ ಬಂದಿತು “ ಶಮಶೇರ, ನಿನಗೆ ಕೈಮುಗಿವೆ ನನ್ನನ್ನು ರಕ್ಷಿಸು ನನಗೆ ಮತ್ತೇನೂ ಹೇಳಬೇಡ ನನ್ನ ಪರಲೋಕವನ್ನು ಕಡಿಸಬೇಡ ನನ್ನ ತಪ್ಪನ್ನು ಸುಧಾರಿಸಲು ನನಗೆ ಅವಕಾಶಕೊಡು ” ಎಂದು ಅಳುವಿನ ದನಿಯಲ್ಲಿ ನುಡಿದ

ಶಮಶೇರ ಸಜನಸಿಂಹನ ಎರಡೂ ಹಸ್ತಗಳನ್ನು ಒಂದುಗೂಡಿಸಿ ತನ್ನ ಕೈಯಲ್ಲಿ ತೆಗೆದುಕೊಂಡು ಕಂಬನಿದುಂಬಿದ ಅವನ ಕಣ್ಣು-ಗಳನ್ನು ನೋಡುತ್ತ “ ಬೇಡ, ಬೇಡ ಸಜನ್ ನಾನು ಏನಾಗುವು-ದೆಂಬುದನ್ನು ಒಲ್ಲೆ ನಾನು ಹೇಳಿದಂತೆಯೆ ಆಗುವುದು ಧೈರ್ಯ ತಾಳು ಧೈರ್ಯ ತಂದುಕೊಳ್ಳುವುದೂ ಇದೇ ಹೊತ್ತಿನಲ್ಲಿಯೆ ಗಂಡುಸ-ರಂತೆ ಧೈರ್ಯ ತಾಳು ●ಗೆಳೆಯನಂತೆ ಕೆಲಸ ಮಾಡು ಏಳು ಹೊರಡು ”

ತನ್ನ ಮಿತ್ರ ಸಜನಸಿಂಹನನ್ನು, ತನ್ನ ಆಗಮನದ ಸುದ್ದಿ-ಯನ್ನು ಪೋಲೀಸರಿಗೆ ತಿಳಿಸಲು ಕಳಿಸಿಯೆ ಬಿಟ್ಟ ಶಮಶೇರ

ಇತ್ತ ಕಡೆಯಿಂದ ಶಮಶೇರನು ಅವನನ್ನು ನೂಕಿದ, ಅತ್ತ ಕಡೆಯಿಂದ ಅವನನ್ನು ಜುಲೇಕಾನ ಕಣ್ಣುಗಳು ಜಗ್ಗಿದುವು ಅವನು ವಿವಶನಾಗಿ ಹೊರಟುಹೋದನು

* * *

ಫೇರಿಶ್ ಸಾಹೇಬರು ಕೋಪದಿಂದ ಕೇಳಿದರು "ಮತ್ತೆ ಸುಮ್ಮಗಾದೆಯಾ!"

ಸಜನಸಿಂಹ ಅಳುತ್ತಿದ್ದ, ಮತ್ತೆ ಸುಮ್ಮಗಿರುತ್ತಿದ್ದ

"ಇದೇನೊ, ಮಾತಾಡುವುದಿಲ್ಲವೇನು?"

ಕಂಬನಿದುಂಬಿದ ಕಣ್ಣುಗಳು, ವಿವಶತೆ, ಮೂಕಮೌನ

"ಒಳ್ಳೆಯದು, ಅಂತಃಕರಣದ ಕಳವಳವನ್ನು ಕಡಮೆ ಮಾಡಿಕೋ" ಎಂದು ಫೇರಿಶ್ ಸಾಹೇಬರು ಹೊರಟುಹೋದರು

ಸ್ವಲ್ಪ ಸಮಯದ ಮೇಲೆ ಅಲ್ಲಿಗೆ ಜುಲೇಕಾ ಬಂದಳು.

"ಸಜನ್, ಅದೆಷ್ಟು ದಿನಗಳಿಂದ ನಿನ್ನ ದಾರೀನೋಡುತ್ತಿದ್ದೆ!"

ಸಜನಸಿಂಹ ಮಾತನಾಡಲಿಲ್ಲ ಕೆಲ ನಿಮಿಷಗಳು ಕಳೆದು ಹೋದ ಮೇಲೆ ಒಮ್ಮಿಂದೊಮ್ಮೆಲೆ "ಅವನು ಈಗ ನಮ್ಮ ಮನೆಯಲ್ಲಿದ್ದಾನೆ" ಎಂದ

ಅವನು ಈ ನುಡಿಗಳನ್ನು ಆಡುವಾಗ ತನ್ನ ಹೃದಯವನ್ನು ಸೀಳಿ, ಪಿಶ್ವಪ್ರಯತ್ನಪೂರ್ವಕ ಆಡುತ್ತಿರುವನೊ ಏನೊ ಎಂಬಂತೆ ಎನಿಸಿತು

ಈ ನುಡಿಗಳನ್ನು ಕೇಳಿ ಜುಲೇಕಾ ಕ್ಷಣಕಾಲ ಸ್ತಬ್ಧಳಾಗಿ ನಿಂತಳು ಬಳಿಕ "ಸಜನ್, ನೀನೆಷ್ಟು ಒಳ್ಳೆಯವ! ಬಾ, ನನ್ನ ಕಿರುಮನೆಗೆ ಹೋಗೋಣ" ಎಂದಳು.

ಸಜನಸಿಂಹ ಸ್ತಂಭಿತನಾಗಿ, ಮಂತ್ರಮುಗ್ಧನಾಗಿ ಎದ್ದುನಿಂತ.

ಸ್ವರ್ಗೋಪಮ ಕಿರುಮನೆಯಲ್ಲಿ

"ಕುಳಿತುಕೊ" ಎಂದು ಕುರ್ಚಿಯ ಮೇಲೆ ಕುಳ್ಳಿರಿಸಿದಳು- ಜುಲೇಕಾ ತಾನು ಎದುರಿನಲ್ಲಿ ಕೋಚಿನ ಮೇಲೆ ನಿಃಸಂಕೋಚದಿಂದ ಅಸ್ತವ್ಯಸ್ತವಾಗಿ ಕುಳತಳು

"ಏನು ಹೇಳುತ್ತಿದ್ದೆ? ಹಾಂ, ಆ ಶಮಶೇರನ ವಿಚಾರವಾಗಿ ಹೇಳು" ಎಂದು ಬುಲೀಕಾ ಪ್ರತಿಯೊಂದು ವಿಷಯವನ್ನೂ ತಿಳಿದು-ಕೊಂಡಳು ಬಳಿಕ ಎಂದಳು "ನಿನ್ನ ಶಮಶೇರ ಮಹಾಮೂರ್ಖ!"

ಸಜನಸಿಂಹ ವೇದನೆಯಿಂದ, ಆಸೆಯಿಂದ, ನಾಚಿಕೆಯಿಂದ ಎಚ್ಚರದಪ್ಪುತ್ತ ಸಾಗಿದ್ದ

ಇಷ್ಟರಲ್ಲಿ ಫೇರಿರ್ ಸಾಹೇಬರು ಬಂದರು—

"ಬದ್ಮಾಷ್! ನಾಯಿ! ಕತ್ತೆ!"

ಆವನು ಕಣ್ಣೆತ್ತಿ ನೋಡಿದ ಬುಲೀಕಾ ಕಾಪೂರ! ಚಿತ್ರದ ಒಂದು ಏಟು ಚೆನ್ನಾಗಿ ಬಿದ್ದಿತು!

* * *

ಅದೇ ಕೋಚಿನ ಮ ಲೆ ಅದೇ ಶಮಶೇರ

ಎದುರಿನಲ್ಲಿ ಆರಕ್ತ, ಅಚಂಚಲ ಸೌದಾಮಿನಿಯಂತ ಮನ-ಮೋಹಕ ಭಂಗಿಯಲ್ಲಿ ಬುಲೀಕಾ ನಿಂತಿದ್ದಾಳೆ

"ಶಮಶೇರ, ನೀನು ಬಂಧಿತನಾಗುವೆಯಾ?"

"ಹೂಂ"

"ಪೋಲೀಸರು ಬರುತ್ತಿದ್ದಾರೆ"

"ಬರುತ್ತಿರಬಹುದು"

"ನಿನಗೆ ಗಲ್ಲಾಗುವುದು"

"ಗೊತ್ತು"

"ಜೀವಿಸಬೇಕೆನ್ನುವೆಯಾ?"

"ಹೇಗೆ?"

"ನಾನು ಬದುಕಿಸಬಲ್ಲೆ"

"ಅದೂ ಗೊತ್ತು, ಆದರೆ ಏಕೆ ಬದುಕಿಸಬೇಕೆನ್ನುವೆ?"

"ಗಲ್ಲೆಂದರೆ ನನಗೆ ಭಯವಾಗುತ್ತದೆ ಗಲ್ಲು ಒಳ್ಳೆಯದಲ್ಲ"

"ಬುಲೀಕಾ, ನಾನು ಏತಕ್ಕಾಗಿ ಯಾರಿಗೋಸ್ಕರ ಬದುಕ ಬೇಕು?"

" ನನ್ನ ಹೆಸರು! ನಿನಗೆ ಹೇಗೆ ಗೊತ್ತು ? ನೀನಾರು ? ಹೆಸರುಗೊಂಡು ಮಾತನಾಡಿಸಲು ನೀನಾರು? "

" ಸಾಹೇಬರ ಮಗಳು ನನಗೆ ಗೊತ್ತಿಲ್ಲವೆ ? ನಿನ್ನನ್ನು ಬಹಳ ದಿವಸಗಳಿಂದ ಬಲ್ಲೆ ಇಲ್ಲಿಯ ವರೆಗೆ ಹೆಸರುಗೊಂಡೇ ಮಾತನಾಡುತ್ತಿದ್ದೆ, ಇನ್ನು ಹೆಸರುಗೊಂಡು ಮಾತನಾಡಬಾರದೇನು ? "

" ಶಮಶೇರ, ನೀನು ಧಿಟ್ಟನಿರುವೆ "

" ಇರಬಹುದು ನೀನು ಸಣ್ಣವಳಿದ್ದಾಗ ನೋಡಿದ್ದೆ ಆಗ ' ಜುಲೇಕಾ ' ಎಂದು ಕರೆದಿದ್ದೆ ಆಗ ಬಿದ್ದ ರೂಢಿ ಈಗ ತಪ್ಪುವುದೆ ? ಆದರೂ ನಿನ್ನನ್ನು ಏನೆಂದು ಕರೆಯಬೇಕು ? ಹೇಳು ! "

" ಏನೇ ಇರಲಿ ಇನ್ನು ನನ್ನ ಹೆಸರು ತೆಗೆದುಕೊಳ್ಳಬೇಡ ನೀನು ಜೀವಿಸಬೇಕೆನ್ನುವೆಯೊ ಇಲ್ಲವೊ ? "

" ಯಾರಿಗೋಸ್ಕರ ? "

" ನಿನಗಾರೂ ಇಲ್ಲವೆ ? "

" ನನಗೆ ಎಲ್ಲವೂ ಎಲ್ಲರೂ ಎಂದರೆ ಸಾವು ! "

" ಹಾಗಲ್ಲ ಶಮಶೇರ, ನಾನು ಜುಲೇಕಾ ನಾನು ಸಾವಲ್ಲ ನಾನು ನಿನ್ನನ್ನು ಬದುಕಿಸಬಲ್ಲೆ ನಾನು ಸಾವೂ ಇದ್ದೇನೆ "

" ಬದುಕಿಸುವ ಶಕ್ತಿಯನ್ನು ನನಗಾಗಿ ವೆಚ್ಚಮಾಡಬೇಡ ನಾನು ಯಾವುದಕ್ಕಾಗಿ ಜೀವಿಸಲಿ ? ಬದುಕಿದ್ದುಕೊಂಡು ಇನ್ನೊಬ್ಬರನ್ನು ಕಟ್ಟಿಕೊಂಡು ಸಾಯಲಾ ? ಬೇಡ, ಜುಲೇಕಾ "

" ಒಳ್ಳೇದು, ನೀನು ' ಜುಲೇಕಾ ' ಎಂದು ಕರೆ, ನಾನು ಬೇಡವೆನ್ನುವುದಿಲ್ಲ! ಕೋಪಿಸಿಕೊಳ್ಳುವುದಿಲ್ಲ! ನೀನು ನನ್ನ ಹೆಸರು ತೆಗೆದುಕೊ, ನಾನು ಸಿಟ್ಟಾಗುವುದಿಲ್ಲ! ನೀನು ಬೇಕಾದ ಹೆಸರಿನಿಂದ ನನ್ನನ್ನು ಸಂಬೋಧಿಸಬಲ್ಲೆ! ಶಮಶೇರ! ನೀನು ನನ್ನನ್ನು ಬದುಕಿಸೆಂದು ಏಕೆ ಹೇಳುವುದಿಲ್ಲ ನನಗೆ ? ನನ್ನ ಮೇಲಧಿಕಾರಿಗಳು ಯಾರೂ ಇಲ್ಲ; ನಾನು ನಿನ್ನನ್ನ ಬದುಕಿಸುವೆ, ನೀನು ಬದುಕುವೆ ನೀನು ಸಾವನ್ನೇಕೆ ಬಯಸುವೆ ? "

" ನಾನು ಅದನ್ನೂ ಬಯಸುವುದಿಲ್ಲ "

“ ಬೇಡ, ಶಮಶೇರ, ಬೇಡ ಏನನಾದರೂ ಬಯಸು; ಯಾರನ್ನಾದರೂ ಬಯಸು, ಏನನಾದರೂ ಮಾಡು; ಆದರೆ ಬಯಸು, ಬಯಕೆಯೆ ಜೀವನ ! ”

“ ಅದಕ್ಕೋಸ್ಕರವೆ ನನಗಾಗಿ ಸಾವಿದೆ ”

“ ಸಾವಿನ ಮಾತುಗಳನ್ನಾಡಬೇಡ ಶಮಶೇರ, ನಿನಗೆ ಗೊತ್ತಿದೆ ನನಗೆ ಗೊತ್ತಿಲ್ಲ ಆದರೆ ನೀನು ಬದುಕಿರು ಮತ್ತು ಗೆಪೆ ಜೀವಿಸಲಿಕ್ಕೂ ಗೆಡೆಯಲಿಕ್ಕೂ ನಿನಗಾರೂ ಇಲ್ಲದಿದ್ದರೆ, ನಾನು ... ”

“ತಾಳು ಜುಲೇಕಾ ! ನಾನು ಗಲ್ಲಿಗಾಗಿ ಜೀವಿಸಿರುವೆ, ಗಲ್ಲಿಗಾಗಿ ಸೋತುಹೋಗಲು ? ”

“ ಹಾಗಲ್ಲ ! ನೀನು ಬಹಳ ಕೆಟ್ಟ ಮನುಷ್ಯ .. ನಿನಗೆ ಗೊತ್ತಿಲ್ಲವೇನು ನಾನು ‘ ಜುಲೇಕಾ ’ ಎಂದು ? ನಿನಗೆ ಗೊತ್ತಿದೆ ನೀನು ಮತ್ತಾರಿಗೋಸ್ಕರವಾಗಿಯೂ ಏನನೂ ಮಾಡಲಾರೆಯಾ ? ನೋಡು, ವಿಚಾರಮಾಡಿ ಹೇಳು ! ಮತ್ತಾರಿಗೋಸ್ಕರವಾಗಿಯೂ ಜೀವಿಸಲಾರೆಯಾ ? ”

“ ಮತ್ತಾರಿಗೋಸ್ಕರ ? ”

“ ಯಾರಿಗೋ ಸ್ಕರ ”

“ ಇಲ್ಲ ”

“ ನೀನು ಸಾಯುವೆ ”

‘ ಸಿದ್ಧನಿರುವೆ ”

* * *

ಜುಲೇಕಾ ಹೊರಟುಹೋದ ಮೇಲೆ ಎರಡು ಗಂಟೆಕಾಲ ಕಳೆದು ಹೋದ ಬಳಿಕ, ಬಂದೂಕು ಸಂಗೀನುಗಳಿಂದ ಸಜ್ಜಿತರಾಗಿ ಅನೇಕ ಸಿಪಾಯರು ಬಂದು, ಶಮಶೇರನನ್ನು ಸೆರೆಹಿಡಿದರು ಫೇರಿಶ್ ಸಾಹೇಬರು ಗರ್ವದಿಂದ ಶಮಶೇರನನ್ನು ಹಿಡಿದುಕೊಂಡು ಹೊರಟಿದ್ದರು ಆಗ ಅವರ ಮೀಸೆಯ ಒಂದೊಂದು ಕೂದಲೂ ನಿಮಿರಿ ನಿಂತಿದ್ದಿತೆಂದು ನೋಡಿದವರು ಹೇಳುತ್ತಿದ್ದರು.

* * *

ಅವಕಾಶ ಸಿಕ್ಕೊಡನೆಯೆ ಜುಲೇಕಾ ಕೇಳಿದಳು "ಪಾಪಾ (ತಂದೆ), ಶಮಶೇರನನ್ನು ಸೆರೆಹಿಡಿದಿರೇನು ?"

"ಹಿಡಿಯದೆ ಏನು ! ಬಿಡುವೆನೆ ?"

"ಪಾಪಾ, ಎಂದಿನಿಂದ ನಿಮಗೆ ಅವನ ಪರಿಚಯವಿದೆ ?

"ಹತ್ತು ವರ್ಷಗಳಿಂದ."

"ಅದು ಹೇಗೆ ಪಾಪಾ ?"

"ಉಹುಂ !"

"ಹೇಳುವದಿಲ್ಲವೆ ಹಾಗಾದರೆ ?"

"ಜುಲೀ, ನೀನು ಬಹಳ ಹಟಮಾರಿ !"

"ನಾನು ತಿಳಿದುಕೊಳ್ಳಲಪೇಕ್ಷಿಸುತ್ತೇನೆ"

"ಅದೇತಕ್ಕೆ ?"

"ಅದೇತಕ್ಕೋ ಇರಲಿ ಹೇಳಿರಿ ಪಾಪಾ"

"ಒಮ್ಮೆ ನಾನು ದರೋಡೆಖೋರರ ಕೈಯಲ್ಲಿ ಸಿಕ್ಕೆ ಆಗ ನೀನೂ ನನ್ನ ಸಂಗಡ ಇದ್ದೆ ಆಗ ನಾನು ಠಾಣೇದಾರನಾಗಿದ್ದೆ; ದರೋಡೆಖೋರರಿಗೆ ನಾನು ಬೆಲೆಯುಳ್ಳ ಪ್ರಾಣಿಯಾಗಿದ್ದೆ ದುಷ್ಟರು ನನ್ನನ್ನು ಕೊಂದೇ ಬಿಡುತ್ತಿದ್ದರು ಅಷ್ಟರಲ್ಲಿ ಶಮಶೇರ ಬಂದ, ಅವನು ಅವರ ಸರದಾರನಾಗಿದ್ದ ಅವನು ನಮ್ಮನ್ನು ಬದುಕಿಸಿದ ಆಗ ನನಗೆ ಕಾಲು ಗಾಯವಾಗಿ ನಡೆಯಲಿಕ್ಕೆ ಬರುತ್ತಿದ್ದಿಲ್ಲ ನಡೆಯಲು ಬರುವ ವರೆಗೆ ಆತನ ಶುಶ್ರೂಷೆ ಹೊಂದುತ್ತಿದ್ದೆ ಹೀಗೆ ನಾವಿಬ್ಬರೂ ಆತನ ಅತಿಥಿಗಳಾಗಿದ್ದೆವು ಅದೆಷ್ಟೋ ದಿವಸ ಶಮಶೇರ ನನ್ನನ್ನು ಅನೇಕ ವಿಷಯಗಳ ವಿಚಾರವಾಗಿ ವಿಚಾರಿಸಿ ವಿಚಾರಿಸಿ ತೊಂದರೆ ಕೊಡುತ್ತಿದ್ದ. ಇವನನ್ನು ಹಿಡಿದುಕೊಟ್ಟರೆ ನನಗೆ ಬಹಳ ಕೀರ್ತಿ ಬರುವುದೆಂದು ಆಗಲೇ ತಿಳಿದಿದ್ದೆ ದುಷ್ಟನಾದರೂ ಸಜ್ಜನರಂತೆ ಮಾತನಾಡುತ್ತಾನೆ !"

*    *    *

ಸೆರೆಮನೆಯ ಅಧಿಕಾರಿಗಳೂ ಕೈದಿಗಳೂ ಬಹಳ ತತ್ಪರತೆಯಿಂದ ಕೆಲಸಮಾಡುತ್ತಿದ್ದಾರೆ ಸೆರೆಮನೆಯ ಒಳಅಂಗಳದ ಒಂದು ಮೂಲೆ-

ಯಲ್ಲಿ ಒಂದು ಕಟ್ಟೆಯಿದೆ ಅದರ ಮೇಲ್ಭಾಗ ಕಟ್ಟೆಗೆಯಿಂದ ಮಾಡಿ-ದುದಾಗಿದೆ ಅದರ ಎರಡೂ ಬದಿಗಳಿಗೆ ಕಬ್ಬಿಣದ ಎರಡು ಕಂಬಗಳನ್ನು ನಿಲ್ಲಿಸಲಾಗಿದೆ ಅವು ಸುಮಾರು ಏಳು ಅಡಿ ಎತ್ತರವಾಗಿರಬಹುದು ಅವುಗಳ ಮೇಲೆ ಅಡ್ಡವಾಗಿ ಇನ್ನೊಂದು ಕಬ್ಬಿಣದ ಕಂಬವನ್ನು ಇಡಲಾಗಿದೆ ಅದಕ್ಕೆ ಮಧ್ಯದಲ್ಲಿ ಒಂದು ಗಡಗಡೆಯನ್ನು ಹಚ್ಚಲಾಗಿದೆ

ಇದೇ ಫಾಂಸಿ !

ಈ ಕಬ್ಬಿಣದ ಫಾಂಸಿಯನ್ನು ತಿಕ್ಕಿತಿಕ್ಕಿ ಸ್ವಚ್ಛ ಮಾಡುತ್ತಿ-ದ್ದಾರೆ ಕೈದಿಗಳು ಫಾಂಸೀ ಎಂದರೇನೆಂಬುದನ್ನು ಕೈದಿಗಳಿಗಿಂತ ಅಧಿಕವಾಗಿ ಯಾರು ಅರಿಯಬಲ್ಲರು ? ಕೈದಿಗಳು ತಮ್ಮ ಪರಿಶ್ರಮ-ದಿಂದ ಅದನ್ನು ಸ್ವಚ್ಛಮಾಡುತ್ತಿದ್ದಾರೆ ಮತ್ತು ನಗುತ್ತಿದ್ದಾರೆ ಈವೊತ್ತು ಅದರ ಉಪಯೋಗವಾಗುವುದು ಈವೊತ್ತು ಅದು ಹಾವಿನಂತೆ ಹೊಳೆಯುತ್ತಿರಬೇಕು

ಫಾಂಸಿಯ ಹೊಸ ಇತಿಹಾಸವಿಷ್ಟು ಇದೆ ರಾಷ್ಟ್ರಸಂಘದ ಸಭೆಯಲ್ಲೊಂದು ದಿನ ‘ ಫಾಂಸಿಯು ಹೇಗಿರಬೇಕು ? ಯಾವ ಯಂತ್ರವು ಹೆಚ್ಚು ಉಪಯುಕ್ತವಾದುದು ? ’ ಎಂಬ ವಿಷಯವನ್ನು ಕುರಿತು ಚರ್ಚೆ ನಡೆದಿದ್ದಿತು ವಿಧಾನವನ್ನರಿಯದವರು ಫಾಂಸಿಯು ಇರಲೇ ಕೂಡದೆಂದು ಹೇಳಲಿಕ್ಕೆ ಎದ್ದುನಿಂತರು ಅವರನ್ನು ‘ ಪಾಯಿಂಟ್ ಆಫ್ ಆರ್ಡರ್ ’ ದಿಂದ ಕುಳ್ಳಿರಿಸಲಾಯಿತು ಏಕೆಂದರೆ ಅವರ ಮಾತು ಅಸಂಗತವಿದ್ದಿತು ಫಾಂಸಿಯ ವಿಷಯದಲ್ಲಿ ಅವರ ಅಭಿಪ್ರಾಯ ತೆಗೆದುಕೊಳ್ಳುವುದಿರಲಿಲ್ಲ ಫಾಂಸೀ ಇರಬೇಕೆನ್ನುವುದು ನಿರ್ಣಯಿಸಲ್ಪಟ್ಟ ವಿಷಯ. ಫಾಂಸಿಯು ಇದ್ದೇ ಇರುವುದು. ಆದರೆ ಎಂತಹದಿರಬೇಕೆಂಬುದು ವಿಷಯವಾಗಿದ್ದಿತು ಈ ವಿಷಯವಾಗಿ ಭಾವಪೂರ್ಣ, ಸಂಶೋಧನಪೂರ್ಣ, ಜ್ಞಾನಪೂರ್ಣ ಭಾಷಣಗಳೂ ಆಗಿದ್ದುವು. ಪ್ರಾಣವನ್ನು ಕಳೆಯುವುದಕ್ಕೆ ಯಾವುದರಿಂದ ಹೆಚ್ಚು ವೇಳೆ ತಗಲುತ್ತದೆ? ಪ್ರಾಣಹೋಗುವುದು ದಯೆಗೆ ವಿರುದ್ಧವಾದುದಲ್ಲ, ಫಾಂಸಿಯ ಹಳೆಯ ರೂಢಿಯಾವುದು ? ಹೊಸದು ಯಾವುದು? ಇವೆರಡರಲ್ಲಿಯೂ ಇರುವ ವ್ಯತ್ಯಾಸಗಳೇನು? ಫಾಂಸಿಯ ರೀತಿಗಳಲ್ಲಿ

ವಿಕಾಸವು ಹೇಗಾಗುತ್ತ ಬಂದಿದೆ? ಹೆಚ್ಚು ವೆಚ್ಚದ ಫಾಂಸಿಯು ಯಾವುದು? ಕಡಿಮೆ ವೆಚ್ಚದ ಫಾಂಸಿಯಾವುದು?—ಏಕೆಂದರೆ ಸರಕಾರಕ್ಕೆ ಖರ್ಚಿನ ಚಿಂತೆ ಹೆಚ್ಚಿಗೆ ಇರುತ್ತದೆ — ಮೊದಲಾದ ಅಸಂಖ್ಯ ದೃಷ್ಟಿಬಿಂದುಗಳಿಂದ ವಿವೆಚನೆಯಾಗಿದ್ದಿತು

ಆ ವಿವೇಚನೆಯ ಪರಿಣಾಮ-ಸ್ವರೂಪವಾಗಿ ಎಲ್ಲಕ್ಕೂ ಹೆಚ್ಚು ಉಪಯುಕ್ತವಾದ ಈ ಕಬ್ಬಿಣದ ಘೋಷಣಯಂತ್ರವು ನಿಂತಿದೆ ಈವೊತ್ತು ಅದನ್ನೇ ತಿಕ್ಕಿತಿಕ್ಕಿ ಸ್ವಚ್ಛ ಮಾಡುತ್ತಿದ್ದಾರೆ

ಇಲ್ಲೊಂದು ಮಾತನ್ನು ಹೇಳಬಯಸುತ್ತೇವೆ ಫಾಂಸಿಗೆ ಹೋದವರ ಒಬ್ಬ ಪ್ರತಿನಿಧಿಯೂ ಆ ಸಭೆಯಲ್ಲಿ ಇರಬೇಕಾಗಿದ್ದಿತು, ತರ್ಕದಿಂದ ಫಾಂಸಿಯು ಹೇಗಿರಬೇಕೆಂಬುದನ್ನು ಹೇಳುವುದಕ್ಕಲ್ಲ, ಫಾಂಸಿ ಹೋಗಿ ಫಾಂಸಿ ಹೇಗಿರಬೇಕೆಂಬುದನ್ನು ಅನುಭವದಿಂದ ಹೇಳು-ವುದಕ್ಕೆ

* * *

ಜೇಲ್ ಸುಪರಿಂಟೆಂಡೆಂಟ್, ಜೇಲರ್, ಕೊಲೆಗಡಕ, ಯುರೋ-ಪಿಯನ್ ಹಾಗೂ ಇಂಡಿಯನ್ ಉಚ್ಚ ಅಧಿಕಾರಿಗಳು ಕೆಲವರು ಫಾಂಸಿಯ ಯಂತ್ರವನ್ನು ಪರೀಕ್ಷಿಸಿ ನೋಡಲು ಬಂದಿದ್ದಾರೆ

ಕೊಲೆಗಡಕ ಫಾಂಸಿಯ ಹುರಿಯನ್ನು ಗಡಗಡೆಯಲ್ಲಿ ಹಾಕು-ತ್ತಾನೆ, ಹುರಿಯು ತೀರ ಹೊಸದು ಪ್ರತಿಯೊಂದು ಸಲ ಹೊಸ ಹುರಿಯನ್ನೆ ಉಪಯೋಗಿಸಲಾಗುತ್ತದೆ ಆ ಹುರಿಗೆ ಒಂದು ಭಾರ-ವಾದ ಉಸುಬಿನ ಚೀಲವನ್ನು ಕಟ್ಟಲಾಗಿದೆ

ಯಂತ್ರವು ತಿರುಗಿತು! ಕಟ್ಟೆಯ ಮೆಲಿನ ಕಟ್ಟಿಗೆಗಳು ಇಬ್ಭಾಗ-ವಾಗಿ ಕೆಳಗೆ ಮಡಿಸಿಕೊಂಡವು ಚೀಲವು ಕೆಳಗೆ ಆಳವಾದ ಅಂಧ ಕಾರಮಯವಾದ ತಗ್ಗಿನಲ್ಲಿ ನೇತಾಡತೊಡಗಿತು

ಎಲ್ಲರೂ ಒಂದೇ ಸ್ವರದಲ್ಲಿ ನುಡಿದರು "ಸರಿಯಾಗಿದೆ!"

* * *

ಶಮಶೇರನ ಕೈಗಳನ್ನು ಹಿಂದೆ ಕಟ್ಟಲಾಗಿದೆ ಸಂಗೀನುಗಳ ಪಹರೆಯಲ್ಲಿ ಅವನನ್ನು ಫಾಂಸಿಯ ಕಟ್ಟೆಗೆ ತರುತ್ತಿದ್ದಾರೆ.

ನೋಡಲು ಬಂದವರ ಸಂಖ್ಯೆ ಈವಾಗ ಸ್ವಲ್ಪ ಹೆಚ್ಚಾಗಿದೆ ಯುರೋಪಿಯನ್ ಮಹಿಳೆಯರ ಸಂಖ್ಯೆಯೆ ಮಿತಿಮೀರಿದ್ದಿತೆನ್ನಬಹುದು ಆ ಮಹಿಳೆಯರಲ್ಲಿ ಜುಲೀ ರಿಬೆಕಾ (Julie Rebecca) ಅಥವಾ ಜುಲೇಕಾ ಒಬ್ಬಳೇ ಒಬ್ಬ ಭಾರತೀಯ ಮಹಿಳೆಯು

ಪ್ರೇಕ್ಷಕರಲ್ಲಿ ನಮಗೆ ಪರಿಚಿತರಾದವರು ಇನ್ನೊಬ್ಬರಿದ್ದಾರೆ. ಅವರು ಕರ್ನಲ್ ಗ್ರೇಟ್‌ಹಾರ್ಟ್ ಸಾಹೇಬರು ಬರ್ಮಾದಿಂದ ಶಮಶೇರನ ವಿಷಯವಾಗಿ ಎಲ್ಲ ಸಮಾಚಾರವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು ಈವೊತ್ತು ಅಂತಿಮ ದರ್ಶನಕ್ಕಾಗಿ ಇಲ್ಲಿಗೆ ಬಂದಿದ್ದಾರೆ ಅವರ ಕೈಯಲ್ಲಿ ಒಂದು ಕೆಮರಾ ಇದೆ

ಶಮಶೇರ ತಾನಾಗಿಯೆ ಫಾಸಿಯ ಕಟ್ಟೆಯನ್ನೇರುತ್ತಾನೆ ಅಳುತ್ತಲೂ ಇಲ್ಲ, ನಗುತ್ತಲೂ ಇಲ್ಲ ಆಗುಹೋಗುಗಳ ಕಡೆ ಲಕ್ಷ್ಯವೆ ಇರಲಿಲ್ಲವೇನೊ, ಅವನ ಹೃದಯದಲ್ಲಿ ಹಣಗಾಟವಿರಲಿಲ್ಲವೇನೊ!

ಯುರೋಪಿಯನ್ ರಮಣಿಯರು ನೋಡುತ್ತಿದ್ದರು, ತಮ್ಮ ತಮ್ಮಲ್ಲಿ ತಮಾಷೆಮಾಡಿಕೊಂಡು ನಗುತ್ತಿದ್ದರು ಯುರೋಪಿಯನ್ನರೂ ತಮಾಷೆಮಾಡಿ ಆನಂದಿಸುತ್ತಿದ್ದರು!

ಜುಲೀ ಒಂದು ಸಲ ಶಮಶೇರನನ್ನು ನೋಡಿದಳು ಆ ಮೇಲೆ ನೋಡಲಿಲ್ಲ ಕರ್ನಲ್ ಸಾಹೇಬರ ಬಳಿಗೆ ಬಂದು ಕುಳಿತು, ಅವರೊಡನೆ ಮಾತನಾಡತೊಡಗಿದಳು ಕರ್ನಲ್ ಸಾಹೇಬರೊಬ್ಬರೆ ರೆಪ್ಪೆ ಹಿಳುಕಿಸದೆ ಶಮಶೇರನ ಕಡೆ ನೋಡುತ್ತಿದ್ದಾರೆ

ಸುಪರಿಂಟೆಂಡೆಂಟ್ ಸಾಹೇಬರು ಕೇಳಿದರು "ತಯಾರಿದ್ದೀಯೇನು ಶಮಶೇರ?"

"ಹೂಂ"

"ಕೊನೆಯ ಕಾಲ ಏನಾದರೂ ಬಯಕೆಯಿದೆಯೆ?"

"ಸ್ವಲ್ಪ ನೀರು ಬೇಕು!"

"ಮತ್ತೇನೂ ಬೇಡ?"

"ಬೇಡ!"

ಚಟ್ಟನೆದ್ದವಳೆ ಬುಲೀ ಆ ಝಾಂಸಿಯ ಕಟ್ಟೆಯ ಬಳಿಗೆ ಹೋದಳು; ಕೂಗಿ ಕೇಳಿದಳು. "ಮತ್ತೇನೂ ಬೇಡವೇ?—ಶಮಶೇರ! ಮತ್ತೇನೂ ಬೇಡವೇ? "

"ಮತ್ತೇನು ಬುಲೀಕಾ?"

"ಮತ್ತೇನೂ ಬೇಡ? ಸಾಯುವ ಕಾಲಕ್ಕಾದರೂ ಮತ್ತೇನೂ ಬೇಡವೇ?"

"ಬೇಡ!..."

"ಸ್ವಲ್ಪ ಪ್ರೀತಿ "

"ಬುಲೀಕಾ! .ಏನೆನ್ನುತ್ತಿದ್ದೀಯೆ!"

"ಸ್ವಲ್ಪ ನೀರ ಸ್ವಲ್ಪ ಪ್ರೀತಿ "

"ಚಿಃ!"

"ಒಳ್ಳೆಯದು, ಕೊನೆಯ ಮಾತು! ಅದಕ್ಕೆ ಉತ್ತರ ಕೊಡು ನೀನೇಕೆ ಮದುವೆ ಮಾಡಿಕೊಳ್ಳಲಿಲ್ಲ?"

"ಬುಲೀಕಾ, ಕಾದಂಬರಿಯಂತಾಗಬೇಡ ಅದರಲ್ಲೇನೂ ಇಲ್ಲ"

ಬುಲೀಕಾ ಸೋತಳು, ಮೂರ್ಛಿತಳಾದಳು ಅಲ್ಲಿಂದ ಅವಳನ್ನು ಎತ್ತಿಕೊಂಡು ಹೋದರು

ಇಂಗ್ಲಿಷರು, ಇಂಗ್ಲಿಷ್ ಮಹಿಳೆಯರು ಮೊದಲಾದವರು ಈ ಘಟನೆಯಿಂದ ಆನಂದಹೊಂದಿದರು. ಕರ್ನಲ್ ಸಾಹೇಬರು ಮಾತ್ರ ನೋಡುತ್ತಿದ್ದರು

ನೀರು ಬಂದಿತು. ಶಮಶೇರ ಕುಡಿದ

ಕೊಲೆಗಡಕನು ಹುರಿಯನ್ನು ಶಮಶೇರನ ಕುತ್ತಿಗೆಗೆ ಹಾಕಿದನು ಕರ್ನಲ್ ಸಾಹೇಬರು ತಮ್ಮ ಕೆಮರಾ ಹೊರಗೆ ತೆಗೆದರು.

ಶಮಶೇರನನ್ನು ಕೊಲ್ಲುವ ತಯಾರಿಯಾಯಿತು ಶಮಶೇರನು ತಾನೇ ಹುರಿಯನ್ನು ಜಗ್ಗಿಕೊಳ್ಳುವೆನೆಂದ. ಅದಕ್ಕೆ ಒಪ್ಪಿಗೆಯನ್ನೂ ಕೊಡಲಾಯಿತು

ಕರ್ನಲ್ ಸಾಹೇಬರು ಬಂದು 'ಸ್ನ್ಯಾಪ್‌ಶಾಟ್' (ಫೋಟೋ) ತೆಗೆದುಕೊಂಡರು

"ಕರ್ನಲ್ ಸಾಹೇಬರೆ, ನಾನು ಉತ್ತೀರ್ಣನಾದೆನೊ?" ಕೇಳಿದ ಶಮಶೇರ

ಕರ್ನಲರ ಕಣ್ಣೊಳಗಿಂದ ಹೊರಬರಬೇಕೆಂದಿದ್ದ ಕಂಬನಿಗಳು ಹೇಳದೆಕೇಳದೆ ಮೆಲ್ಲಗೆ ಹೊರಬಿದ್ದು ಬಂದು ಕೇಯೋದಲ್ಲಿ ಬಿದ್ದುವು!

"ಕರ್ನಲ್, ನೀವು 'ಫೇಲ್' (ನಾಪಾಸ್) ಆಗುತ್ತಿದ್ದೀರಾ?" ಎಂದ ಶಮಶೇರ

ಕರ್ನಲ್ ಸಾಹೇಬರಿಗೆ ಬಹಳ ನಾಚಿಕೆಯಾಯಿತು, ದೊಡ್ಡ ಅಳುವೂ ಬಂದಿತು.

ಆ ಯಂತ್ರವು ತಿರುಗಿತು ಕಟ್ಟಿಗೆಯ ಹಲಗೆಗಳು ಕೆಳಗೆ ಹೋದವು ಶಮಶೇರ ಆ ಕತ್ತಲೆಯ ಕುಣಿಯಲ್ಲಿ ತೂಗಾಡತೊಡಗಿದ

ಎರಡೆರಡು ಗಂಟೆಗಳ ಕಾಲ ಅಲ್ಲಿ ಹೆಣವು ತೂಗಾಡಿದ ಮೇಲೆ ಹೊರಗೆ ತೆಗೆಯಲಾಗುತ್ತದೆಯಂತೆ!

* * *

ಬಾಲೇಕಾ ತೀರ ಬದಲಾಗಿದ್ದಾಳೆ ಕರಗಿ ಕರಗಿ ನೀರಾಗಿದ್ದಾಳೆ ಆ ನೀರು ಕಣ್ಣೊಳಗಿಂದ ಹರಿದುಹೋಗುತ್ತಲೇ ಇದೆ, ನಿಲ್ಲಲೊಲ್ಲದು ಹೀಗೆಯೆ ಕಡೆತನಕ ಹರಿಯುತ್ತಿರುವುದೋ ಏನೊ!

ಅಧಿಕಾರಿಗಳು ತತ್ಪರತೆಯಿಂದ ಕೆಲಸಮಾಡುತ್ತಿರುವರು

ಸಜನಸಿಂಹನಿಗೆ ಒಂದು ಕಾಸೂ ಸಿಕ್ಕಲಿಲ್ಲ ಎಲ್ಲ ಹಣ ಫೇರಿಶ್ ಸಾಹೇಬರ ಮತ್ತು ಅವರ ಗೆಳೆಯರ ಜೇಬಿಗೆ ಹೊರಟುಹೋಗಿದೆ.

ಕರ್ನಲ್ ಸಾಹೇಬರು ನೌಕರಿಯನ್ನು ಬಿಟ್ಟುಬಿಟ್ಟಿದ್ದಾರೆ ಅವರ ಮನೆಗೊಂದು ಬಾರಿ ಹೋಗಿದ್ದೆವು ಫಾಂಸೀ ಹೋಗುವಾಗ ತೆಗೆದುಕೊಂಡ ಶಮಶೇರನ ಫೋಟೋದ ಎದುರಿಗೆ ನಿಂತುಕೊಂಡು ಎನ್ನುತ್ತಿದ್ದರು "ಶಮಶೇರ! ನಾನು ನಿನಗೊಂದು ದಿನ ಧೈರ್ಯದ ಉಪದೇಶ ಮಾಡಿದ್ದೆ ನಾನು! ನಿನಗೆ!! ಅದೆಂತಹ ನನ್ನ ಅಹಂಕಾರವಿದ್ದಿತು!"

ಇದನ್ನು ಕೇಳಿ ಅಲ್ಲಿ ನಿಲ್ಲಲಿಕ್ಕಾಗಲಿಲ್ಲ ನಮಗೆ ಕೂಡಲೆ ತಿರುಗಿ ಮನೆಗೆ ಹೊರಟುಬಂದೆವು.

---

# ತನ್ನದು-ಪರರದು   

ವಿಮಾನ, ರೈಲು ಇನ್ನೂ ಬಂದಿರಲಿಲ್ಲ, ಆಗಿನ ಮಾತಿದು ಆಗ ಭರದಿಂದ ಹೋಗುವ ವಾಹನವೆಂದರೆ ಕುದುರೆಯೊಂದೆ ಆಗಿದ್ದಿತು

ಸಿಪಾಯಿಯ ವೇಷಧರಿಸಿದ ಒಬ್ಬ ಪ್ರಯಾಣಿಕನು ಒಂದು ಧರ್ಮಶಾಲೆಯ ಬಳಿ ಕುದುರೆಯಿಂದಿಳಿದ ಕುದುರೆಯ ಮೈದಡವಿ ಧರ್ಮಶಾಲೆಯ ಒಳಕ್ಕೆ ಹೋದ ಅವನು ಬಹಳ ದೂರದಿಂದ ಬಂದಿದ್ದ, ದಣಿವೂ ಬಹಳವಾಗಿದ್ದಿತು, ಇಪ್ಪತ್ತುನಾಲ್ಕು ಗಂಟೆಯ ಕಾಲವನ್ನು ಮಾತ್ರ ಇಲ್ಲಿ ಕಳೆದು ಅವನು ಮುಂದೆ ಹೊರಡುವವ ಅವನು ತುಂಬ ದೂರ ಹೋಗಬೇಕಾಗಿದೆ

ಧರ್ಮಶಾಲೆಯನ್ನು ಕಾಯುವವನಿಗೆ ಕುದುರೆಯನ್ನು ಒಪ್ಪಿಸಿ, ಅದರ ದಾಣಿ, ಮೇವು, ನೀರು ಎಲ್ಲವುಗಳ ವ್ಯವಸ್ಥೆ ಮಾಡಬೇಕೆಂದೂ 'ನನಗೆ ವಿಶ್ರಾಂತಿ ಬೇಕಾಗಿದೆ, ಒಂದು ಒಳ್ಳೆಯ ರೂಮು ಬೇಕು' ಎಂದೂ 'ಹಣದ ಚಿಂತೆ ಮಾಡಬೇಡ' ಎಂದೂ ಹೇಳಿದ

ಕುದುರೆಯ ವ್ಯವಸ್ಥೆಯಾಯಿತು ಪ್ರಯಾಣಿಕನಿಗೆ ಒಂದು ಉತ್ತಮವಾದ ಕಿರುಮನೆಯು ದೊರೆಯಿತು ಸ್ನಾನ-ಊಟ ತೀರಿಸಿ-ಕೊಂಡು ಅವನು—ಹಾಯಾಗಿ ಮಂಚದ ಮೇಲೆ—ಒರಗಿದ.

ದಣಿವಾಗುದರಿಂದ ಬೇಗನೆ ನಿದ್ರೆಯೂ ಬಂದಿತು. ಅವನು ಸ್ವಪ್ನದಲ್ಲಿ ತನ್ನ ಸಂಸಾರವನ್ನು ನೋಡತೊಡಗಿದ. ಐದು ವರ್ಷಗಳ ಮೇಲೆ ಅವನು ಮನೆಗೆ ಹೋಗಿದ್ದಾನೆ. ಅವನ ಹೆಂಡತಿಗೆ ಈಗ ಕೆಲಸ ಬಹಳವಾಗಿ ಹೋಗಿದೆ ಪ್ರೇಮದಿಂದ ಮಾತನಾಡಲಿಕ್ಕೂ ಅವಳಿಗೆ ಸಮಯ ಸಿಕ್ಕದಾಗಿದೆ. ಏಕಾಂತವೂ ಅವಳಿಗೆ ಸಿಕ್ಕುತ್ತಿದ್ದಿಲ್ಲವೇನೋ!

ಅವನು ಸಾವಿರ ರೂಪಾಯಿಗಳಿಂದ ತುಂಬಿದ್ದ ಹಮ್ಮಿಣಿಯನ್ನು ತನ್ನ ಸೊಂಟಕ್ಕೆ ಕಟ್ಟಿಕೊಂಡಿದ್ದಾನೆ ಅದನ್ನು ಪ್ರಿಯಪತ್ನಿಗೆ ತೋರಿಸುವುದಕ್ಕೂ ಆಗಲೊಲ್ಲದು, ಅವಳು ಇಷ್ಟು ದಿವಸಗಳನ್ನು ಹೇಗೆ ಕಳೆದಳೆಂಬುದನ್ನು ಅವನು ಅರಿಯಲು ಬಯಸುತ್ತಾನೆ, ನೋಡಲು ಬಯಸುತ್ತಾನೆ, ಕಲ್ಪನೆಯಲ್ಲಿಯಾದರೂ ಸರಿಯೆ, ಆದರೆ ಅವನು ನೋಡಬಯಸುತ್ತಾನೆ: "ಸಂಕಟ ಸಮಯದಲ್ಲಿ ಅವಳಿಗೆ ತಾನು ಸಹಾಯಕನಾಗದೆ ಎಲ್ಲಿ ತಿರುಗುತ್ತಿದ್ದೆ? ಅವಳು ಹಣಕಾಸಿಲ್ಲದೆ, ಆಪ್ತರು ಇಷ್ಟರು ಮೊದಲಾದವರ ನೆರವಿಲ್ಲದೆ ಹೇಗೆ ಜೀವನವನ್ನು ಸಾಗಿಸುತ್ತಿರಬಹುದು?" ಎಂದು ೪-೪|| ವರ್ಷಗಳ ಕರನಸಿಂಹನನ್ನು ಎತ್ತಿಕೊಂಡ ತನ್ನ ಪತ್ನಿಯ ಮುಖವನ್ನು ಆಗಾಗ ನೋಡಬಯಸುತ್ತಾನೆ; ಆದರೆ ಸಮಯವೆ ಸಿಕ್ಕಲೊಲ್ಲದು! 'ಇವನೇ ಏನು ಕರನಸಿಂಹ? ಎಷ್ಟು ಬೇಗ ದೊಡ್ಡವನಾದನಲ್ಲ!' ಎಂದು ಕೇಳಲು ಬಯಸುತ್ತಾನೆ ಆ ಮೇಲೆ 'ನಿನ್ನ ಹೆಸರು ಹೆಸರೇನು? ಕರನಸಿಂಹ' ನಾನಾರು ಹೇಳು' ನಿಮ್ಮಪ್ಪನ ಹೆಸರು ಗೊತ್ತಿದೆಯೇನು? ನಿಮ್ಮಪ್ಪ ಯುದ್ಧಕ್ಕೆ ಹೋಗಿದ್ದಾನೆ. ಅವನ ಹತ್ತಿರದಿಂದಲೆ ನಾನು ಬಂದಿದ್ದೇನೆ ಅತನು ನಿನ್ನನ್ನು ಬಹಳ ಪ್ರೀತಿಸುತ್ತಾನೆ' ಎಂದು ತನ್ನ ಎರಡೂ ಕೈಗಳನ್ನು ಮುಂದೆ ನೀಡಿ, ತನ್ನ ಮಗನನ್ನು ಎತ್ತಿಕೊಳ್ಳಲು ಇಚ್ಛಿಸುತ್ತಾನೆ

ಒಮ್ಮೆಲೆ ನಿದ್ರಾಭಂಗವಾಗಿ ಹೋಯಿತು ಅವನು ಕಣ್ತೆರೆದ ಇನ್ನೂ ಬಹಳ ದೂರ ಹೋಗಬೇಕಾಗಿದ್ದಿತು ಅವನಿಗೆ ಆದರೂ ಧರ್ಮಶಾಲೆಯ ಕಿರುಮನೆಯಲ್ಲಿಯೆ ಇದ್ದಾನೆ ಇನ್ನೂ ಹಣೆಯನ್ನೊರಸಿಕೊಂಡು ಸೊಂಟಕ್ಕೆ ಕಟ್ಟಿಕೊಂಡ ಹಮ್ಮಿಣಿಯನ್ನು ಮುಟ್ಟಿ ನೋಡಿಕೊಂಡ ಸಮಯವು ಬೇಗಬೇಗ ಸಾಗುತ್ತಿಲ್ಲವೆಂಬಂತೆ ಎನಿಸುತ್ತಿದ್ದಿತು ಅವನಿಗೆ. ಮಾತನಾಡುವುದಕ್ಕೆಂದು ಯಾರೂ ಅವನ ಬಳಿಯಿರಲಿಲ್ಲ ಆದುದರಿಂದ ಧರ್ಮಶಾಲೆಯ ಕಾಪಿನಾಳನ್ನು ಕರೆದ. ತನ್ನ ಊರು ಇನ್ನೂ ಎಷ್ಟು ದೂರವಿರಬಹುದು?— ಎಂಬುದನ್ನು ಕೇಳಿ ತಿಳಿದುಕೊಂಡ. ಅಲ್ಲದೆ ಇತ್ತ ಕಡೆಯ ಅದೆಷ್ಟೋ ಸಂಗತಿ-

ಗಳನ್ನು ಕೇಳಿ ತಿಳಿದುಕೊಂಡ ತನ್ನ ಸೇನೆಯ ಯುದ್ಧದ ಸುದ್ದಿಗಳನ್ನೂ ಹೇಳಲು ತೊಡಗಿದ: "ಯುದ್ಧಭೂಮಿಯೆಂದರೇನು? ಪ್ರತಿ ನಿಮಿಷಕ್ಕೂ ಸಾವು ಬಂದು ತಬ್ಬಿಕೊಳ್ಳುವ ಭೂಮಿಯದು ಕ್ಷಣಾರ್ಧದಲ್ಲಿ ಮಕ್ಕಳು-ಮರಿಗಳನ್ನು ದೂರದಲ್ಲಿ ಬೀಸಾಡಿ, ಯೋದ್ಧರ ಮತ್ತು ಅವರ ಸಂತತಿಯ ನಡುವೆ ಅನಂತವಾದ ಅಂತರವನ್ನು ಉಂಟುಮಾಡುವ ಭೂಮಿಯದು ಅಲ್ಲಿ ಸೈನಿಕರಿಗೆ ಬಹಳ ಆನಂದವಿರುತ್ತದೆ, ಆದರೆ ಆ ಆನಂದ ಕಹಿತನದಿಂದ ಕೂಡಿದ ಆನಂದ. ಅಲ್ಲಿ ನಾವು ಹೇಗೆ ಜನರನ್ನು ಕೊಲ್ಲುತ್ತೇವೋ, ಮಕ್ಕಳು-ಮರಿಗಳನ್ನು ಬಿಟ್ಟು ಹೇಗೆ ಸಾಯುತ್ತೇವೋ ತಿಳಿಯದು ಸಾಯುವುದು ಸಂತೋಷಕರವಾದುದೆ? ಅಲ್ಲ! ನಮಗೆ ಸಾವು ಎಷ್ಟು ಕಠಿನವೆಂದೂ ಭಯಾನಕವೆಂದೂ ಎನಿಸುವುದೋ ಅಷ್ಟೇ ಕಠಿನವಾಗಿಯೂ ಭಯಾನಕವಾಗಿಯೂ ನಮ್ಮ ಹೊಡೆತದಿಂದ ಸಾಯುತ್ತಿರುವವರಿಗೂ ಎನಿಸುತ್ತಿರಬಹುದು ಆದರೂ ಅವರನ್ನು ಕೊಲ್ಲುವುದರಲ್ಲಿ ನಮಗೇಕೆ ಅಷ್ಟೊಂದು ಆನಂದವುಂಟಾಗುವುದೋ! ನಮ್ಮ ಸಾಧಾರಣವಾದ ಜೀವನದಲ್ಲಿ ಕೊಲ್ಲುವುದೆಂದರೆ ನಾವು ಹೆದರುತ್ತೇವೆ, ಆದರೆ ಯುದ್ಧಭೂಮಿಯಲ್ಲಿ ಹೆದರಿಕೆಯೆಂದರೆ ಕೇಳಬೇಡ, ಎಷ್ಟೆಷ್ಟು ಹೆಚ್ಚು ಜನರನ್ನು ಕೊಲ್ಲುತ್ತೇವೋ ಅಷ್ಟಷ್ಟು ಹೆಚ್ಚು ವೀರರೆನಿಸಿಕೊಳ್ಳುತ್ತೇವೆ, ಪಾರಿತೋಷಿಕಗಳನ್ನೂ ಪಡೆಯುತ್ತೇವೆ "

ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳತೊಡಗಿದ

" ಕೊಲ್ಲುವುದರಿಂದ ನನಗೇನೋ ಆನಂದವಾಗುವುದಿಲ್ಲ ಆದರೂ ನಾನು ಕೊಲ್ಲುತ್ತಿರುವುದನ್ನು ನೋಡಿ ಜನರು ನನ್ನನ್ನು ಹೊಗಳಿದಾಗ ಆನಂದವಾಗುತ್ತಿದ್ದಿತು. ನಮ್ಮ ಸೈನಿಕರಲ್ಲಿ 'ಯಾರು ಎಷ್ಟು ಜನರನ್ನು ಕೊಲ್ಲುತ್ತಾರೋ ನೋಡೋಣ' ಎಂಬ ಮೇಲಾಟವೂ ಇರುತ್ತಿದ್ದಿತು ಆ ಮೇಲಾಟದಲ್ಲಿ ಭಾಗ ತೆಗೆದುಕೊಳ್ಳುವಾಗ ಒಂದು ಬಗೆಯ ಆನಂದವುಂಟಾಗುತ್ತಿದ್ದಿತು. ನಿಜವಾಗಿಯೂ ನೋಡಿದರೆ ಆ ಆನಂದವು ನಿಜವಾದ ಆನಂದವೆನಿಸುತ್ತಿರಲಿಲ್ಲ....ವೈರಿಗಳೆಂಬವರು ಯಾರು?....ನನಗೆ ಗೊತ್ತಿಲ್ಲ. ಅವರು ನನಗೆ ವೈರಿಗಳಾದರೂ

ಏಕೆ ಆಗಬೇಕು? ನಾನು ಅನೇಕರನ್ನು ಕೊಂದೆ, ಅವರು ನನಗೇನು ಕೆಡುಕು ಬಯಸಿದ್ದರು? ವೈರಿಗಳು ವೈರಿಗಳೇ? . ಎಂಬುದು ನನಗೆ ಗೊತ್ತಿಲ್ಲ ಅವರಿಗೆ ನಾನು ಯಾವ ಕೆಡುಕನ್ನೂ ಬಯಸಿಲ್ಲ ಅವರೇಕೆ ನನ್ನ ಕುತ್ತಿಗೆಯನ್ನು ಕಡಿಯಲೆಂದು ಕೈಯಲ್ಲಿ ಕತ್ತಿಯನ್ನು ಹಿಡಿದುಕೊಂಡು, ನನ್ನ ಕಡೆಗೆ ಧಾವಿಸಿಬರುತ್ತಿದ್ದರು? ಅವರಿಗೆ ನಾನೇನೂ ಮಾಡಿರಲಿಲ್ಲ ನೋಡು, ಈಗ ನೀನೂ ಇದ್ದೀಯೆ, ನಾನೂ ಇದ್ದೇನೆ ಇಬ್ಬರೂ ಒಬ್ಬರನ್ನೊಬ್ಬರು ಕೊಲ್ಲಬಯಸುತ್ತಿಲ್ಲ, ಕುಳಿತುಕೊಂಡು ಸುಖವಾಗಿ ಮಾತನಾಡುತ್ತಿದ್ದೇವೆ 'ಕೊಲ್ಲುವ ಕೆಲಸವನ್ನೇ ನಿಮಗೆ ಕೊಟ್ಟು, ನಿಮ್ಮಿಂದ ಕೆಲಸ ಮಾಡಿಸಿಕೊಳ್ಳುತ್ತಾರೆ, ಅದಕ್ಕಾಗಿಯೆ ನೀವು ಕೊಲ್ಲಬೇಕಾಗುತ್ತದೆ' ಎಂದು ನೀನು ನನಗೆ ಹೇಳಬಹುದು ಒಪ್ಪಿಕೊಂಡೆ! ನೌಕರಿಗಾಗಿ ಕೊಲ್ಲಬೇಕಾಗುತ್ತದೆಯೆಂದು ಮನಸ್ಸಿಲ್ಲದೆ ಕೊಲ್ಲಬೇಕಾಗುತ್ತದೆ, ಕೊಲ್ಲುತ್ತೇವೆ, ನಿಜ! ಆದರೆ 'ಆ ಕೊಲೆಯಲ್ಲಿ ನಮಗೇಕೆ ಆನಂದವುಂಟಾಗುತ್ತದೆ? ಆ ಆನಂದವು ನಮಗೆ ಎಲ್ಲಿಂದ ಬರುತ್ತದೆ?' ಎಂಬುದು ತಿಳಿಯದ ಮಾತಾಗಿದೆ ಇದರ ರಹಸ್ಯವು ಎಲ್ಲಿಯಾದರೂ ಕಾಣದೆ ಅಡಗಿಕೊಂಡಿರಬೇಕು ಎಲ್ಲಿಯಾದರೂ ಮೋಸವಿರಬೇಕು, ದ್ವೇಷವಿರಬೇಕು! ಸೈನ್ಯದಲ್ಲಿ ಕೆಲಸ ಮಾಡಿ ಮಾಡಿ ಮನಸ್ಸು ಬೇಸತ್ತು ಹೋಗಿದೆ ಮಡದಿ ಮಕ್ಕಳ ಮಧ್ಯದಲ್ಲಿದ್ದು-ಕೊಂಡು, ಒಕ್ಕಲುತನಮಾಡಿ ಬೆಳೆ ಪಡೆದುಕೊಂಡು, ಅಲ್ಪ ಸಂತೋಷ-ದಿಂದ ಉಪಜೀವನಮಾಡಿಕೊಂಡಿದ್ದರೇನು ಕೆಡುಕೇ? ಅಲ್ಲ! ಎಂತಲೇ ನಾನು ಅಲ್ಲಿಂದ ಹೊರಟು ಬರಬೇಕೆಂದು ಬಹಳ ದಿನ-ಗಳಿಂದ ಯೋಚಿಸುತ್ತಿದ್ದೆ ಈಗ ಅದಕ್ಕೆ ಸಮಯ ಒದಗಿಬಂದಿತು."

ಧರ್ಮಶಾಲೆಯನ್ನು ಕಾಯುವವ "ಹೂಂ ಹೂಂ" ಎನ್ನುತ್ತ ಕೇಳುತ್ತಿದ್ದ ಹೀಗೆಯೆ ಸುಮ್ಮನೆ ಕೇಳುತ್ತ ಕುಳಿತರೆ ತನಗೇನಾದರೂ ಸ್ವಲ್ಪ ಸಂಭಾವನೆ ಸಿಕ್ಕಬಹುದೆಂದು ಅವನು ಬಗೆದಿದ್ದ ಅದಕ್ಕಾಗಿಯೆ ನಡುನಡುವೆ "ಹೂಂ, ಹೂಂ, ಹೌದರಿಯೆಪ್ಪಾ" ಎನ್ನುತ್ತಿದ್ದ.

"ನಾನು ನನ್ನ ಮಗುವನ್ನು ನೋಡಿಲ್ಲ ಇದುವರೆಗೂ ನಾನು ಯುದ್ಧಕ್ಕೆ ಹೋದ ಮೇಲೆ ಏನೇನಾಗಿದೆಯೊ! ಮನೆಯಾಕೆ ಅದೆಷ್ಟು

ಕಷ್ಟಪಟ್ಟಿರುವಳೊ! ನಾನು ಹೀಗೆ ಹಿಂದಿರುಗಿ ಬರುವೆನೆಂದು ಅವಳಿಗೆ ಹೇಗೆ ಗೊತ್ತಾಗಬೇಕು? ಯುದ್ಧಕ್ಕೆ ಹೋದವರ ಆಶೆಯನ್ನಾದರೂ ಹೇಗೆ ಹಿಡಿದಿರಬೇಕು ಅವಳು? ಹೌದೊ ಅಲ್ಲೋ ಏನಪಾ!"

"ಹೌದು, ಬುದ್ಧೀ!"

"ನೋಡು, ನೀನಿಲ್ಲ ಇರುತ್ತೀಯೆ! ನಿನಗೇತರ ಹೆದರಿಕೆ-ಯಿದೆ? ಯಾವ ಚಿಂತೆಯಿದೆ? ಮನೆಯನ್ನು ಬಿಟ್ಟು ನೂರಾರು ಮೈಲು ದೂರ ಹೋಗಬೇಕಾಗಿಲ್ಲ ಯಾರಲ್ಲಿಯೂ ಜೀತಮಾಡಬೇಕಾಗಿಲ್ಲ ಎರಡನೆಯವರ ಮನೆಯಲ್ಲಿ ಮೈತುಂಬ ದುಡಿದು, ಅವರ ಎದುರಿನಲ್ಲಿ ಅತಿವಿನೀತನಾಗಿದ್ದು ಒಂದಿಷ್ಟು ಹಣಗಳಿಸಿಕೊಂಡು ಮನೆಗೆ ಬಂದು ಶ್ರೀಮಂತನಂತೆ ವರ್ತಿಸುವುದರಲ್ಲಿ ಏನು ಸುಖವಿದೆಯಪ್ಪಾ! ಹೌದೋ ಅಲ್ಲವೋ ನೀನೇ ನೋಡು!"

ಪ್ರಯಾಣಿಕನ ಬಳಿಯಲ್ಲಿ ಹಣವು ಬಹಳವಾಗಿದ್ದಿತು ಆಶೆ ಆಕಾಂಕ್ಷೆಗಳೂ ಬೆಳೆದಿದ್ದುವು ಆದುದರಿಂದಲೆ ಅವನು ಈ ಧರ್ಮ-ಶಾಲೆಯ ಕಾವಲುಗಾರನ ಎದುರಿನಲ್ಲಿ ಈ ಬಗೆಯ ಮಾತುಗಳನ್ನಾ-ಡುತ್ತ ತನ್ನ ದೊಡ್ಡಸ್ತಿಕೆಯನ್ನು ತೋರಿಸುತ್ತಿದ್ದ ಈ ಬಗೆಯ ವ್ಯವಹಾರದಲ್ಲಿ ಅವನಿಗೊಂದು ಬಗೆಯ ಆನಂದವಾಗುತ್ತಿದ್ದಿತು ಆದುದರಿಂದಲೆ ಅವನು ತನ್ನ ಜೇಬಿನೊಳಗಿಂದ ಪಾವಲಿಯೊಂದನ್ನು ಹೊರದೆಗೆದು ಕಾವಲುಗಾರನಿಗೆ ಕೊಟ್ಟು "ತೆಗೆದುಕೊ ಇದನ್ನು! ನಿನ್ನ ಮಕ್ಕಳಿಗೆ ಏನನಾದರೂ ಮಿಠಾಯಿ ಕೊಂಡು ತಿನ್ನಿಸು! ಇಗೋ ನೋಡಿಲ್ಲಿ! ಬೆಳಗಾಗುವುದರೊಳಗೆ ಕುದುರೆಗೆ ದಾಣಿ ತಿನ್ನಿಸು, ಥಡಿ ಬಿಗಿದು ಕಟ್ಟಿ ತಯಾರುಮಾಡಿಡು! ಇನ್ನೂ ಐವತ್ತು ಹರದಾರಿ ದಾರಿಯನ್ನು ಹೋಗಬೇಕು"

ಧರ್ಮಶಾಲೆಯ ಕಾವಲುಗಾರ ಎದ್ದು ಮುಜುರೆ ಮಾಡಿ "ಅಪ್ಪಣೆ ದೇವರು!" ಎಂದ.

ಸಾಯಂಕಾಲವಾಯಿತು ಸಿಪಾಯಿ ಅತ್ತಿತ್ತ ಸ್ವಲ್ಪ ಅಲೆದಾಡಿದ ರಾತ್ರಿ ಊಟ ಮಾಡಿಕೊಂಡು, ಬೆಳಗಿನಲ್ಲಿ ಬೇಗನೆದ್ದು ಹೊರಡ-ಬೇಕೆಂದು ಯೋಚಿಸಿ, ಮಲಗುವ ಸಿದ್ಧತೆ ಮಾಡತೊಡಗಿದ.

* * *

ರಾತ್ರಿ, ಎಲ್ಲ ಕಡೆಗೂ ಶಾಂತತೆಯಿದ್ದಿತು ಅವನಿಗೆ ಗಾಢವಾದ ನಿದ್ರೆ ಬಂದಿದ್ದಿತು ಅಷ್ಟರಲ್ಲಿ ಒಂದು ವಿಘ್ನವುಂಟಾಯಿತು ಅದೆಲ್ಲಿಂದಲೊ ಹತ್ತಿರದಿಂದ ಒಂದು ಮಗು ಅಳುವುದು ಕೇಳಬಂದಿತು. ಆ ಮಗುವಿನ ತಾಯಿ ಮಗುವನ್ನು ಎಷ್ಟೆಷ್ಟೊ ರಮಿಸುತ್ತಿದ್ದಳು, ಆದರೆ ಆ ಮಗು ಸುಮ್ಮನಾಗುತ್ತಿರಲಿಲ್ಲ ಹಸಿವಾಗಿದ್ದಿತೋ, ಹಟಬಂದಿದ್ದಿತೋ! ತಾಯಿ ಒಮ್ಮೊಮ್ಮೆ ಜಬರಿಸುತ್ತಿದ್ದಳು, ಒಮ್ಮೊಮ್ಮೆ ರಮಿಸುತ್ತಿದ್ದಳು ಆದರೆ ಆ ಮಗು ಏನು ಮಾಡಿದರೂ ಸುಮ್ಮನಾಗುತ್ತಿರಲಿಲ್ಲ

ರಾತ್ರಿಯಲ್ಲಿ—ಇಂತಹ ಶಾಂತಸಮಯದಲ್ಲ ಒಂದೆ ಸಮನೆ ಆ ಮಗು ಅಳುವುದು ಪ್ರಯಾಣಿಕನಿಗೆ ಒಳಿತೆನಿಸಲಿಲ್ಲ ಆಗಲೇ ಹೆಂಡತಿಯನ್ನು ಕಾಣುವ ಸುಖಸ್ವಪ್ನವನ್ನು ಕಾಣುತ್ತಿದ್ದ ಆ ಸಿಪಾಯಿಗೆ, ಈ ಅಳುವು, ಮುಳ್ಳುಚುಚ್ಚಿದಂತೆ ಎನಿಸಿತು ಅದೇನು ಆ ಮಗುವಿನ ಅಳುವಿಕೆಗೆ ಒಂದು ಸ್ವರವಿದೆಯೆ? ತಾಲವಿದೆಯೆ? ಮಾಧುರ್ಯವಿದೆಯೆ? ಅದು ಅವನಿಗೆ ತೀರ ಕರ್ಕಶವಾಗಿ ಕೇಳಿಸಿತು ಅದನ್ನು ಸಹಿಸಿಕೊಂಡು ನಿದ್ರಿಸಬೇಕೆಂದ ಆದರೆ ಆ ಅಳುವಿಕೆಯಿಂದ ನಿದ್ರೆಯು ಹೊರಟು ಹೋಯಿತು ಪುನಃ ನಿದ್ರೆ ಬರಲೊಲ್ಲದು ಮಗುವಿನ ಅಳುವೂ ನಿಲ್ಲಲೊಲ್ಲದು ಕೊನೆಗೆ ಬೇಜಾರು ಬಂದು, ಆ ಧರ್ಮಶಾಲೆಯ ಕಾವಲುಗಾರನನ್ನು ಗಟ್ಟಿಯಾಗಿ ಕೂಗಿದ ಆ ಕಾವಲುಗಾರ ಅಂಜುತ್ತ ಅಂಜುತ್ತ ಬಂದ, ಅವನನ್ನು ಸಿಪಾಯಿಯು ಕೇಳಿದ "ಇದೇನಪ್ಪಾ ಇದು? ಕಿರುಚಾಟ!"

"ರಾಯರೆ, ಒಂದು ಮಗು "

"ಮಗೂ, ಇದ್ದರೇನಾಯಿತು? ಸುಮ್ಮನೇಕಾಗುವುದಿಲ್ಲ?"

"ಕಾಯಿಲೆಯಾಗಿರಬಹುದು "

"ಕಾಯಿಲೆಯಾದ ಮಗುವಿಗೆ ಇಲ್ಲೇಕೆ ಸ್ಥಳ ಕೊಟ್ಟೆ? ಆ ಮಗುವಿಗೆ ಕಾಯಿಲೆ ಏಕಾಯಿತು?"

ಕಾವಲುಗಾರ ಮಾತನಾಡಲಿಲ್ಲ

"ಆ ಮಗುವಿನ ಸಂಗಡ ತಾಯಿಯಿದ್ದಾಳೇನು?"

"ಹೌದು, ಇದ್ದಾಳೆ ರಾಯರೆ. ನಾಳೆ ಹೊರಟುಹೋಗುತ್ತೇನೆಂದು ಹೇಳುತ್ತಾಳೆ."

"ಮಗುವನ್ನು ಸುಮ್ಮಗೆ ಮಾಡಲು ಅವಳಿಗೆ ಹೇಳು, ಇಲ್ಲದೆ ಹೋದರೆ ನಮ್ಮ ನಿದ್ರೆಗೆ ಅಡಚಣೆಯಾಗುತ್ತದೆಂದು ಹೇಳು. ಹೋಗು ನಡೆ!"

ಸ್ವಲ್ಪ ಹೊತ್ತಿನಲ್ಲಿಯ ಕಾವಲುಗಾರ ಹೋಗಿ "ಹೇಳಿ ಬಂದೆ ರಾಯರೆ, ಮಗುವಿನ ಮೈಯಲ್ಲಿ ಚನ್ನಾಗಿಲ್ಲ, ಮೇಲಾಗಿ ಅದಕ್ಕೆ ಹಸಿವೂ ಆಗಿದೆ ಡಾಕ್ಟರರಿಗೂ ತಿಳಿಸಿದ್ದೇನೆ ಬೇಗನೆ ಸುಮ್ಮನಾದೀತು" ಎಂದ

ಆದರೆ ಮಗು ಸುಮ್ಮಗಾಗಲಿಲ್ಲ ಹಾಗೆಯೆ ಅಳುತ್ತಿದ್ದಿತು ಆ ಮಗು ಮತ್ತು ತಾಯಿಯ ಕಿರುಮನೆಯು ಆ ಸಿಪಾಯಿಯ ಕಿರು-ಮನೆಯ ಪಕ್ಕದಲ್ಲಿಯೆ ಇದ್ದಿತು ಮಗುವನ್ನು ಸಮಾಧಾನಮಾಡಲು ತಾಯಿಯು ಮಗುವಿಗೆ ಒಂದೆರಡು ಏಟುಗಳನ್ನು ಹಾಕಿದುದೂ ಅವನಿಗೆ ಕೇಳಿಸಿತು ಆದರೆ ಮಗುವು ಹೊಡೆತಕ್ಕೆ ಸುಮ್ಮಗಾಗದೆ ಇನ್ನಷ್ಟು ದೊಡ್ಡದಾಗ ಅಳಲುತೊಡಗಿತು

"ಸಾಯಿ, ಸತ್ತುಹೋಗು ಅಭಾಗೀ" ಎಂದು ತಾಯಿ ಹಿಂಜರಿಯುತ್ತಿದ್ದಳು

ಸಿಪಾಯಿಯು ನಿದ್ರಿಸಬೇಕೆಂದು ಯತ್ನಿಸಿದ ಆದರೆ ಆ ಮಗುವಿನ ಚೀರುವಿಕೆಯು ನಿಲ್ಲಲೇ ಇಲ್ಲ. ಮುಂದೆ ತಾಯಿಯೂ ಮಗುವಿನ ಜೊತೆಗೆ ದುಃಖಿಸತೊಡಗಿದಳು ಬಳಿಕ ಕೇಳಬೇಕೇನು? ಪ್ರಯಾಣಿಕನಿಗೆ ಸುಖವಾಗಿ ನಿದ್ರೆ ಬಂದೀತೇ? ಆ ಅಳುವನ್ನು ಸಹಿಸುವದಕ್ಕೆ ಆದೀತೇ? ಅವನು ಸಹಿಸಿ ಸಹಿಸಿ ಬೇಸತ್ತ ಮತ್ತೆ ಗಟ್ಟಿಯಾಗಿ ಕಾವಲುಗಾರನನ್ನು ಕೂಗಿ ಕರೆದು "ಏನಪ್ಪಾ ಹುಡುಗನ ಅಳುವಿಕೆ ಕಡಿಮೆಯಾಗಲೊಲ್ಲದಲ್ಲ! ಹೊರಗೆ ಹಾಕು ಅವರನ್ನು ಇಲ್ಲಿಂದ!" ಎಂದ

"ರಾಯರೆ, ಬಡವಿ! ಬೆಳಗಾಗುತ್ತ ಬಂದಿದೆ; ನಸುಕು ಹರಿಯುವುದರೊಳಗಾಗಿ ಅವಳು ಮಗುವನ್ನು ಕರೆದುಕೊಂಡು ಹೊರಟು

ಹೋಗುವಳು; ತಾವೂ ಹೋಗುವವರೇ ಇದ್ದೀರಿ. ಒಂದೆರಡುಗಂಟೆಗಳ ಕಾಲ. ”

“ ಊಹುಂ, ಅದೇನೂ ಕೇಳುವಹಾಗಿಲ್ಲ, ಕಾಯಿಲೆಯವರಿ-ಗೋಸ್ಕರವಾಗಿಲ್ಲ ಈ ಧರ್ಮಶಾಲೆ! ಹೇಳಿದಷ್ಟು ಕೇಳು! ಹೇಳು, ಹೋಗಲಿಕ್ಕೆ ಹೇಳು ಅವರಿಗೆ! ಈಗಿಂದೀಗಲೆ ಹೊರಟು ಹೋಗಲಿಕ್ಕೆ ಹೇಳು! ಜನರನ್ನು ಮಲಗಗೊಡದಲ್ಲವೇ ಕೂಸು!”

“ ಇಷ್ಟು ರಾತ್ರಿಯಲ್ಲಿ ಅವಳೆಲ್ಲಿಗೆ ಹೋಗಬೇಕು ರಾಯರೆ!”

“ ಬೇಕಾದಲ್ಲಿಗೆ ಹೋಗಲಿ! ನಿನ್ನ ಧರ್ಮಶಾಲೆಯನ್ನು ಬಿಟ್ಟರೆ ಬೇರೆ ಸ್ಥಳವೆ ಇಲ್ಲವೆ ಆಕೆಗೆ? ಕುದುರೆ ಕಟ್ಟುವ ಮನೆಯಲ್ಲಿ ಆಗಲಿ, ಮತ್ತೆಲ್ಲಿಯೆ ಆಗಲಿ, ನಮಗೆ ಅಳುವಿನ ದನಿ ಕೇಳಬರದಷ್ಟು ದೂರದಲ್ಲಿ ಇರಲಿಕ್ಕೆ ಹೇಳು! ತಿಳಿಯಿತೆ?”

ಪ್ರಯಾಣಿಕನು ಶ್ರೀಮಂತನೆಂದು ಬಗೆದು, ಕಾವಲುಗಾರನು ಅವನನ್ನು ಅಸಂತುಷ್ಟನನ್ನಾಗಿ ಮಾಡಬಯಸುತ್ತಿಲ್ಲ ‘ ಏನಾದರೂ ಇನಾಮು ಸಿಕ್ಕೀತಲ್ಲ ’ ಎಂಬ ಆಸೆಯಿದ್ದಿತು ಅವನಿಗೆ ಅವನು ಆ ಮಗುವಿನ ತಾಯಿಯ ಬಳಿಗೆ ಹೋಗಿ “ ನಿನ್ನ ಪಕ್ಕದ ಕಿರುಮನೆಯಲ್ಲಿ ಒಬ್ಬರು ಪ್ರಯಾಣಿಕರಿದ್ದಾರೆ ನಿನ್ನ ಮಗು ಅಳುತ್ತಿರುವುದರಿಂದ ಅವರಿಗೆ ನಿದ್ರೆ ಬರುತ್ತಿಲ್ಲ ಮಗು ಸುಮ್ಮನಾಗುವ ಲಕ್ಷಣ ಕಾಣದಿದ್ದರೆ ಇಲ್ಲಿಂದ ಹೊರಟು ಹೋಗಮ್ಮಾ!” ಎಂದ

ತಾಯಿ ದೈನ್ಯದಿಂದ “ ಮಗುವು ಈ ಸ್ಥಿತಿಯಲ್ಲಿರುವಾಗ ಎಲ್ಲಿಗೆಂದು ಕರೆದುಕೊಂಡು ಹೋಗಲಿ? ಚಳಿಗಾಲದ ರಾತ್ರಿ, ರಾತ್ರಿಯೂ ಬಹಳವಾಗಿಬಿಟ್ಟಿದೆ. ಇನ್ನೊಂದೆರಡು ಗಂಟೆ ತಡೆಯಿರಿ, ನಸುಕು ಆಗುತ್ತಲೆ ಹೊರಟು ಹೋಗುತ್ತೇನೆ ” ಎಂದಳು

“ ಬೇಡ, ನೀನು ಈಗಲೆ ಹೊರಟು ಹೋಗು, ಅವರು ಸಿಟ್ಟಾಗುವರು. ”

“ ಅವರಿಗೆ ಕೈಜೋಡಿಸಿ ಹೇಳಿರಿ—ನಾನು ಬಡವಿ, ದೀನಳು, ದುಃಖಿನಿಯು! ಇನ್ನೊಂದಿಷ್ಟು ಹೊತ್ತು ಸಹಿಸಲಿಕ್ಕೆ ಹೇಳಿರಿ! ದಯೆ ತೋರಿಸಲಿಕ್ಕೆ ಹೇಳಿರಿ! ಮಗುವಿನ ತಂದೆ ಅದೆಲ್ಲಿದ್ದಾರೊ; ಈ

ಮಗುವನ್ನು ಎಲ್ಲಿಡಲಿ? ಯಾವ ಕಡೆಗೆ ದೂಡಲಿ? ನಸುಕು ಆಗುತ್ತಲೆ ಹೊರಟು ಹೋಗುತ್ತೇನೆ ”

ಕಾವಲುಗಾರನು ಈ ದೀನೆಯನ್ನು ಹೊರಕ್ಕೆ ಹಾಕಬಯಸುತ್ತಿರ-ರಲಿಲ್ಲ, ಆದರೆ ಅವನಿಗೆ ಆ ಸಿಪಾಯಿಯ ಅಂಜಿಕೆಯಿದ್ದಿತು ಅವನೆಂದ “ ಅಮ್ಮಾ , ಅತ್ತಕಡೆಗೆ ಸ್ಥಳವಿದೆ ಅಲ್ಲಿ ಇರು ರಾತ್ರಿಯನ್ನು ಅಲ್ಲಿಯೆ ಕಳೆ ಇಲ್ಲದಿದ್ದರೆ ನನ್ನ ಹೊಟ್ಟೆಯ ಮೇಲೆ ಕಾಲುಕೊಟ್ಟ ಹಾಗೆ ಆಗುತ್ತದಮ್ಮಾ ಅವರು ನನ್ನ ಮೇಲೆ ಕೋಪಿಸಿಕೊಂಡು, ನನ್ನನ್ನೆ ಇಲ್ಲಿಂದ ಹೊರಕ್ಕೆ ಹಾಕಲಿಕ್ಕೆ ಪ್ರಯತ್ನಿಸಿದರೆ ನಾನೇನು ಮಾಡಬೇಕು ? ”

ಅವಳು ತನ್ನ ತೊಡೆಯ ಮೇಲಿರುವ ಮಗುವನ್ನು ದೂರ ದೂಡಿ “ ತೆಗೆದುಕೋ ಅಪ್ಪಾ, ಈ ಮಗುವನ್ನು ! ಅವರ ಕಾಲಿಗೆ ಕೊಡು, ತುಳಿದು ಕೊಂದುಬಿಡಲಿ ! ನಿಶ್ಚಿಂತೆಯಾಗುವುದು ! ನಾನು ಹೋಗಿ-ಬಿಡುತ್ತೇನೆ ! ” ಎಂದಳು

ಬಳಿಕ ಅವಳು ತನ್ನ ಎರಡೂ ಕೈಗಳಿಂದ ತಲೆ ಹಿಡಿದುಕೊಂಡು ಕುಳಿತು ಅಳಲುತೊಡಗಿದಳು ದೂರದಲ್ಲಿ ಬಿದ್ದುಕೊಂಡು ಮಗುವು ಗಟ್ಟಿಯಾಗಿ ಚೀರಿ ಚೀರಿ ಅಳುತ್ತಿದ್ದಿತು.

ಇದನ್ನು ಕಂಡು ಕಾವಲಗಾರ ದಿಙ್ಮೂಢನಾದ ಅವನು ಹಿಂತಿ-ರುಗಿ ಬಂದು “ ರಾಯರೆ, ಇನ್ನೆರಡು ಗಂಟೆಗಳ ಕಾಲ ಸ್ವಲ್ಪ ತಾಳಿರಿ, ಅವಳನ್ನು ಕ್ಷಮಿಸಿಬಿಡಿರಿ ! ಅವಳು ಅತಿ ದೀನೆಯು, ದುಃಖಿನಿಯು ” ಎಂದು ಹೇಳಿದ

ತನ್ನ ಆಜ್ಞೆಯನ್ನು ಈ ಕಾವಲಗಾರನು ಉಲ್ಲಂಘಿಸುತ್ತಿದ್ದಾ-ನೆಂದು ಸಿಪಾಯಿಗೆ ಎನಿಸಿತು ಅವನು ಆ ದುಃಖಿನಿ ಮತ್ತು ಕಾವಲು-ಗಾರ ಇಬ್ಬರ ನಡುವೆ ಆದ ಮಾತುಕತೆಯನ್ನು ಕೇಳಿದ್ದ ಆದುದರಿಂದ ಈಗ ಅವನಿಗೆ ಇನ್ನಿಷ್ಟು ಕೋಪಬಂದಿತು. ಈ ದುರವಸ್ಥೆಯು ಅವನಿಗೆ ಕೆಡುಕನ್ನುಂಟುಮಾಡಿತು. ಇದನ್ನು ಬಗೆಹರಿಸಲೇ ಬೇಕೆಂಬ ಹಟವು ಮನದಲ್ಲಿ ಮೂಡತೊಡಗಿತು. ಸಿಪಾಯಿಗಳ ಮನಸ್ಸು! ಹಟದ ತವರು ಮನೆಯೆ ಅದೆಂದು ಹೇಳಬಹುದು ! ಈಗಿಂದೀಗ ಹುಡುಗನನ್ನು

ಕರೆದುಕೊಂಡು ಅವಳು ಧರ್ಮಶಾಲೆಯನ್ನು ಬಿಟ್ಟು ಹೊರಕ್ಕೆ ಹೋಗಲೆಂಬೆಂಕೆಂದು ಹಟಹಿಡಿದ ಕಾವಲುಗಾರನು ಅವಳ ಮೇಲೆ ದಯೆ ತೋರಿಸಬೇಕೆಂದು ಹೇಳಿದಕೂಡಲೆ “ ನೀನು ಗಂಡುಸೇನೊ? ಒಬ್ಬ ಯಃಕಶ್ಚಿತ ಹೆಂಗುಸನ್ನು ಹೊರಕ್ಕೆ ಹಾಕಲಿಕ್ಕಾಗುವುದಿಲ್ಲ! ನಡೆ ಹೋಗಿಲ್ಲಿಂದ ಎದುರಿಗೆ ನಿಲ್ಲಬೇಡ! ” ಎಂದು, ಕಾಲು ಅಪ್ಪಳಿಸುತ್ತ ಆ ಮಗುವು ಅಳುವಲ್ಲಿಗೆ ನಡೆದ

ಕಿರುಮನೆಯಲ್ಲಿ ದೀಪವು ಉರಿಯುತ್ತಿದ್ದಿತು ತನ್ನ ಎರಡೂ ಕೈಗಳಿಂದ ತಲೆಯನ್ನು ಹಿಡಿದುಕೊಂಡು ಒಬ್ಬ ಹೆಂಗುಸು ಕುಳಿತಿದ್ದಳು. ಬಳಿಯಲ್ಲಿಯೆ ಭೂಮಿಯ ಮೇಲೆ ಮಗುವೊಂದು ಬಿದ್ದುಕೊಂಡು ಕಿರಿಚುತ್ತಿದ್ದಿತು

“ ಒಳಕ್ಕೆ ಯಾರಿದ್ದೀರಿ ? ”

ಒಳಗಣಿಂದ ದನಿಯು ಬರಲಿಲ್ಲ

“ ಯಾರಿದ್ದೀರಿ ಒಳಕ್ಕೆ ? ಕಿವಿಗಿವಿ ಇಲ್ಲವೇನು ? ” ಎಂದು ಸಿಪಾಯಿ ಗದ್ದರಿಸಿ ಕೇಳಿದ

ಆ ಹೆಂಗುಸು ಇನ್ನಿಷ್ಟು ಗಟ್ಟಿಯಾಗಿ ಅಳಲುತೊಡಗಿದಳು ಅತ್ತು, ಅತ್ತು ಸ್ವಲ್ಪ ಹೊತ್ತಿನಮೇಲೆ ಸುಮ್ಮಗಾದಳು

“ ಈಗಿಂದೀಗ ನೀನು ಹುಡುಗನನ್ನು ಕರೆದುಕೊಂಡು ಹೊರಕ್ಕೆ ಹೋಗಬೇಕು ಹುಡುಗ ಅಳಲುತೊಡಗಿದರೆ ಸಮಾಧಾನಪಡಿಸಲಿಕ್ಕೆ ಆಗುವುದಿಲ್ಲವೆ? ಹೇಳಲಿಕ್ಕೆ ಬಾಯಿ ಹೋಗಿದೆಯೇನು ನಿನಗೆ ? ಎಷ್ಟು ಕೂಗಿದರೂ ಸುಮ್ಮಗೇ ಇದ್ದೀಯಾ! ”

ಹೆಂಗುಸು ಮೆಲ್ಲಗೆ ಎದ್ದಳು ಮಗುವನ್ನು ಕರೆದುಕೊಂಡು ಹೊರಕ್ಕೆ ಬಂದಳು ಮಗುವನ್ನು ಅವನ ಚರಣಗಳ ಬಳಿ ಮಲಗಿಸಿ “ ನಾನು ಹೋಗುತ್ತೇನೆ, ನೀವು ಈ ಮಗುವನ್ನು ಒದ್ದುಕೊಂಡು ಬೇಕಾದಲ್ಲಿ ಬೀಸಾಡಿರಿ ” ಎಂದು ಅವಳು ಹೋಗಲಾರಂಭಿಸಿದಳು

ಆ ಸಿಪಾಯಿಗೆ ಏನೆನಿಸಿತೊ ಏನೋ! ತೊಡಕಿನಲ್ಲಿ ಸಿಲುಕಿಕೊಂಡ. ಅವನೆಂದ “ ನಿಲ್ಲು, ನಿಲ್ಲು! ಎಲ್ಲಿಗೆ ಹೋಗುತ್ತೀ ? ”

“ ಸಾವು ಸಿಕ್ಕುವಲ್ಲಿಗೆ! ”

ಸಿಪಾಯಿಯಲ್ಲಿ ಒಮ್ಮೆಲೆ ಬದಲಾವಣೆಯಾಯಿತು ಕೇಳಿದ "ನೀನೆಲ್ಲಿಂದ ಬಂದಿದ್ದೀಯೆ ? ಎಲ್ಲಿಗೆ ಹೊರಟಿದ್ದೀಯೆ ? "

"ಐದು ವರುಷಗಳಾದುವು; ಈ ಮಗುವಿನ ತಂದೆ ಹಿಂತಿರುಗಿ ಬರಲಿಲ್ಲ ಯುದ್ಧಕ್ಕೆ ಹೋಗಿದ್ದಾರೆ, ಸತ್ತುಹೋಗಿದ್ದಾರೊ ಏನೋ ಯಾರು ಬಲ್ಲರು ? ನಾನು ಹೋಗುವಾಗ ದಾರಿಯಲ್ಲಿ ಅವರು ಸಿಕ್ಕಲೂ ಬಹುದು! ಇದನ್ನು ಯಾರು ಕಂಡಿದ್ದಾರೆ? ನಾನು ಈ ನಿರ್ಭಾಗ್ಯ ಮಗುವನ್ನು ಅವರ ಕಡೆಗೆಯೆ ತೆಗೆದುಕೊಂಡು ಹೊರಟಿದ್ದೇನೆ"

ಸಿಪಾಯಿಯ ಕಣ್ಣುಗಳಲ್ಲಿ ನೀರು ತುಂಬಿ ಬಂದಿತು ಚರಣ-ಗಳ ಬಳಿಯಲ್ಲಿ ಬಿದ್ದಿರುವ ತನ್ನ ಮಗುವನ್ನು ಎತ್ತಿಕೊಂಡ ತನ್ನ ಪತ್ನಿಯನ್ನು ಗುರುತಿಸಿ 'ನೀನು ನನ್ನನ್ನು ಗುರುತಿಸದಾದೆ' ಎಂದು ಹೇಳಲಿಕ್ಕಾಗಲಿಲ್ಲ ಮಾತು ಬರಲಿಲ್ಲ ಕಂಠವು ಬಿಗಿದು ಬಂದಿದ್ದಿತು. ಮಗುವನ್ನು ಮುದ್ದಿಟ್ಟ ಕೈಯಲ್ಲಿ ತೂಗಾಡಿಸಿ ತೂಗಾಡಿಸಿ ರಮಿಸಲಾರಂಭಿಸಿದ

---

# ಮರುಕದ ಸೋಗು  

ಅದೆಷ್ಟೋ ವೇಳೆಯ ವರೆಗೆ ಯಾವ ಗೊತ್ತುಗುರಿಯಿಲ್ಲದೆ ಅಲೆದಾಡಿದೆವು ಬೇಸರ ಬಂದುದರಿಂದ ಕೊನೆಗೆ ದಾರಿಯ ದಂಡೆಗಿದ್ದ ಒಂದು ಬೆಂಚಿನ ಮೇಲೆ ಕುಳಿತುಕೊಂಡೆವು.

ನೈನೀತಾಲದ ಸಂಧ್ಯಾರಾಗವು ಮೆಲ್ಲಮೆಲ್ಲಗೆ ಕಣ್ಮರೆಯಾಗಲಾರಂಭಿಸಿದ್ದಿತು ಹಿಂಜಿದ ಹತ್ತಿಯಂತಹ, ಉಗಿಯಂತಹ ಮೇಘಗಳು ನಮ್ಮ ಮಸ್ತಕಗಳನ್ನು ಸೋಂಕಿ ಸೋಂಕಿ ಅತ್ತಿತ್ತ ಚಲಿಸುತ್ತಲಿದ್ದುವು ಮಂದವಾದ ಬೆಳಕಿನಲ್ಲಿ ಮಸುಕು-ಮಸುಕಾದ ಕತ್ತಲಲ್ಲಿ, ಅವು ಒಮ್ಮೊಮ್ಮೆ ಬೆಳ್ಳಗಾಗಿಯೂ ಒಮ್ಮೊಮ್ಮೆ ನೀಲವಾಗಿಯೂ ಕಾಣುತ್ತಿದ್ದುವು. ನಮ್ಮ ಹತ್ತಿರ ಬಂದುಬಂದು ನಮ್ಮನ್ನು ಮುಟ್ಟಿದಂತೆ ಮಾಡಿ ಓಡಿಹೋಗುತ್ತಲಿದ್ದುವು, ನಮ್ಮೊಡನೆ ಆಟವಾಡಬೇಕೆಂದೋ ಏನೋ!

ನಮ್ಮ ಬೆನ್ನಹಿಂದೆ ಪೋಲೋ † ಆಟದ ವಿಶಾಲವಾದ ಬೈಲು ಬಿದ್ದಿದ್ದಿತು. ಮುಂದುಗಡೆಯಲ್ಲಿ ಯುರೋಪಿಯನ್ನರ ಸಂತೋಷಕೂಟದ ಕ್ಲಬ್ಬು ಕಮನೀಯವಾಗಿದ್ದಿತು ಅದರೊಳಗಿಂದ ಇಂಪಾದ ದನಿಯು ಹರಿದು ಬಂದು, ಕಿವಿಗಳನ್ನು ಆನಂದದಲ್ಲಿ ತೇಲಿಸುತ್ತಿದ್ದಿತು. ಈ ಕ್ಲಬ್ಬಿನ ಪಕ್ಕದಲ್ಲಿಯೆ ಅದೇ ರಮಣೀಯವಾದ ನಯನಾಭಿರಾಮವಾದ ನೈನೀತಾಲವು ಕಂಗೊಳಿಸುತ್ತಿದ್ದಿತು

ಆ ನೈನೀತಾಲದಲ್ಲಿ ಚಿಕ್ಕಚಿಕ್ಕ ನಾವುಗಳು ಒಬ್ಬಿಬ್ಬರು ಯುರೋಪಿಯನ್ ಯಾತ್ರಿಕರನ್ನು ಕುಳ್ಳಿರಿಸಿಕೊಂಡು, ಅತ್ತಿಂದ ಇತ್ತ ಇತ್ತಿಂದ ಅತ್ತ ಓಡಾಡುತ್ತಿದ್ದುವು. ಇನ್ನೊಂದು ಕಡೆಯಲ್ಲಿ ಕೆಲವರು

---

† ಕುದುರೆಯ ಮೇಲೆ ಕುಳಿತುಕೊಂಡು ಕಟ್ಟಿಗೆಯಿಂದ ಆಡುವ ಚೆಂಡಿನಾಟ. ವೀರಶ್ರೀಯನ್ನು ಹುಟ್ಟಿಸುವ ಆಟವಿದು.

ಇಂಗ್ಲೀಷ್ ಜನರು ತಮ್ಮ ಮನದನ್ನೆಯರನ್ನು ತಮ್ಮೆದುರಿನಲ್ಲಿ ಕುಳ್ಳಿರಿಸಿಕೊಂಡು, ತಾವೇ ಆ ಚಿಕ್ಕಚಿಕ್ಕ ನೌಕೆಗಳನ್ನು ನಡೆಯಿಸಿ-ಕೊಂಡು ನಲಿಯುತ್ತಿದ್ದರು ಮತ್ತೊಂದು ದಡದ ಬಳಿ ಕೆಲವರು ಕುಳಿತುಕೊಂಡು ಕೋಲುಗಳಿಗೆ ದಾರ ಕಟ್ಟಿ ನೀರಿನಲ್ಲಿ ಚೆಲ್ಲಿ, ಮೀನ-ಗಳನ್ನು ಹಿಡಿಯುತ್ತಿದ್ದರು

ಹಿಂಭಾಗದಲ್ಲಿದ್ದ ಪೋಲೋ ಬಯಲಿನಲ್ಲಿ ಹುಡುಗರು ಕೇಕೆ ಹೊಡೆಯುತ್ತ ಹಾಕೀ * ಆಡುತ್ತಿದ್ದರು ಅವರ ಆ ಕೂಗಾಟವನ್ನೂ, ಅವರ ಆ ಭರದ ಓಡಾಟವನ್ನೂ ನೋಡಿದರೆ ಅವರೆಲ್ಲರೂ ತಮ್ಮ ಸಂಪೂರ್ಣ ಮನ, ತನು, ಬಲ, ಬುದ್ಧಿಗಳನ್ನು ಉಪಯೋಗಿಸಿ, ಆಟವನ್ನು ಕೊನೆಗಾಣಿಸುತ್ತಿರುವಂತೆ ತೋರುತ್ತಿದ್ದಿತು ಅವರಿಗೆ ಭೂತಕಾಲದ ಭಯವಿರಲಿಲ್ಲ, ಭವಿಷ್ಯದ ಚಿಂತೆಯಿರಲಿಲ್ಲ ಶುದ್ಧ ವರ್ತಮಾನ—ತತ್ಕಾಲದ ಜೀವಿಗಳಾಗಿದ್ದರು ಅವರು.

ನೈನಿತಾಲದ ಮಾರ್ಗದಲ್ಲ ನರನಾರಿಯರ ಅವಿರತ ಪ್ರವಾಹವು ಹರಿಯುತ್ತಿದ್ದಿತು ಅದಕ್ಕೆ ಮೊದಲಿರಲಿಲ್ಲ, ಕೊನೆಯೂ ಇರಲಿಲ್ಲ ಎಲ್ಲಿಂದ ಅದು ಬರುತ್ತಿದ್ದಿತು, ಎತ್ತ ಕಡೆಗೆ ಹೋಗುತ್ತಿದ್ದಿತೆಂಬುದನ್ನು ಹೇಳಲಾಗುವುದಿಲ್ಲ ನಾನಾ ಜಾತಿಯ, ಭಿನ್ನಭಿನ್ನ ವಯಸ್ಸಿನ, ವಿವಿಧವರ್ಣದ ಜನಗಳು ಅದರಲ್ಲಿದ್ದರು ಅವರನ್ನು ನೋಡಿದರೆ ಮನುಷ್ಯರದೊಂದು ಶೃಂಗರಿಸಿದ ಪೇಟಿಯೆ ಅತ್ತಿತ್ತ ತಿರುಗಾಡುತ್ತ-ಲಿರುವುದೋ ಏನೋ ಎಂದು ಎನಿಸುವಂತಿದ್ದಿತು

ಅಧಿಕಾರದ ಹೆಮ್ಮೆಯಿಂದ ಎದೆಯುಬ್ಬಿಸಿಕೊಂಡು ನಡೆದಾಡುವ ಇಂಗ್ಲಿಷ್ ಜನಗಳೂ ಅದರಲ್ಲಿದ್ದರು, ಹರಕುಹರಕಾದ ಬಟ್ಟೆಗಳನ್ನು ತೊಟ್ಟುಕೊಂಡು, ಕುದುರೆಯ ಲಗಾಮು ಹಿಡಿದುಕೊಂಡು, ತಮ್ಮ ಗೌರವವನ್ನು ನೀಗಿಕೊಂಡು ತತ್ಪರತೆಯಿಂದ ಬಾಲ ಅಲ್ಲಾಡಿಸುವ ಗುಡ್ಡಗಾಡಿನ ಜನಗಳೂ ಅದರಲ್ಲಿದ್ದರು

* ಇದೊಂದು ಬಗೆಯಿಂದ ಕಟ್ಟಿಗೆಯಿಂದ ಆಡುವ ಚಂಡಿನಾಟ ಈ ಆಟವು ಹೆಚ್ಚು ವೀರಶ್ರೀಯುಕ್ತವಾದುದು ಕ್ರಿಕೆಟ್ಟಿಗಿಂತ.

ನಗುತ್ತ ಆಡುತ್ತ ಓಡುತ್ತ ಹಟಮಾಡುತ್ತಲಿದ್ದ ಇಂಗ್ಲಿಷ್ ಜನಗಳ ತುಂಬುಗಲ್ಲಗಳ ರಕ್ತವರ್ಣದ ಮಕ್ಕಳೂ ಅದರಲ್ಲಿದ್ದರು, ತಮ್ಮ ಒಳಸಿಕ್ಕ ಕಣ್ಣುಗಳನ್ನು ಪ್ರಯತ್ನಪೂರ್ವಕವಾಗಿ ತೆರೆದು ತಮ್ಮ ತಂದೆಗಳ ಕೈಬೆರಳುಗಳನ್ನು ಹಿಡಿದುಕೊಂಡು ಮೆಲ್ಲಮೆಲ್ಲಗೆ ಹಜ್ಜೆಯಿಕ್ಕುತ್ತಿರುವ ನಮ್ಮ ಭಾರತದ ಚಿಕ್ಕಮಕ್ಕಳೂ ಅದರಲ್ಲಿದ್ದರು ತಮ್ಮ ಮಕ್ಕಳೊಡನೆ ಓಡುವಂತಹ, ಆಡುವಂತಹ, ನಗುವಂತಹ ಇಂಗ್ಲೀಷ್ ತಂದೆಗಳೂ ಅದರಲ್ಲಿದ್ದರು, ತಮ್ಮ ಹಿರಿತನದ ಬಟ್ಟೆಯನ್ನು ಧರಿಸಿಕೊಂಡು, ತಮ್ಮ ಧನವಂತಿಕೆಯನ್ನು ಬೀರುತ್ತ ನಡೆಯುತ್ತಿದ್ದ ಭಾರತೀಯ ತಂದೆಗಳೂ ಅದರಲ್ಲಿದ್ದರು

ಅದರಲ್ಲಿದ್ದ ಇಂಗ್ಲಿಷ ರಮಣಿಯರು ಮಂದಗಮನೆಯರಿರಲಿಲ್ಲ ಒತ್ತರದಿಂದ ಹಜ್ಜೆಹಾಕುತ್ತ ನಡೆದಿದ್ದರು ನಡೆಯಲು ದಣುವಾಗುತ್ತಿದ್ದಿಲ್ಲ ಅವರಿಗೆ. ಗಹಗಹಿಸಿ ನಗಲು ನಾಚಿಕೆಯುಂಟಾಗುತ್ತಿರಲಿಲ್ಲ ಅವರಲ್ಲಿ ಕೆಲವರು ಅಶ್ವಗಳನ್ನೇರಿ ಅಲೆದಾಡುತ್ತಿದ್ದರು ಸ್ವಲ್ಪ ಕೋಪ ಬಂದರೆ ಮಾರ್ಗದಲ್ಲಿ ನಡೆಯುತ್ತಿದ್ದ ಹಿಂದುಸ್ತಾನಿಗಳಿಗೆ ಒಂದೆರಡು-ಹಂಟರ್ (ಬಾರ ಕೋಲು)ದಿಂದ—ಪೆಟ್ಟುಗಳನ್ನು ಕೊಟ್ಟೀ ಕುದುರೆಯನ್ನು ಮುಂದೋಡಿಸುತ್ತಿದ್ದರು ಇಬ್ಬಿಬ್ಬರು, ಮೂವರು ಮೂವರು, ನಾಲ್ವರು ನಾಲ್ವರು ಸೇರಿ ಅವರು ವಾಯುಸೇವನೆಗಾಗಿ ದರ್ಪದಿಂದ ಹೋಗುತ್ತಿದ್ದರು ಅದರಲ್ಲಿದ್ದ ನಮ್ಮ ಭಾರತೀಯ ಕುಲಲಕ್ಷ್ಮಿಯರು ಸೀರೆಯನ್ನು ಬಿಗಿಯಾಗಿ ಸುತ್ತಿಕೊಂಡು, ಸೆರಗನ್ನು ಗಟ್ಟಿಯಾಗಿ ಹಿಡಿದುಕೊಂಡು, ಲೋಕಲಜ್ಜೆ, ಸ್ತ್ರೀತ್ವ, ಭಾರತೀಯರ ಮೇಲ್ಮೆ ಇವುಗಳ ಆದರ್ಶವನ್ನು ತಮ್ಮ ಪರಿವೇಷ್ಟನಗಳಲ್ಲಿ ಬಚ್ಚಿಟ್ಟುಕೊಂಡು, ಮುಖವನ್ನು ಕೆಳಗೆ ಮಾಡಿಕೊಂಡು, ದಾರಿಯ ಅಂಚಿನಲ್ಲಿ ಮೆಲ್ಲ ಮೆಲ್ಲನೆ ಅಡಿಯಿಡುತ್ತ ಸಾಗಿದ್ದರು.

ಜನಗಳ ಅವಿರತವಾದ ಆ ಪ್ರವಾಹದಲ್ಲಿ ಇನ್ನೊಂದು ಬಗೆಯ ಜನಗಳೂ ಇದ್ದರು ತಮ್ಮ ಕಪ್ಪುತನವನ್ನು ತಿಕ್ಕಿತಿಕ್ಕಿ ತೊಳೆದು ಇಂಗ್ಲಿಷರಂತೆಯೆ ನಟಿಸುತ್ತ ಹೋಗುತ್ತಿದ್ದ ಪುರುಷೋತ್ತಮರವರು ದೇಶೀಯ ಜನರೆಂದರೆ ಅವರಿಗೆ ತಲೆನೋವು. ದೇಶೀಯರನ್ನು.

ಕಂಡೊಡನೆ ತಮ್ಮ ಮುಖವನ್ನು ಬೇರೆ ಕಡೆಗೆ ತಿರುಗಿಸುತ್ತಿದ್ದರು ಇಂಗ್ಲಿಷರನ್ನು ನೋಡಿದೊಡನೆಯೆ ತಮ್ಮ ರಿಪ್ಪೆಗಳನ್ನೇ ಅವರೆದುರಿನಲ್ಲಿ ಹಾಸಿ "Good Morning, Sir (ನಮಸ್ಕಾರ ರಾಯರೆ)" ಎಂದು ಮಾತನಾಡಲು ಹವಣಿಸುತ್ತಿದ್ದರು. ಭಾರತಭೂಮಿಯನ್ನು ಮೆಟ್ಟಿ ಆಳುವ ಅಧಿಕಾರವು ತಮಗೇ ಇರುವುದೆಂದೊ ಏನೊ ಅವರು ಎದೆಯನ್ನು ಉಬ್ಬಿಸಿಕೊಂಡು, ಕರಗಳನ್ನು ಬೀಸುತ್ತ ಹೆಮ್ಮೆಯಿಂದ ಹಜ್ಜೆಯಿಡುತ್ತ ಸಾಗಿದ್ದರು

ಈ ನೋಟವನ್ನು ನೋಡುತ್ತ ಕುಳಿತಿದ್ದೆವು. ವೇಳೆಯ ಕಡೆಗೆ ಗಮನವೇ ಇರಲಿಲ್ಲ ಗಂಟೆಗೆ ಗಂಟೆಗಳೇ ಕಳೆದುಹೋದುವು ಕತ್ತಲು ದಟ್ಟವಾಗತೊಡಗಿತು ಮೋಡಗಳು ಕಾಣದಾದುವು ಮನುಷ್ಯರ ಪ್ರವಾಹವೂ ಕಡಿಮೆಯಾಯಿತು ಅಲ್ಲಲ್ಲಿ ಒಬ್ಬಿಬ್ಬರು ಕೊಡೆಗಳನ್ನು ಏರಿಸಿ ಹಿಡಿದುಕೊಂಡು ನಡೆದಾಡುತ್ತಿದ್ದರು ನಾವು ಮಾತ್ರ ಕುಳಿತಲ್ಲಿಯೆ ಕುಳಿತಿದ್ದೆವು ಚಳಿಯಾಗತೊಡಗಿತು ನೋಡಿದೆವು— ನಮ್ಮ ಓವರ್ ಕೋಟ್ (ನಿಲುವಂಗಿ)ಗಳು ತೊಯ್ದಿದ್ದುವು

ಹಿಂತಿರುಗಿ ನೋಡಿದೆನು ಆ ಬಯಲು ಹಿಮದ ಸೆಲ್ಲೆಯವನ್ನು ಹೊದ್ದುಕೊಂಡು ಅತ್ಯಂತ ಶಾಂತವಾಗಿ ಬಿದ್ದಿದ್ದಿತು. ಹುಡುಗರ ಆ ಗಲಾಟೆಯು ಅದೆಲ್ಲಿಗೊ ಹೋಗಿಬಿಟ್ಟಿದ್ದಿತು

ಎಲ್ಲೆಲ್ಲಿಯೂ ನೀರವತೆಯಿದ್ದಿತು ನೈನೀತಾಲದ ವಿದ್ಯುದ್ದೀಪಗಳು ದೀಪಮಾಲಿಕೆಯಂತೆ ಸಾಲುದೀಪದಂತೆ ಲಕಲಕ ಹೊಳೆಯುತ್ತಿದ್ದುವು ಆ ದೀಪಗಳ ಬೆಳಕು ಎರಡು ಮೈಲಿಗಳ ವರೆಗೆ ಪಸರಿಸಿದ್ದ ಜಲದರ್ಪಣದ ಮೇಲೆ ಬಿದ್ದು ಪ್ರತಿಬಿಂಬಿತವಾಗುತ್ತಲಿದ್ದಿತು, ಕಂಪಿಸುತ್ತಿದ್ದ, ತರಂಗಿತವಾಗುತ್ತಿದ್ದ ಆ ಸರೋವರವು, ಆ ಜಲದರ್ಪಣದ ಪ್ರತಿಬಿಂಬಗಳನ್ನು ನೂರ್ಮಡಿ, ಸಾಸಿರಮಡಿ ಮಾಡಿ, ಪ್ರಕಾಶವನ್ನು ಸುತ್ತಲೂ ಎರಚುತ್ತಿರುವುದೊ ಏನೊ ..ಎಂಬಂತೆ ಕಂಗೊಳಿಸುತ್ತಿದ್ದಿತು. ಪರ್ವತಗಳ ಮೇಲಿನ ದೀಪಗಳು ನಕ್ಷತ್ರಗಳಂತೆ ನಯನಾಭಿರಾಮವಾಗಿ ಕಾಣುತ್ತಿದ್ದುವು.

ನಾವು ನೋಡುನೋಡುತ್ತಿರುವಾಗಲೆ ಒಂದು ದೊಡ್ಡ ಬೆಳ್ಳಗಿನ ಪರದೆಯು ಬಂದು ಇದೆಲ್ಲವನ್ನೂ ಮುಚ್ಚಿಬಿಟ್ಟಿತು ದೀಪಗಳು ಸತ್ತುಹೋದಂತಾದುವು ಅವುಗಳ ಹೊಳಪು ಅಗೋಚರವಾಯಿತು ಆ ನೀಲವರ್ಣದ ದೊಡ್ಡ ದೊಡ್ಡ ಬೆಟ್ಟಗಳು ಆ ಬಿಳಿಯ ಪರದೆಯ ಹಿಂದೆ ಅಡಗಿಕೊಂಡುವು ಸಮೀಪದಲ್ಲಿದ್ದ ಸಾಮಾನುಗಳೂ ಕಾಣದಾದುವು ಎಲ್ಲವೂ ಪ್ರಳಯವಾಗಿ ಹೋದಂತೆನಿಸಿತು ಜಗವೆಲ್ಲವೂ ಶುಭ್ರವಾದ — ಆಳವಾದ — ಬಿಳಿಯಲ್ಲಿ ಮುಳುಗಿಹೋಯಿತು ಒಂದು ಶುಭ್ರವಾದ ಮಹಾಸಾಗರವು ಉಕ್ಕಿ ಏರಿಬಂದು, ಸಂಸ್ಕೃತಿಯ ಅಸ್ತಿತ್ವವನ್ನು ಮುಳುಗಿಸಿದಂತೆನಿಸಿತು ಮೇಲೂ ಕೆಳಗೂ ಹಿಂದೂ ಮುಂದೂ ಆ ನಿರ್ಭೇದ್ಯ ಬೆಳ್ಳಗಿನ ಶೂನ್ಯತೆಯು ಸೂರೆಯಾಗಿದ್ದಿತು

ಇಂತಹ ಮಂಜನ್ನು ನಾವು ನಮ್ಮ ಜನ್ಮದಲ್ಲಿಯೆ ನೋಡಿರಲಿಲ್ಲ ಅದು ಹನಿಹನಿಯಾಗಿ ಟಪಟಪ ಬೀಳುತ್ತಿದ್ದಿತು

ಈಗ ಮಾರ್ಗದಲ್ಲಿ ಯಾರೂ ಅಲೆದಾಡುತ್ತಿರಲಿಲ್ಲ ಕೆಲ ಹೊತ್ತಿನ ಹಿಂದೆ ಈ ಮಾರ್ಗದಲ್ಲಿ ಹರಿಯುತ್ತಿದ್ದ ಜನಗಳ ಪ್ರವಾಹವು ಯಾವ ಗೂಡುಗಳನ್ನು ಸೇರಿ ಮರೆಯಾಗಿತ್ತೋ !

ಆ ಬೃಹದಾಕಾರದ ಶುಭ್ರಶೂನ್ಯದಲ್ಲಿ ಅದೆಲ್ಲಿಂದಲೋ ಹನ್ನೊಂದು ಸಲ 'ಟನ್ ಟನ್' ಎಂದು ಶಬ್ದವು ಕೇಳಬಂದಿತು ಅದು ದೂರದ ಗೋರಿಯೊಳಗಿಂದ ಮೇಲಕ್ಕೆದ್ದು ಬರುವಂತೆ ಕೇಳಿಸಿತು !

* * *

ನಾವು ನಮ್ಮ ಹೋಟಲುಗಳಿಗೆ ಹೊರಟೆವು ನಮ್ಮಿಬ್ಬರ ಇಬ್ಬರೂ ಗೆಳೆಯರು (ವಕೀಲರು) ತಮ್ಮ ತಮ್ಮ ಹೋಟಲುಗಳಿಗೆ ಹೊರಟುಹೋದರು. ನಮ್ಮ ಹೋಟಲ್ ಇನ್ನೂ ಮುಂದೆ ಇದ್ದುದರಿಂದ ನಾವು ಮುಂದಕ್ಕೆ ಸಾಗಿದೆವು.

ನಾವೀಗ ಸರೋವರದ ದಂಡೆಗುಂಟ ನಡೆದಿದ್ದೆವು ನಮ್ಮ ನಿಲುವಂಗಿ (ಒವರ್‌ಕೋಟ್)ಗಳು ನೀರುನೀರಾಗಿದ್ದುವು; ಮಳೆಯಿಂದಲ್ಲ, ಮಂಜಿನಿಂದ! ಸಹಿಸಲಸಾಧ್ಯವಾದ ಚಳಿಯಿದ್ದಿತು. ಕೋಟಿನ

ಮೇಲೆ ಇನ್ನೊಂದೆರಡು ಕಂಬಳಿಗಳಿದ್ದುದಾಗಿದ್ದರೆ ಅದೆಷ್ಟು ಸುಖವಾಗುತ್ತಿತ್ತೆಂದು ಎನಿಸುತ್ತಿದ್ದಿತು

ದಾರಿಯ ಒಂದು ಪಕ್ಕದಲ್ಲಿಯೆ ಸರೋವರದ ದಡದ ಮೇಲೆ ಒಂದು ಬೆಂಚು ಇದ್ದಿತು ನನ್ನ ಮನದಲ್ಲಿ ನೆಮ್ಮದಿಯಿರಲಿಲ್ಲ ಬೇಗ ಹೊಟಲಿಗೆ ಹೋಗಿ, ಬೆಚ್ಚಗಿನ ಬಟ್ಟೆಗಳನ್ನು ಹೊದ್ದುಕೊಂಡು ನಿದ್ರೆ ಹೋಗಬೇಕೆಂದೆನಿಸುತ್ತಿದ್ದಿತು ಆದರೆ ನನ್ನ ಗೆಳೆಯ ಅದಕ್ಕೆ ಒಪ್ಪು-ವಂತಿರಲಿಲ್ಲ. ಅವನು ಮನಸುಖರಾಯ, ಲಹರೀಮನುಷ್ಯ "ಬಾ ಸ್ವಲ್ಪ ಹೊತ್ತು ಇಲ್ಲಿಯೇ ಕುಳಿತುಕೊಳ್ಳೋಣ ! " ಎಂದ

ಆ ತಟತಟ ಸುರಿಯುತ್ತಿದ್ದ ಇಬ್ಬನ್ನಿಯಲ್ಲಿ ತೀರ ತೊಯ್ದು-ಹೋದ ಬೆಂಚಿನ ಮೇಲೆ ನಾವು ಕುಳಿತುಕೊಂಡೆವು

ಆಗ ನಡುರಾತ್ರಿಯಾಗಿದ್ದಿತು

ಹತ್ತು ಹದಿನೈದು ನಿಮಿಷಗಳು ಕಳೆದುವು ನನ್ನ ಗೆಳೆಯ ಬೇಗನೆ ಏಳುವ ಲಕ್ಷಣ ತೋರಲಿಲ್ಲ ನಾನು ಬೇಸತ್ತು "ಏಳಿರಿ " ಎಂದೆ

"ತಡೆಯೋ, ಇನ್ನೂ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣ . "

ನಾನು ಎದ್ದುನಿಂತೆ ನನ್ನ ಕೈಹಿಡಿದು ಪುನಃ ನನ್ನನ್ನು ಕುಳ್ಳಿರಿಸಿದ ಮುಂಗಾಣದವನಾಗಿ ಕುಳಿತುಕೊಂಡೆ ಇಂತಹ ಲಹರಿಯ ಸ್ವಭಾವದ ಗೆಳೆಯನಿಂದ ಬಿಡುಗಡೆ ಹೊಂದುವುದು ಸಹಜ-ವಾದುದಲ್ಲ ಸ್ವಲ್ಪ ಹೊತ್ತು ಕುಳಿತುಕೊಳ್ಳೋಣ ಎಂದು, ಅದರಂತೆಯೆ ನಡೆಯುವವನೂ ಅಲ್ಲ ಆತ ಬೆಳಗಿನ ವರೆಗೂ ಕುಳಿತರೂ ಕುಳಿತನೇ !

ಕುಳಿತು ಕುಳಿತು ನನಗೆ ತೀರ ಬೇಸರ ಬಂದಿದ್ದಿತು ಅವನ ಬಗೆಗೆ ಮನದಲ್ಲಿಯೆ ಕುದಿಯುತ್ತಿದ್ದೆ ಅವನ ಮೇಲೆ ಕೋಪಿಸಿ-ಕೊಳ್ಳುತ್ತಿದ್ದೆ. ಅವನೆಂದ " ನೋಡೋ ಅಲ್ಲಿ ! ಏನದು ? "

ನಾನು ನೋಡಿದೆ ಆ ಇಬ್ಬನಿಯಲ್ಲಿ ದೂರದಲ್ಲಿ ಒಂದು ಕಪ್ಪು-ಕಪ್ಪಾದ ಮೂರುತಿಯು ನಮ್ಮ ಕಡೆಗೆ ಬರುತ್ತಿರುವಂತೆ ಕಾಣಿಸಿತು ನಾನೆಂದೆ " ಯಾರಾದರೂ ನಮ್ಮಂಥವರು ಬರುತ್ತಿರಬಹುದು. "

ಮೂರು ಗಜ ದೂರದಲ್ಲಿ ಒಬ್ಬ ಬಾಲಕ ಕಂಡ ಅವನು ತನ್ನ ಉದ್ದ ಉದ್ದಾದ ತಲೆಗೂದಲುಗಳಲ್ಲಿ ಬೆರಳುಗಳನ್ನಿಕ್ಕಿ ತುರಿಸಿಕೊಳ್ಳುತ್ತ ಬರುತ್ತಿದ್ದ ಕಾಲುಗಳಲ್ಲಿ ಪಾದರಕ್ಷೆಗಳಿರಲಿಲ್ಲ ಒಂದು ಹೊಲಸಾದ ಬಟ್ಟೆಯನ್ನು ತೊಟ್ಟಿದ್ದ ಅದೂ ಅಲ್ಲಲ್ಲಿ ಹರಿದಿದ್ದಿತು

ಅವನ ಹಜ್ಜೆಗಳು ಅದೆತ್ತೋ ಬೀಳುತ್ತಿದ್ದುವು. ಅವನು ಎಲ್ಲಿಗೆ ಹೋಗಬಯಸುತ್ತಿದ್ದನೊ! ಕಾಲುಗಳನ್ನು ಎತ್ತಿ ಎತ್ತಿ ಇಡುವುದು ಕಾಣುತ್ತಿರಲಿಲ್ಲ

ಸಮೀಪದಲ್ಲಿಯೆ ಇದ್ದ ಸುಂಕದ ಕಟ್ಟೆಯ ಕಂದೀಲಿನ ಬೆಳಕಿನಲ್ಲಿ ಗೋಚರಿಸಿದ ಹತ್ತು ವರ್ಷದ ಬಾಲಕ, ವೈಬಣ್ಣ ಕೆಂಪಾಗಿದ್ದರೂ ಹೊಲಸು ಒಟ್ಟಿ, ನಿತ್ಯ ಸ್ನಾನವಿಲ್ಲದುದರಿಂದ ಕಪ್ಪುಕಪ್ಪಾಗಿ ಕಾಣುತ್ತಿದ್ದ ಕಣ್ಣುಗಳು ವಿಶಾಲವಾಗಿದ್ದರೂ ಅವುಗಳಲ್ಲಿ ತೇಜಸ್ಸು ಇರಲಿಲ್ಲ ತಲೆಯ ಮೇಲಿನ ಕೂದಲುಗಳು ಎಣ್ಣೆಗಾಣದೆ ಜಡೆಗಟ್ಟಿದ್ದುವು.

ಅವನು ನಮ್ಮನ್ನು ನೋಡಲಿಲ್ಲ, ಏನನ್ನೂ ನೋಡುತ್ತಿರಲಿಲ್ಲ ಎನ್ನಿರಿ! ಮುಗಿಲನ್ನು ನೋಡುತ್ತಿರಲಿಲ್ಲ, ನೆಲ ನೋಡುತ್ತಿರಲಿಲ್ಲ, ಸುತ್ತಲೂ ಹರಡಿದ್ದ ಮಂಜನ್ನೂ ನೋಡುತ್ತಿರಲಿಲ್ಲ ಎದುರಿನಲ್ಲಿದ್ದ ಸರೋವರವನ್ನೂ ನೋಡುತ್ತಿರಲಿಲ್ಲ ಆದರೆ ಅವನು ಒಂದೇ ಒಂದು ವಸ್ತುವನ್ನು ನೋಡುತ್ತಿದ್ದ — ತನ್ನ ಅತ್ಯಂತ ಸಿಕಟದಲ್ಲಿದ್ದ ವರ್ತಮಾನವನ್ನು ನೋಡುತ್ತಿದ್ದ

ನನ್ನ ಗೆಳೆಯ 'ಏ!' ಎಂದ; ಕೂಡಲೆ ಆ ಹುಡುಗ ಎಚ್ಚತ್ತು ನಮ್ಮನ್ನು ಕಂಡು ನಮ್ಮ ಕಡೆಗೇ ಬಂದ.

"ಎಲ್ಲಿಗೆ ಹೋಗುತ್ತೀಯೋ?"

ಕಣ್ಣುಗಳನ್ನು ಹಿಗ್ಗಿಸಿದ.

"ಜಗತ್ತೆಲ್ಲ ಮಲಗಿರುವಾಗ ನೀನೊಬ್ಬನೆ ಹೀಗೇಕೆ ಅಲೆದಾಡುತ್ತೀಯೆ?"

ಮಾತನಾಡಲು ಬಾಯಿಬರಲಿಲ್ಲ. ಆದರೆ ಮಾತನಾಡಲು ಹವಣಿಸುತ್ತಿದ್ದ

“ ಎಲ್ಲಿ ಮಲಗುತ್ತೀಯೆ ? ”

“ ಇಲ್ಲಿಯೇ ಎಲ್ಲಾದರೂ ”

“ ನಿನ್ನೆ ಎಲ್ಲಿ ಮಲಗಿಕೊಂಡಿದ್ದೆ ? ”

“ ಅಂಗಡಿಯೊಂದರಲ್ಲಿ ! ”

“ ಈಪ್ಹೊತ್ತು ಅಲ್ಲಿಯೆ ಏಕೆ ಮಲಗುವುದಿಲ್ಲ ? ”

“ ಅಂಗಡಿಯಿಂದ ಹೊರಗೆ ಹಾಕಿದ್ದಾರೆ ! ”

“ ಏನು ಕೆಲಸ ಮಾಡುತ್ತಿದ್ದೆ ಅಂಗಡಿಯಲ್ಲಿ ? ”

“ ಎಲ್ಲಾ ಕೆಲಸ ಮಾಡುತ್ತಿದ್ದೆ. ಒಂದು ರೂಪಾಯಿ ಮತ್ತು ಎಂಜಲ ಸಂಬಳ ಕೊಡುತ್ತಿದ್ದರು ”

“ ನೌಕರಿ ಸಿಕ್ಕರೆ ಮಾಡುವೆಯೇನು ? ”

“ ಹೂಂ ”

“ ನಮ್ಮ ದೇಶಕ್ಕೆ ಬರುವೆಯೇನು ? ”

“ ಹೂಂ ”

“ ಈಪ್ಹೊತ್ತು ಏನುಂಡೆ ? ”

“ ಏನೂ ಇಲ್ಲ ”

“ ಈಗ ನಿನಗೆ ಊಟಕ್ಕೆ ಸಿಕ್ಕಬಹುದೇನು ? ”

“ ಇಲ್ಲ ”

“ ಊಟ ಮಾಡದೆ ಹೀಗೆಯೆ ಮಲಗಿಕೊಳ್ಳುವೆಯಾ ? ”

“ ಹೂಂ ”

“ ಎಲ್ಲಿ ಮಲಗುವೆ ? ”

“ ಇಲ್ಲೇ ಎಲ್ಲಾದರೂ ”

“ ಇಲ್ಲಿ ಮಲಗಿಕೊಂಡರೆ ಇವಿಷ್ಟೇ ಬಟ್ಟೆಗಳು ಸಾಕೇ ? ”

ಹುಡುಗ ಮಾತನಾಡಲಿಲ್ಲ. “ ಇದೆಂತಹ ಮೂರ್ಖ ಪ್ರಶ್ನೆ ! ” ಎಂದು ಅವನ ಕಣ್ಣುಗಳೆ ಉತ್ತರವಿತ್ತಂತೆ ತೋರಿದುವು.

“ ತಂದೆ—ತಾಯಂದಿರು ಇದ್ದಾರೇನು ? ”

“ ಇದ್ದಾರೆ. ”

“ ಎಲ್ಲಿ? ”

" ಹದಿನೈದು ಹರದಾರಿ ದೂರವಿದ್ದ ಒಂದು ಹಳ್ಳಿಯಲ್ಲಿ. "

" ನೀನು ಇಲ್ಲಿಗೆ ಹೇಗೆ ಬಂದೆ ? ಓಡಿಬಂದೆಯೇನು ? "

" ಹೌದು ! "

" ಏಕೆ ? "

" ನಮ್ಮ ಮನೆಯಲ್ಲಿ ಜನಗಳು ಬಹಳ. ನನಗೆ ಅನೇಕ ಜನ ಅಣ್ಣತಮ್ಮಂದಿರೂ ಅಕ್ಕತಂಗೆಯಂದಿರೂ ಇದ್ದಾರೆ ತಂದೆತಾಯಂದಿ-ರುಗಳಿಗೆ ಕೆಲಸ ಸಿಕ್ಕುವುದಿಲ್ಲ ಅವರೇ ಉಪವಾಸದಿಂದ ದಿನಗಳನ್ನು ದೂಡುತ್ತಿರುವಾಗ ನಮಗೇನು ಹಾಕುವರು ಹೊಟ್ಟೆಗೆ ? ತಂದೆಯವರು ಹೊಟ್ಟೆಯಲ್ಲಿಂಪ ಕಿಚ್ಚಿನಿಂದ ನಮ್ಮನ್ನೂ ತಾಯಿಯನ್ನೂ ಹೊಡೆಯು-ತ್ತಿದ್ದರು ತಾಯಿ ಅಳುತ್ತಿದ್ದಳು ಹಸಿವೆಯಿಂದ ಕೊರಗಿ ಕೊರಗಿ ಸಣ್ಣಾಗಿದ್ದಳು. ಸಹಿಸುವುದಾಗಲಿಲ್ಲ, ನೋಡುವುದಾಗಲಿಲ್ಲ ಓಡಿ ಬಂದೆ ನನ್ನ ಕೂಡ ನಮ್ಮ ಊರಿನ ಇನ್ನೊಬ್ಬ ಹುಡುಗನೂ ಬಂದಿದ್ದ ಅವನು ನನಗಿಂತ ಸ್ವಲ್ಪ ದೊಡ್ಡವನಾಗಿದ್ದ ಈಗ ಅವನಿಲ್ಲ!" ಎನ್ನುವಾಗ ಅವನ ಕಣ್ಣೊಳಗಿಂದ ಒಂದು ತೊಟ್ಟು ನೀರಹನಿ ಬಿದ್ದಿತು ಆದರೂ ನಾವು ಕೇಳಿದೆವು " ಎಲ್ಲಿಗೆ ಹೋದ ? " ಎಂದು

" ಸತ್ತುಹೋದ "

ಇಷ್ಟು ಚಿಕ್ಕ ವಯಸ್ಸಿನಲ್ಲಿಯೆ ಅವನಿಗೆ ಸಾವಿನ ಪರಿಚಯ-ವಾಯಿತೆ ? ನನಗೆ ಆಶ್ಚರ್ಯವಾಯಿತು, ದುಃಖವಾಯಿತು ಮತ್ತೆ ಕೇಳಿದೆ " ಸತ್ತುಹೋದನೇ ? "

" ಹೌದು, ಸಾಹೇಬರು ಹೊಡೆದರು, ಸತ್ತುಹೋದ. "

" ಒಳ್ಳೆಯದು, ನಡೆ ನಮ್ಮ ಸಂಗಡ ! "

ನಾವು ಹೊರಟೆವು ಅವನೂ ನಮ್ಮ ಸಂಗಡ ಹೊರಟ; ಹಿಂತಿರುಗಿ ನಾವು ಇಬ್ಬರೂ ವಕೀಲ-ಗೆಳೆಯರ ಹೋಟಲಿಗೆ ಬಂದೆವು " ವಕೀಲ ಸಾಹೇಬ್ " ಎಂದು ಕೂಗಿದೆವು

ವಕೀಲ ಸಾಹೇಬರು ಹೋಟಲಿನ ಮೇಲಿನ ಕೋಣೆಯಿಂದ ಕೆಳಗಿಳಿದು ಬಂದರು ಕಾಶ್ಮೀರಿನ ಶಾಲನ್ನು ಹೊದ್ದಿದ್ದರು, ಕಾಲುಚೀಲ-ಗಳನ್ನು ಧರಿಸಿದ್ದರು, ಚಪ್ಪಲುಗಳನ್ನು ಮೆಟ್ಟಿದ್ದರು. ಅವರ ಸ್ವರದಲ್ಲಿ

ಸ್ವಲ್ಪ ಕೋಪ, ಸ್ವಲ್ಪ ಅಲಕ್ಷ್ಯ ಬೆರೆತಿದ್ದಿತು "ಓಹೋ! ತಾವೆ! ಏಕೆ ಪುನಃ ಬಂದಿರಿ? ಹೇಳಿರಿ ಅದೇನು ಕೆಲಸ ಇಷ್ಟು ರಾತ್ರಿಯಲ್ಲಿ!"

"ತಮಗೊಬ್ಬ ಆಳುಮಗ ಬೇಕಾಗಿದ್ದಿಲ್ಲವೆ? ನೋಡಿರಿ, ಇಲ್ಲೊಬ್ಬ ಹುಡುಗನಿದ್ದಾನೆ"

"ಎಲ್ಲಿಂದ ಹುಡುಕಿ ತಂದಿರಿ ಇವನನ್ನು? ಇವನ ಪರಿಚಯ-ವಿದೆಯೇ ನಿಮಗೆ?"

"ಇದೆಯೆನ್ನಿರಿ ಅಪ್ರಾಮಾಣಿಕನಾಗಿರಲಾರ!'

"ಸರಿ ಸರಿ ಈ ಗುಡ್ಡಗಾಡಿನ ಹುಡುಗರೆಂದರೆ ತೀರಿತು, ಮಹಾ ಘಾಟಿ, ಬೆರಕೀ ಕಾಣಿರಿ! ಇವರಲ್ಲಿ ಎಂತೆಂತಹ ಗುಣಗಳಿರು-ತ್ತವೆಂಬುದನ್ನು ನೀವು ಬಲ್ಲಿರಾ? ನೀವೂ ವಿಚಿತ್ರ ಮನುಷ್ಯರೆ ಸರಿ! ತಂದಿರಿ ಎಲ್ಲಿಂದಲೊ ಒಬ್ಬನನ್ನು! ಮತ್ತೆ ಹೇಳುತ್ತಿದ್ದೀರಿ ಇಟ್ಟು-ಕೊಳ್ಳಿರಿ ಕೆಲಸಕ್ಕೆ ಇವನನ್ನು. ಎಂದು!"

"ನೋಡಿರಿ ಇವನು ನಂಬಿಗಸ್ತನಾಗಿರಬಹುದು"

"ನೀವೂ ಸರಿ, ಚೆನ್ನಾಗಿ ಹೇಳುತ್ತಿದ್ದೀರಿ. ಕಂಡಕಂಡ-ವನನ್ನು ಕೆಲಸಕ್ಕೆ ಇಟ್ಟುಕೊಂಡರೆ, ಮರುದಿನ ಬೆಳಿಗ್ಗೆ ಏನೇನು ತೆಗೆದುಕೊಂಡು ಹೋಗುವನೊ!"

"ಇಟ್ಟುಕೊಳ್ಳಲಿಕ್ಕೆ ಮನಸ್ಸಿಲ್ಲದಿದ್ದರೆ ನಾನೇನು ಮಾಡು-ವುದು?"

"ಸರಿ, ನೀವೂ ಒಳ್ಳೇ ತಮಾಷೆ ಮಾಡುತ್ತಿದ್ದೀರಿ....... ಒಳ್ಳೇದು, ಇನ್ನು ನಾವು ಮಲಗಲು ಹೊರಡುತ್ತೇವೆ!"

ವಕೀಲ ಸಾಹೇಬರು ಒಂದು ರಾತ್ರಿಗೆ ನಾಲ್ಕು ರೂಪಾಯಿ ಬಾಡಿಗೆಯ ಕಿರುಮನೆಯಲ್ಲಿ, ಹಾಸಿ ಸಿದ್ಧಪಡಿಸಿಟ್ಟಿದ್ದ ಸುಪ್ಪತ್ತಿಗೆಯ ಮೇಲೆ ಮಲಗಲು ಹೊರಟುಹೋದರು ಬಳಿಕ ನನ್ನ ಮಿತ್ರ ಹೊರಗೆ ಬಂದು, ತನ್ನ ಜೇಬಿನಲ್ಲಿ ಕೈಹಾಕಿ ನೋಡಿದ ಕೂಡಲೆ ನಿರಾಶೆಯಿಂದ ನನ್ನ ಕಡೆಗೆ ನೋಡಿದ.

"ಏನು?" ಕೇಳಿದೆ ನಾನು.

"ಇವನಿಗೇನಾದರೂ ಕೊಡಬೇಕೆಂದಿದ್ದೆ" ಇಂಗ್ಲಿಷಿನಲ್ಲಿಯೆ ಮಾತನಾಡಿದ "ಹತ್ತುರೂಪಾಯಿಗಳ ನೋಟು ಇದೆ."

"ನನ್ನ ಬಳಿಯಲ್ಲೂ ನೋಟುಗಳೇ ಇರಲಿಕ್ಕೆ ಸಾಕು" ಎಂದೆ.

ನಿಜವಾಗಿಯೂ ನನ್ನ ಹತ್ತಿರ ನೋಟುಗಳೇ ಇದ್ದುವು ನಾವು ಇಂಗ್ಲಿಷಿನಲ್ಲಿಯೆ ಮಾತನಾಡುತ್ತಿದ್ದೆವು ಆ ಹುಡುಗನ ಹಲ್ಲುಗಳು ಕಟಕಟಿಸುತ್ತಿದ್ದುವು ಅತಿ ತೀಕ್ಷ್ಣವಾದ ಚಳಿಯಿದ್ದಿತು

"ಹಾಗಾದರೆ ಮಾಡುವುದೇನು?" ನನ್ನ ಗೆಳೆಯ ಕೇಳಿದ

"ಆ ಹತ್ತು ರೂಪಾಯಿಗಳ ನೋಟನ್ನೇ ಕೊಟ್ಟುಬಿಡಿರಿ".

"ನಮ್ಮ ಬಜೆಟ್ಟು ಹಾಳಾಗಿ ಹೋಗುವುದಲ್ಲ ಹತ್ತು ರೂಪಾಯಿ ಕೊಟ್ಟರೆ! ಕರುಳುಗಳಲ್ಲಿ ಕರುಣೆಯಿದ್ದಷ್ಟು ಜೇಬಿನಲ್ಲಿ ರೂಪಾಯಿ-ಗಳಿಲ್ಲ ಕಾಣೋ!"

"ಹೋಗಲಿ ಬಿಡು ಇಂತಹ ಕರುಣೆಯೆ ಪೆಚ್ಚಾಗದೆ ಈವಾಗ" ಎಂದೆ

ನನ್ನ ಗೆಳೆಯ ಕೆಲವೊಂದು ನಿಮಿಷ ಯೋಚಿಸಿ, ಮತ್ತೆ "ಈವೊತ್ತು ಪೈಸೂ ಇಲ್ಲ. ನಾಳೆ ಭೆಟ್ಟಿಯಾಗು 'ಹೊಟೆಲ್ ಡಿಪಲ್' ಗೊತ್ತಿದೆಯಲ್ಲವೆ ನಿನಗೆ? ಅಲ್ಲಿಗೇ ನಾಳೆಯ ದಿನ ಹತ್ತು ಗಂಟೆಗೆ ಬಾ! ಬರುತ್ತೀಯಲ್ಲವೆ?" ಎಂದ

"ಹೂಂ ಕೆಲಸ ಕೊಡುತ್ತೀರೇನ್ರಿ?"

"ಹೂಂ, ಹೂಂ ಹುಡುಕಿಕೊಡುತ್ತೇನೆ"

"ಹೋಗಲೋ ಹಾಗಾದರೆ?" ಎಂದು ನಿರಾಶೆಯಿಂದ ಕೇಳಿದ ಆ ಹುಡುಗ

"ಹೂಂ" ಎಂದು ನನ್ನ ಗೆಳೆಯ ನಿಟ್ಟುಸಿರೊಂದನ್ನು ಬಿಟ್ಟು ಪುನಃ ಕೇಳಿದ "ಎಲ್ಲಿ ಮಲಗುತ್ತೀಯೆ?"

"ಇಲ್ಲಿಯೆ ಎಲ್ಲಾದರೂ ಬೆಂಚಿನ ಮೇಲಾಗಲೀ, ಯಾವು-ದಾದರೊಂದು ಮರದ ಕೆಳಗಾಗಲೀ, ಅಂಗಡಿಯೊಂದರ ಕಟ್ಟೆಯ ಮೇಲಾಗಲೀ ಮಲಗುತ್ತೇನೆ." ಎಂದು ಆ ಹುಡುಗ ಹೊರಡಲಿಕ್ಕೆ

ಉದ್ಯುಕ್ತನಾದ ನಾನು ತೊಡಕಿನಲ್ಲಿ ಸಿಲುಕಿಕೊಂಡೆ. ಕೊನೆಗವನು ಪ್ರೇತಗತಿಯಿಂದ ಒಂದು ನಿಟ್ಟಿಗೆ ಹೋದ; ಹೋಗಿಬಿಟ್ಟ! ಮಂಜಿನಲ್ಲಿ ಬೆರೆತು ಹೋದ! ಕಾಣಲಿಲ್ಲ! ನಾವು ನಮ್ಮ ಹೋಟಲುಗಳಿಗೆ ಬಂದೆವು ನಾವೂ ಚಳಿಗಾಳಿಯಿಂದ ನಡುಗುತ್ತಿದ್ದೆವು.

ಗೆಳೆಯನೆಂದ "ಭಯಾನಕ ಚಳಿ! ಆ ಹುಡುಗನ ಹತ್ತಿರ ವಸ್ತ್ರಗಳು ತೀರ ತೀರ ಕಡಮೆ..."

"ಇದು ಸಂಸಾರ!" ಎಂದು ನಾನವನಿಗೆ ಸ್ವಾರ್ಥದ ತತ್ತ್ವ ಜ್ಞಾನ ಹೇಳಿದೆ "ನಡೆ ಮೊದಲು ಹಾಸಿಗೆಯ ಮೇಲೆ ಬಿದ್ದುಕೊಂಡು ಬೆಚ್ಚಗೆ ಮಲಗಿಕೊಳ್ಳೋಣ, ಆ ಮೇಲೆ ಎರಡನೆಯವರ ಚಿಂತೆ ಮಾಡೋಣ!"

ಉದಾಸೀನನಾಗಿ ಗೆಳೆಯನೆಂದ "ಸ್ವಾರ್ಥ! ಅದಕ್ಕೆ ಏನಾದರೂ ಹೇಳಿರಿ, ನಿರುಪಾಯವೆಂದಾದರೂ ಹೇಳಿರಿ, ನಿಷ್ಠುರತೆಯೆಂದಾದರೂ ಹೇಳಿರಿ, ನಿರ್ದಯತೆಯೆಂದಾದರೂ ಹೇಳಿರಿ!"

* * *

ನೈನೀತಾಲ ಸ್ವರ್ಗದ ಯಾವನೋ ಗುಲಾಮುಪಶುವಿನ ಪ್ರೇಮದ ಪುತ್ಥಳಿಯಾದ ಆ ಬಾಲಕ, ಮರುದಿನ ನಾವು ಹೇಳಿದ ವೇಳೆಗೆ ನಮ್ಮ ಹೋಟಲಿಗೆ ಬರಲಿಲ್ಲ. ನೈನೀತಾಲದ ನಮ್ಮ ಪ್ರವಾಸವನ್ನು ಮುಗಿಸಿಕೊಂಡು, ಆನಂದದಿಂದ ಮನೆಗೆ ಹಿಂತಿರುಗಿ ಹೋಗಲು ಹೊರಟೆವು. ಆ ಬಾಲಕನ ದಾರಿಕಾಯುವುದು ಆಗ ಅಗತ್ಯವಾದು ದೆಂದೆನಿಸಲಿಲ್ಲ.

ಮೋಟಾರಿನಲ್ಲಿ ಕುಳಿತುಕೊಳ್ಳುವಷ್ಟರಲ್ಲಿಯೆ ಸುದ್ದಿಯು ಬಂದಿತು—ಮಾರ್ಗದ ಬದಿಯಲ್ಲಿ ಒಂದು ಮರದ ಕೆಳಗೆ, ಪರ್ವತ ಪ್ರದೇಶದ ಒಬ್ಬ ಹುಡುಗನು ಚಳಿಯಿಂದ ಸೆಟೆದು ಸತ್ತನೆಂದು.

ಸಾಯುವುದಕ್ಕಾಗಿಯೆ ಅವನಿಗೆ ಆ ಸ್ಥಾನ, ಆ ಹತ್ತು ವರುಷಗಳ ವಯಸ್ಸು, ಆ ಕಾಲನ ಹರಿದ ಬಟ್ಟೆಗಳು ದೊರಕಿದ್ದವೇನೋ! ಜನಗಳ ಜಗತ್ತು ಇದೇ ಕಾಣಿಕೆಯನ್ನು ಅವನಿಗಿತ್ತು ಬಿಟ್ಟಿದ್ದಿತು!

ಆ ಬಡಹುಡುಗನ ಮುಖದ ಮೇಲೂ ಎದೆಯ ಮೇಲೂ ಮುಷ್ಟಿಗಳ ಮೇಲೂ ಪಾದಗಳ ಮೇಲೂ ಹಿಮದ ಸೆಲ್ಲೆಯವನ್ನು ಹೊದಿಸಿದಂತಾಗಿದ್ದಿತೆಂದೂ, ಪ್ರಕೃತಿದೇವಿಯು ಜಗತ್ತಿನ ಮರುಕದ ಸ್ಟೋಗಿನ ಮೇಲೆ ಬಿಳಿಯ ತಂಪಾದ ಕಫನಿಯನ್ನು ಹೊದಿಸಿರುವಳೇನೋ ಎಂಬಂತೆ ತೋರುತ್ತಿದ್ದಿತೆಂದೂ ಹೇಳುವವರು ಹೇಳುತ್ತಿದ್ದರು. ಕೇಳುವವರು ಕೇಳಿ 'ತಮ್ಮ ತಮ್ಮ ಭಾಗ್ಯ' ಎಂದುಕೊಳ್ಳುತ್ತಿದ್ದರು.

